ಕ್ಯಾಮರಾದ ಕಣ್ಣಿನಲ್ಲಿ ಸೆರೆಹಿಡಿದ ಕತ್ತಲು - ಬೆಳಕಿನ ದೃಶ್ಯ



ವಾಟರ್ ಕಲರ್‌ನಲ್ಲಿ ಮೂಡಿದ ಹಳ್ಳಿಗಾಡಿನ ದೃಶ್ಯ



# ಸೃಜನಶೀಲ ಕಲಾವಿದ ಗಣೇಶ

ಶಿರಸಿಯವರಾದ ಗಣೇಶ ವರ್ಗಾಸುರ, ದಾವಣಗೆರೆಯ ಆರ್ಟ್ ಸ್ಕೂಲ್‌ನಲ್ಲಿ ೧೯೯೫ ರಿಂದ ಮೂರು ವರ್ಷ ಕಲಾಭ್ಯಾಸ ನಡೆಸಿದ್ದಾರೆ. ವಾಟರ್ ಕಲರ್, ಕ್ಯಾನ್ವಾಸ್ ಪೇಂಟಿಂಗ್‌ನಲ್ಲಿ ನುರಿತವರು. ಸಾವಿರಕ್ಕೂ ಹೆಚ್ಚು ಕಲಾಕೃತಿಗಳನ್ನು ರೂಪಿಸಿರುವ ಗಣೇಶ ಅನೇಕ ಬಹುಮಾನ ಗಳನ್ನು ಪಡೆದಿದ್ದಾರೆ. ಇವರ ಇನ್ನೊಂದು ಒಳ್ಳೆಯ ಹವ್ಯಾಸ ಅಂದರೆ ಛಾಯಾಗ್ರಹಣ. ಇವರು ಖ್ಯಾತ ನಿರ್ದೇಶಕರಾದ ಸುನಿಲ್‌ಕುಮಾರ ದೇಸಾಯಿ ಹಾಗೂ ಉಪೇಂದ್ರ ಅವರೊಂದಿಗೆ ಸಿನಿಮಾದಲ್ಲಿ ಛಾಯಾಗ್ರಾಹಕರಾಗಿ ಕೆಲಸ ಮಾಡುತ್ತಿದ್ದರು. ಸಾಕಷ್ಟು ಸಿನಿಮಾ, ಕಿರುತೆರೆಯಲ್ಲಿ ಛಾಯಾಗ್ರಾಹಕ ಕೆಲಸದಲ್ಲಿ ಅನುಭವ ಪಡೆದುಕೊಂಡರು. ಕ್ಯಾಮರಾದಲ್ಲಿ ಕತ್ತಲು, ಬೆಳಕು ಜೊತೆಯಾಗಿ ಸೆರೆಹಿಡಿಯುವ ಕುಶಲತೆ ಹೊಂದಿದ್ದಾರೆ. ಪೇಂಟಿಂಗ್ ಕೂಡ ಒಂದು ರೀತಿಯಲ್ಲಿ ಫೋಟೋ ತರಹ ಇರುವುದು ಇವರ ವಿಶೇಷ ಕೈಚಳಕವಾಗಿದೆ. ಸಾಗರ ಫೋಟೋಗ್ರಫಿ ಸ್ಪರ್ಧೆಯಲ್ಲಿ ಸತತ ಎರಡು ಬಾರಿ ಬಹುಮಾನ ಪಡೆದಿದ್ದಾರೆ. ಸುಮಾರು ಹತ್ತು ಬಾರಿ ಏಕವ್ಯಕ್ತಿ ಪ್ರದರ್ಶನ ಮಾಡಿ ಪ್ರಶಂಸೆ ಪಡೆದಿದ್ದಾರೆ.

ಲೇಖನ: ಆದರ್ಶ ಪೈ, ವ್ಯಂಗ್ಯಚಿತ್ರಕಾರ
ಪೈಚಾಳ, ಟಿ. ಎಸ್. ಎಸ್. ರಸ್ತೆ, ಶಿರಸಿ - ೫೮೧೪೦೧ (ಉ. ಕ.)



ಕುಂಚದಲ್ಲಿ ಸೆರೆಹಿಡಿದ ವಾಟರ್ ಕಲರ್ ಪೇಂಟಿಂಗ್



ಪೇಂಟಿಂಗ್ ತರಹ ಕಾಣುತ್ತೆ ಆದರೆ ಇದು ಪೇಂಟಿಂಗ್ ಅಲ್ಲ ಫೋಟೋ

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಹರಿಣಿ, ರವೀಂದ್ರ, ಶ್ರೀಹರಿ, ಮೋನಪ್ಪ, ಜಿ. ಎಂ. ಬೊಮ್ನಳ್ಳಿ,
ಎಸ್. ತಾರಾನಾಥ್, ಬಿ. ವಿಲ್ಸನ್, ರಾಂಚಂದ್ರ ಕೊಪ್ಪಲು
ಮುಖಚಿತ್ರ : 'ನಾಯಿನೆರಳು' ಚಲನಚಿತ್ರದ ಒಂದು ದೃಶ್ಯ
ಚಿತ್ರದಲ್ಲಿ : ಪವಿತ್ರಾ ಲೋಕೇಶ್ ಮತ್ತು ಅನನ್ಯಾ ಕಾಸರವಳ್ಳಿ
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಒಂದು ತಿಂಗಳಲ್ಲಿ ಎಷ್ಟೊಂದು ಘಟನೆಗಳು, ಆಕಸ್ಮಿಕಗಳು ಮತ್ತು ಅನಾಹುತಗಳು ಜರುಗಿಹೋಗುತ್ತವೆ ಎಂದರೆ ಅವುಗಳಲ್ಲಿ ಯಾವುದನ್ನು ಪ್ರಮುಖವೆಂದು ಗುರುತಿಸಬೇಕೆಂಬುದು ಕ್ಲಿಷ್ಟವಾಗಿ ಬಿಡುತ್ತದೆ. ಸರಿಯಾದ ದಾರಿಯಲ್ಲಿ ನಡೆದೆವು, ಇದರ ಪರಿಣಾಮವು ಜನರಿಗೆ ಉಲ್ಲಾಸ ತರುತ್ತದೆ, ಇದೊಂದು ಸ್ಮರಣೀಯ ಸಾಹಸ, ಇಂಥದು ಮತ್ತೆ ಮತ್ತೆ ನಡೆಯಲಿ ಎಂದು ಭಾವಿಸಬಹುದಾದ ಅಥವಾ ಸಂತಸಪಡಬಹುದಾದ ಸಂಗತಿಗಳ ಕೊರತೆ ಬೆವರಿಳಿಸುತ್ತದೆ. ಪ್ರತಿಯೊಂದನ್ನೂ ಟೀಕಿಸುವುದೊಂದೇ ನಮ್ಮ ಬರಹಗಳ ಉದ್ದೇಶವೇನೋ ಎಂದು ಭಾಸವಾದರೆ ಆಶ್ಚರ್ಯವಿಲ್ಲ. ನೇತ್ಯಾತ್ಮಕವಲ್ಲದ ಎಷ್ಟು ವಿದ್ಯಮಾನಗಳತ್ತ ಬೆರಳು ಮಾಡಿ ತೋರಿಸಲು ಸಾಧ್ಯವಿದೆ ? ಮಂಗಳೂರು, ಬಾಬಾಬುಡನ್‌ಗಿರಿ, ಮಣಿಪುರ, ಕಾಶ್ಮೀರ ಹೀಗೆ ಯಾವುದನ್ನು ಬರೆಯುವುದು, ಯಾವುದನ್ನು ಮರೆಯುವುದು ಎಂಬ ಖಿನ್ನತೆ ಅನಿವಾರ್ಯವಾಗುತ್ತಿದೆ. ಹೋಗಲಿ, ನೊಬೆಲ್ ಮತ್ತು ಬುಕರ್ ಪಾರಿತೋಷಕಗಳನ್ನು ಪಡೆದವರನ್ನು ಅಭಿನಂದಿಸಿ ಸಂತೋಷ ವ್ಯಕ್ತಪಡಿಸೋಣವೆಂದರೆ ನಮ್ಮ ದೇಶದವರು ಅವನ್ನು ಪಡೆಯುವ ಕಾಲ ಇನ್ನೂ ಸನ್ನಿಹಿತವಾಗಿಲ್ಲ. ಕಿರಣ್ ದೇಸಾಯಿ ನಮ್ಮ ದೇಶದ ಬಗ್ಗೆ ಬರೆದಿದ್ದರೂ ನಮ್ಮ ದೇಶದವಳೆಂದು ಹೇಳಲು ಏಕೋ ಸಂಕೋಚ; ಏಕೆಂದರೆ, ಆಕೆಯ ಇರುವಿಕೆ, ಬರೆಯುವಿಕೆ, ಎಲ್ಲಾ ದೊಡ್ಡಣ್ಣನ ದೇಶದಲ್ಲಿ. ನಮ್ಮ ರಾಜ್ಯದವರಾದ ರುತ್ ಮನೋರಮಾ ಪಡೆದ ಪರ್ಯಾಯ ಜೀವನ ಪುರಸ್ಕಾರಕ್ಕಾಗಿ ಅವರನ್ನು ಅಭಿನಂದಿಸಿ ತೃಪ್ತಿ ಹೊಂದಬಹುದು. ಆದರೆ ಸಿ. ದಿನಕರ್ ಅದಕ್ಕೂ ಒಂದು ಒಗ್ಗರಣೆ ಹಾಕಿದ್ದಾರೆ ಎಂಬುದನ್ನು ಕ್ಷಣಕಾಲ ಮರೆಯಬೇಕಾಗುತ್ತದೆ. ಏಕೆಂದರೆ ವೀರಪ್ಪನ್ ಹಾವಳಿಯ ಕಾಲದಲ್ಲಿ ಬಂಧಿತರಾಗಿದ್ದ ಮಹಿಳೆಯರಿಗೆ ಸಂಬಂಧಿಸಿದಂತೆ ರುತ್ ಅವರನ್ನು ದಿನಕರ್ ಮೈಸೂರಿಗೆ ತೆರಳಬೇಕೆಂದು ವಿನಂತಿಸಿಕೊಂಡಾಗ ದಲಿತರ, ಕಡುಬಡವರ, ನಿರ್ಗತಿಕರ ಸೇವಕಿಯಾದ ಶ್ರೀಮತಿ ರುತ್ ಅವರು ತಮಗೆ ಹವಾನಿಯಂತ್ರಿತ ವಾಹನವನ್ನು ಕಳಿಸಿಕೊಡಲಿಲ್ಲವೆಂದು ಮುನಿಸಿಕೊಂಡಿದ್ದರಂತೆ ! ಬಂಗ್ಲಾದೇಶದ ಗ್ರಾಮೀಣ ಜನರಿಗೆ, ವಿಶೇಷವಾಗಿ ಮಹಿಳೆಯರಿಗೆ, ಸ್ವಂತಿಕೆ-ಉದ್ಯೋಗ-ಅಭಿಮಾನ ದೊರಕಿಸಿಕೊಡಲು ಶ್ರಮಿಸುತ್ತಿರುವ ಮುಹಮ್ಮದ್ ಯೂನುಸ್ ನೊಬೆಲ್ ಶಾಂತಿ ಪುರಸ್ಕಾರವನ್ನು ಪಡೆದುದನ್ನು ನೆನೆದು ಸ್ವಲ್ಪ ಹಸನ್ಮುಖಿಗಳಾಗಬಹುದು. ನಮ್ಮ ಸ್ವ-ಸಹಾಯ ಗುಂಪುಗಳು ಯೂನುಸ್ ಅವರ ಕಾರ್ಯವಿಧಾನಗಳನ್ನು ಎಷ್ಟರಮಟ್ಟಿಗೆ ಅನುಸರಿಸುತ್ತಿವೆಯೆಂಬುದನ್ನು ಯಾರಾದರೂ ಪರಿಣತರು ವಿಶ್ಲೇಷಣೆ ಮಾಡಿ ತಿಳಿಸಿಕೊಡಬೇಕಾಗಿದೆ.

ಬುಷ್ ಮಹಾರಾಜ ಫೋನ್ ಮಾಡಿದರೆ ಪ್ರಧಾನಿ ಮನಮೋಹನ ಸಿಂಗ್ ಎದ್ದು ನಿಂತು ನಮ್ರವಾಗಿ ತಲೆಬಗ್ಗಿಸಿ ಮಾತನಾಡುತ್ತಾರೆಂದು ಸದ್ಯದಲ್ಲೇ ಒಂದಷ್ಟು ಜೋಕುಗಳು ಸೃಷ್ಟಿಯಾಗಬಹುದು. ವೆನಿಝೂಲಾಕ್ಕೆ ಮತ ನೀಡಿ ಆ ದೇಶವನ್ನು ವಿಶ್ವಸಂಸ್ಥೆಯ ಭದ್ರತಾ ಮಂಡಲಿಗೆ ಚುನಾಯಿಸಿದರೆ ಭಾರತ-ಅಮೆರಿಕಾ ನಡುವಣ ಪರಮಾಣು ಕೇಂದ್ರಿತ ಒಪ್ಪಂದವು ನೀರುಪಾಲಾಗುತ್ತದೆಂದು ದಬಾವಣೆಯನ್ನು ಫೋನಿನಲ್ಲಿ ಕೇಳಿಕೊಂಡು 'ಬಾಯಿ ಮುಚ್ಚು' ಎಂದು ಹೇಳದೆಹೋದ ವ್ಯಕ್ತಿ ನಮ್ಮ ಪ್ರಧಾನಿಯಾಗಿ ಏಕಿರಬೇಕೋ ಎನಿಸುತ್ತದೆ. ಕ್ಯೂಬಾದಲ್ಲಿ ಶವೇಜ್‌ರನ್ನು ಭೇಟಿಯಾಗಿದ್ದ ನಮ್ಮ ಪ್ರಧಾನಿ, ಬುಷ್ ಬಾಯಿ ಮಾಡಿದರೆ ಗಂಟಲು ಒಣಗಿಸಿಕೊಳ್ಳುವುದು ಅನಗತ್ಯ. ಅದು ಅವರಿಗೆ ಅನಿವಾರ್ಯವಾದರೆ ಪ್ರಧಾನಿಯ ಸ್ಥಾನದಿಂದ ತೆರಳಬೇಕೆಂದು ಅವರಿಗೆ ಬೆಂಬಲ ನೀಡುತ್ತಿರುವ ಎಡ ಪಕ್ಷಗಳು ಹೇಳಬೇಕಾದ್ದು ಆ ಪಕ್ಷಗಳ ಜವಾಬ್ದಾರಿಯಾಗಿದೆ. ಏಕೆಂದರೆ ಇದು ದೇಶದ ಗೌರವದ ಪ್ರಶ್ನೆ, ಸಾರ್ವಭೌಮತ್ವದ ಪ್ರಶ್ನೆ. ನಮ್ಮ ದೇಶದ ಪ್ರತಿನಿಧಿಯನ್ನು ವಿಶ್ವಸಂಸ್ಥೆಯ ಮಹಾಕಾರ್ಯದರ್ಶಿಯಾಗಿ ಆಯ್ಕೆ ಮಾಡಬೇಕೆಂಬ ಮನವಿ ನೀಡಿದಾಗ ಅಮೆರಿಕಾದ ಅಧ್ಯಕ್ಷ ಅದರ ವಿರುದ್ಧವಾಗಿ ಮತ ಚಲಾಯಿಸಿದ. ಆದರೆ ಲೆಕ್ಕಕ್ಕೆ ಬಾರದ ಗ್ವಾಟೆಮಾಲಾಕ್ಕೆ ತನ್ನ ಪರ ಮತ ನೀಡಬೇಕೆಂದು ಬುಷ್ ಆಗ್ರಹಿಸಿದರೆ ಮನಮೋಹನ ಸಿಂಗರಿಗೆ ಎದೆ ಧಸಕ್ಕೆನ್ನುತ್ತದೆಯಾದರೆ ಅವರು ಸುಮ್ಮನೆ ಹಾರ್ವರ್ಡ್‌ಗೋ ಸ್ಟ್ಯಾನ್‌ಫರ್ಡ್‌ಗೋ ಹೋಗಿ ಅಮೆರಿಕಾದ ಆರ್ಥಿಕ ಗಟ್ಟಿತನದ ಬಗ್ಗೆ ಹುಡುಗರಿಗೆ ಪಾಠ ಹೇಳಿಕೊಂಡಿರುವುದು ಒಳ್ಳೆಯದು. ಭಾರತಕ್ಕೆ ಶವೇಜ್ ಮಿತ್ರನಾಗಬಲ್ಲ, ಗ್ವಾಟೆಮಾಲಾ ಅಲ್ಲ.

ಕಾಶ್ಮೀರದ ಇಂದಿನ ಭೀಕರತೆ ಎಂದರೆ ಯಾವ ರಾಜಕೀಯ ವ್ಯಕ್ತಿ ಅಥವಾ ಪಕ್ಷವೂ ನೇರವಾಗಿ ಅಲ್ಲಿನ ಜನರಿಗೆ ಮುಖಕೊಟ್ಟು ಮಾತನಾಡುವ ಸ್ಥಿತಿಯಲ್ಲಿ ಇಲ್ಲದಿರುವುದು. ಪರಕೀಯತೆಯ ಪ್ರಜ್ಞೆ ಜನರಲ್ಲಿ ಅಷ್ಟು ಗಾಢವಾಗಿ ಬೇರೂರಿದೆ. ಪಾರ್ಲಿಮೆಂಟಿನ ಮೇಲೆ ಬಾಂಬ್ ಧಾಳಿ ನಡೆಸಿದ್ದವರಿಗೆ ನೇರ ಬೆಂಬಲ ನೀಡಿದ್ದನೆನ್ನಲಾದ ಅಫ್‌ಜಲ್ ಗುರು ನಿಜಕ್ಕೂ ಅವರಿಗೆ ಗುರುವಾಗಿದ್ದಿರಬೇಕು. ಆತನನ್ನು ಗಲ್ಲಿಗೇರಿಸಬೇಕೆಂದು ನ್ಯಾಯಾಲಯವು ನೀಡಿರುವ ತೀರ್ಪಿನ ಬಗ್ಗೆ ಅವ್ಯಾಹತ ಚರ್ಚೆ ನಡೆಯುತ್ತಿದೆ. ರಾಷ್ಟ್ರಾಧ್ಯಕ್ಷರು ಆಪಾದಿತನಿಗೆ

೧೦ನೇ ಪುಟಕ್ಕೆ




ಸಂಪುಟ-೮ ಸಂಚಿಕೆ-೪ ನವೆಂಬರ್ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com


# ಉಳ್ಳವರ ದರ್ಪ ಮತ್ತು ಪಿಡುಗು

**ಸಂಪಾದಕೀಯ**

ಆಧುನಿಕ ಯುಗದಲ್ಲಿ ಉಳ್ಳವರು ಶಿವಾಲಯವ ಮಾಡುವುದು ಕೆಲವೇಳೆ ಮಾತ್ರ. ಪೋಪ್‌ನಂತಹವನ ರಕ್ಷಣೆ ಪಡೆಯಲು ಅದು ಅವಶ್ಯಕ. ಶಿವಾಲಯದ ಜೊತೆಗೆ ಬಾಂಬುಗಳ ಆಲಯವನ್ನು ಸಹ ಅವರು ಸಜ್ಜುಗೊಳಿಸಿಕೊಳ್ಳುತ್ತಾರೆ. ಅದರಿಂದ ಪ್ರಪಂಚದ ಲಯವಾದರೆ ಅವರಿಗೆ ನಿದ್ದೆ ಕೆಡುವುದಿಲ್ಲ. ವಿಶೇಷವೆಂದರೆ, ಉಳ್ಳವರು, ತಾವು ಮಾಡುವುದನ್ನು, ಅಷ್ಟೊಂದು ಹೊಂದಿರದವರು ಬೇರೆ ಯಾರಾದರೂ ಮಾಡಿದರೆ ಅಥವಾ ಮಾಡುವ ಸೂಚನೆ ಇದ್ದರೆ ಕೂಡಲೆ ಸಿಡಿದೇಳುತ್ತಾರೆ, ನಿರ್ಬಂಧಗಳನ್ನು ಹೇರುತ್ತಾರೆ, ಯುದ್ಧ ಘೋಷಿಸುವ ಹಂತವನ್ನೂ ತಲುಪುತ್ತಾರೆ. ಬಾಂಬು ಮಾಡದಿರುವಂತಹ ಇರಾನ್ ಸಹ ಅವರ ಕಣ್ಣಿಗೆ ವಿಪತ್ಕಾರಕ ಶತ್ರುವಾಗಿ ಕಾಣುತ್ತದೆ. ಹೀಗಿರುವಾಗ ಯಃಕಶ್ಚಿತ್ ಉತ್ತರ ಕೊರಿಯ ಪರಮಾಣು ಅಸ್ತ್ರವನ್ನು ಹೊಂದುವ ಸ್ಥಿತಿ ತಲುಪಿದರೆ ದೊಣೆನಾಯಕನ ನೇತೃತ್ವದಲ್ಲಿ ವಿಶ್ವವೆಲ್ಲಾ ಆ ದೇಶದ ಮೇಲೆ ಎರಗದಿರುವುದು ಶಕ್ಯವೇ ?

ಪರಮಾಣು ಅಸ್ತ್ರವನ್ನು ಯಾವ ದೇಶ ಮಾಡಿದರೂ ಅದು ಖಂಡನೀಯ, ಭಾರತವೂ ಸೇರಿದಂತೆ. ಅದು ಮಾನವತೆಗೆ ಮಾಡುವ ಅಪಚಾರ. ಅದರಿಂದ ಸ್ವ-ರಕ್ಷಣೆಯೂ ಇಲ್ಲ, ಪರ-ರಕ್ಷಣೆಯೂ ಇಲ್ಲ. ಅದು ನಾಗರಿಕತೆಯ ಪರಮಶತ್ರು. ಅಮೆರಿಕಾ, ರಷ್ಯಾ, ಬ್ರಿಟನ್, ಫ್ರಾನ್ಸ್ ಮತ್ತು ಚೀಣಾ ಪರಮಾಣು ಅಸ್ತ್ರದ ಅಧಿಕೃತ ಮಾಲಿಕರು, ನಿರ್ವಾಹಕರು. ಅವರ ಕೊಲೆಗಡುಕ ಬಾಂಬು ''ಕಾನೂನುಬಾಹಿರ'' ಅಲ್ಲ, ಅಂತರರಾಷ್ಟ್ರೀಯ ಒಪ್ಪಂದಗಳಿಗೆ ವಿರೋಧವಲ್ಲ. ಭಾರತ ಮತ್ತು ಪಾಕಿಸ್ತಾನ ಅನಧಿಕೃತ ಬಾಂಬುಧಾರಿಗಳು, ಆದರೆ ಅಂತರರಾಷ್ಟ್ರೀಯ ಒಪ್ಪಂದಗಳು ಆ ದೇಶಗಳ ಮೇಲೆ ಗದಾಪ್ರಹಾರ ಮಾಡಲು ಬಳಕೆಗೆ ಬಂದಿಲ್ಲ. ಆ ದೇಶಗಳ ಸಭ್ಯತೆ ಇದಕ್ಕೆ ಕಾರಣವಿರಬೇಕು, ಅಥವಾ ಅಮೆರಿಕಾದ ಕೆಂಗಣ್ಣಿಗೆ ಈ ದೇಶಗಳು ಆಸ್ವಾದಯುಕ್ತ ಬೆಣ್ಣೆಯಂತೆ ಕಂಡಿರಬೇಕು. ಇಸ್ರೇಲ್ ಬಳಿ ಬಾಂಬುಗಳಿವೆ, ಅದು ವಿಶ್ವಕ್ಕೆ ತಿಳಿದಿದೆ, ಆದರೆ ಆ ದೇಶವನ್ನು ದಂಡಿಸುವಂತಿಲ್ಲ; ಏಕೆಂದರೆ, ಅಮೆರಿಕಾ ಅದರ ನಿಯಾಮಕ ಮತ್ತು ರಕ್ಷಕ. ಈಜಿಪ್ಟ್, ಬ್ರೆಜಿಲ್ ಮತ್ತು ದಕ್ಷಿಣ ಆಫ್ರಿಕಾ ಬಾಂಬು ಮಾಡಲು ಸಮರ್ಥರು, ಆದರೆ ಆ ಹಕ್ಕನ್ನು ಬಿಟ್ಟುಕೊಟ್ಟಿವೆ.

ಇರಾಕಿನಲ್ಲಿ ಮಾರಕಾಸ್ತ್ರಗಳಿದ್ದುವೆಂಬ ಕೂಗೆಬ್ಬಿಸಿ ಅಮೆರಿಕಾ ಆ ದೇಶವನ್ನು ಧ್ವಂಸಗೊಳಿಸಿದೆ. ಬ್ರಿಟನ್ನಿನ 'ಲ್ಯಾನ್‌ಸೆಟ್' ಪತ್ರಿಕೆಯ ವರದಿಯ ಪ್ರಕಾರ ಈವರೆಗೆ ಅಲ್ಲಿ ಆರೂವರೆ ಲಕ್ಷ ಮಂದಿಯನ್ನು ಅಮೆರಿಕಾ ಬಣವು ಸಾಯಿಸಿದೆ. ಪ್ರಜಾಪ್ರಭುತ್ವ ಸಂಸ್ಕೃತಿಯ ಅವತಾರ ಆಗಬೇಕಾದರೆ ಅಂತಹ ರಣಹೋಮ ಅನಿವಾರ್ಯವೆಂಬುದು ಬುಷ್ ಸಿದ್ಧಾಂತ. ಆ ದೇಶದಲ್ಲಿ ಪರಮಾಣು ಬಾಂಬು ಇದ್ದಿದ್ದರೆ ಅಮೆರಿಕಾ ಆ ದೇಶದ ಮೇಲೆ ಅತಿಕ್ರಮಣ ಮಾಡಲು ಹಿಂಜರಿಯುತ್ತಿತ್ತೆಂದು ಉತ್ತರ ಕೊರಿಯ ಭಾವಿಸಿದೆ ಮತ್ತು ತನ್ನ ಮೇಲಿನ ಆಕ್ರಮಣದ ಸಾಧ್ಯತೆಯನ್ನು ತಳ್ಳಿಹಾಕಲು ತಾನು ಬಾಂಬು ಮಾಡಿಕೊಂಡಿರುವುದಾಗಿ ತಿಳಿಸಿದೆ. ಇನ್ನಷ್ಟು ಬಾಂಬುಗಳನ್ನು ಮಾಡಿಕೊಳ್ಳುವ ತರಾತುರಿಯಲ್ಲೂ ಇದೆ. ಉತ್ತರ ಕೊರಿಯ ಈವರೆಗೆ ಯಾವ ದೇಶದ ಮೇಲೂ ಆಕ್ರಮಣ ಮಾಡಿಲ್ಲ ಮತ್ತು ಅಮೆರಿಕಾವನ್ನು ಹೊರತುಪಡಿಸಿ ಬೇರಾವ ರಾಷ್ಟ್ರವೂ ಈವರೆಗೆ ಅಣ್ವಸ್ತ್ರವನ್ನು ಬೇರೆ ದೇಶಗಳ ಮೇಲೆ ಪ್ರಯೋಗಿಸಿಲ್ಲ. ಅವು ಕೇವಲ ಪ್ರಯೋಗಗಳನ್ನು ನಡೆಸಿವೆ, ಅಷ್ಟೆ. ಉತ್ತರ ಕೊರಿಯ ಅಣ್ವಸ್ತ್ರ ಹೊಂದುವುದರಿಂದ ಆಗ್ನೇಯ ಏಷ್ಯಾ ವಲಯದಲ್ಲಿ ಅಸ್ಥಿರತೆ ಉಂಟಾಗುತ್ತದೆಂದು ಅಮೆರಿಕಾ ಹೇಳಿದೆ. ತಾನು ಹೊಂದಿದರೆ ಉಂಟಾಗದ ಅಸ್ಥಿರತೆ, ಉತ್ತರ ಕೊರಿಯ ಹೊಂದುವುದರಿಂದ ಏಕೆ ಮತ್ತು ಹೇಗೆ ಉಂಟಾಗುತ್ತದೆಂಬುದನ್ನು ಅಮೆರಿಕಾ ವಿವರಿಸಿಲ್ಲ. ಬೇರೆ ರಾಷ್ಟ್ರಗಳು ಮಾಡಬಹುದಾದ ಧಾಳಿಗೆ ಪ್ರತಿಬಂಧಕವೆಂದು ಅಣ್ವಸ್ತ್ರಗಳನ್ನು ''ಉಳ್ಳವರು'' ವ್ಯಾಖ್ಯಾನಿಸಿದ್ದಾರೆ. ಅದನ್ನೇ ಅವರು 'ಡೆಟರೆನ್ಸ್' ಎಂದು ಕರೆಯುವುದು. ''ಭಯೋತ್ಪಾದನಾ ಶಕ್ತಿಯಲ್ಲಿ ಸಮಾನತೆ'' ಎಂದೂ ಇದನ್ನು ಗುರುತಿಸಬಹುದು (ಬ್ಯಾಲೆನ್ಸ್ ಆಫ್ ಟೆರರ್). ತಾನು ಟೆರರಿಸ್ಟ್ ಆಗಬಹುದು, ಒಸಾಮಾ ಆಗಕೂಡದು ಮತ್ತು ಉತ್ತರ ಕೊರಿಯ ಅತ್ತ ಗಮನಹರಿಸಕೂಡದು; ಇದು ಅಂತರರಾಷ್ಟ್ರೀಯ ಕಾನೂನಿನ ವಿಪರ್ಯಾಸ.

ಸ್ವಾರಸ್ಯವೆಂದರೆ, ಭಾರತವು ಅಮೆರಿಕಾದೊಡನೆ ದನಿಗೂಡಿಸಿ ಉತ್ತರ ಕೊರಿಯಾವನ್ನು ಛೇಡಿಸುವುದು. ಈವರೆಗೆ ಏಕೈಕ ಆಪ್ತಮಿತ್ರನಾಗಿ ಚೀಣಾ ಉತ್ತರ ಕೊರಿಯಾಕ್ಕೆ ಬೆಂಬಲ ನೀಡುತ್ತಿತ್ತು. ಆದರೆ ಅಮೆರಿಕಾದ ಮಾರುಕಟ್ಟೆಯ ರುಚಿ ಈ ಮೈತ್ರಿಗಿಂತಲೂ ಹೆಚ್ಚು ಸ್ವಾದುವಾಗಿರುವುದರಿಂದ ಈಗ ಉತ್ತರ ಕೊರಿಯಾಕ್ಕೆ ಎಚ್ಚರಿಕೆ ನೀಡುತ್ತಿದೆ. ಅಣ್ವಸ್ತ್ರಗಳನ್ನು ಯಾರೆಂದರೆ ಅವರು ಮಾಡಲು ಹೊರಟರೆ ನಾಳೆ ಭಯೋತ್ಪಾದಕರ ಕೈಗೆ ಅವು ಎಟಕಬಹುದೆಂಬ ಭೀತಿ ಅಮೆರಿಕಾವನ್ನು ಬಾಧಿಸುತ್ತಿದೆ. ಅದು ಸಹಜವಾದ ಭೀತಿಯೂ ಹೌದು. ಆದರೆ ತಾನು ಸಂಪೂರ್ಣ ಅಣ್ವಸ್ತ್ರ ನಿಶ್ಶಸ್ತ್ರೀಕರಣದತ್ತ ಚಲಿಸದಿರುವುದಕ್ಕೆ ಯಾವ ಬಲವಾದ ಕಾರಣವನ್ನು ಅಮೆರಿಕಾ ನೀಡುತ್ತಿಲ್ಲ. ಐದು ಪ್ರಬಲ ರಾಷ್ಟ್ರಗಳು ಅಣ್ವಸ್ತ್ರಗಳ ಕಾಪಿನಲ್ಲಿ ಇಡೀ ವಿಶ್ವವನ್ನು ನಿಯಂತ್ರಿಸುವುದು ನಾಗರಿಕತೆಯ ಲಕ್ಷಣವಾಗುವುದಿಲ್ಲ. ಅಣ್ವಸ್ತ್ರಗಳು ಹರಡದಂತಿರಬೇಕೆಂದು ಒಂದು ಅಂತರರಾಷ್ಟ್ರೀಯ ಒಪ್ಪಂದವಿದೆ. ಅದು ಏಕಪಕ್ಷೀಯವೆಂಬ ಕಾರಣಕ್ಕೆ ಭಾರತ ಅದನ್ನು ಅಂಗೀಕರಿಸಿಲ್ಲ (ಆದ್ದರಿಂದ ಭಾರತದ ಬಾಂಬು ಕಾನೂನು ವಿರೋಧವಲ್ಲ). ಮೂರು ವರ್ಷಗಳ ಹಿಂದೆ ಉತ್ತರ ಕೊರಿಯ ಆ ಒಪ್ಪಂದದಿಂದ ಹಿಂತೆಗೆಯಿತು. ಹಿಂತೆಗೆಯಲು ವಿಧಿಸಲಾಗಿರುವ ಷರತ್ತುಗಳನ್ನು ಆ ದೇಶ ಪಾಲಿಸಿತ್ತು. ಆದಾಗ್ಯೂ ಅದರ ಬಾಂಬು ಕಾನೂನಿಗೆ ವಿರೋಧವಾದದ್ದೆಂಬ ಅಬ್ಬರ ಕೇಳಿಬರುತ್ತಿದೆ. ಸುಲಭವಾಗಿ ಆ ದೇಶವನ್ನು ಬಗ್ಗುಬಡಿಯಲು ಸಾಧ್ಯವಾಗದಿರಬಹುದುದೆಂಬ ಅಂಶವು ಅಮೆರಿಕಾಕ್ಕೆ ಮೆಣಸಿನಕಾಯಿ ಇಟ್ಟಂತಾಗಿದೆ. ಈಗ ಜಾರಿಯಲ್ಲಿರುವ ಅಂತರರಾಷ್ಟ್ರೀಯ ಒಪ್ಪಂದದ ಪ್ರಕಾರ ಅಣ್ವಸ್ತ್ರಗಳನ್ನು ಹೊಂದಿರುವ ಐದು ಪ್ರಬಲ ರಾಷ್ಟ್ರಗಳು ತಮಗೆ ಸರಿಯೆನಿಸಿದರೆ ಬೇರೆ ತಮ್ಮ ಮಿತ್ರರಾಷ್ಟ್ರಗಳಿಗೆ ಆ ಅಸ್ತ್ರಗಳನ್ನು ರವಾನಿಸಬಹುದು. ಅಂದರೆ ಉತ್ತರ ಕೊರಿಯಾಕ್ಕೆ ಬೇಕಾದರೆ ಚೀಣಾ ಅಣ್ವಸ್ತ್ರಗಳನ್ನು ರವಾನಿಸಬಹುದಿತ್ತು. ಆದರೆ ಉತ್ತರ ಕೋರಿಯ ಸ್ವತಃ ಅವನ್ನು ಮಾಡುವಂತಿಲ್ಲ! ಈ ನಿಬಂಧವು ಏಕಿದೆ ? ಭೂಭಾಗದಲ್ಲಿ ಎಲ್ಲಿಗಾದರೂ ಅವನ್ನು ರವಾನಿಸಿ ನೆರೆರಾಷ್ಟ್ರಗಳನ್ನು ಹಿಡಿತದಲ್ಲಿಟ್ಟುಕೊಳ್ಳಲು ಅಲ್ಲದೆ ಮತ್ತೇನು ? ಉದಾಹರಣೆಗೆ, ಅಮೆರಿಕಾವು ತನ್ನ ಕುನ್ನಿಮರಿಯಾದ ಗ್ವಾಟೆಮಾಲಾಕ್ಕೆ ಅಣ್ವಸ್ತ್ರಗಳನ್ನು ರವಾನಿಸಿ ವೆನಿಝುಯೆಲಾದ ಸ್ವಾತಂತ್ರ್ಯ ಹರಣ ಮಾಡಬಹುದು. ಇಂತಹ ಭಯವಿದ್ದುದರಿಂದ ಉತ್ತರ ಕೊರಿಯ ಉತ್ತರನ ಪೌರುಷ ಮೆರೆಯಲು ಅಣ್ವಸ್ತ್ರಗಳ ನಿರ್ಮಾಣದತ್ತ ಹೊರಟಿದೆ. ಅದರಿಂದ ರಕ್ಷಣೆ ದೊರೆಯುತ್ತದೋ, ಶಿಕ್ಷೆ ಕಾದಿದೆಯೋ ಮುಂದಿನ ದಿನಗಳಲ್ಲಿ ತಿಳಿಯುತ್ತದೆ.

ಅಣ್ವಸ್ತ್ರ ಹೊಂದುವುದರಿಂದ ಭಾರತದ ಪ್ರಾಬಲ್ಯವೇನೂ ಹೆಚ್ಚಿಲ್ಲ. ಅಮೇರಿಕಾಕ್ಕೆ ಶರಣಾಗುವ ಪ್ರಕ್ರಿಯೆ ಅಸಹ್ಯವಾಗಿ ಹೆಚ್ಚಿದೆ. ಆಂತರಿಕ ಅಶಾಂತಿ ಯಾವ ರೀತಿಯಲ್ಲೂ ಕಡಿಮೆಯಾಗಿಲ್ಲ. ಪಾಕಿಸ್ತಾನಕ್ಕೆ ಭಾರತದ ಬಾಂಬಿನ ಶಾಖವೇನೂ ತಟ್ಟಿಲ್ಲ. ಉತ್ತರ ಕೊರಿಯಾದ ಕತೆಯೂ ಅದೇ ಆಗಬಹುದು. ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಐದು ಕಾಯಂ ಸದಸ್ಯ ರಾಷ್ಟ್ರಗಳೇ ಅಣ್ವಸ್ತ್ರ ಹೊಂದಿರುವ ದುರುಳ ರಾಷ್ಟ್ರಗಳೂ ಆಗಿವೆ. ಅವರ ಯಾಜಮಾನ್ಯವೂ ನಿರಂತರವೆಂಬ ಭ್ರಮೆಗೆ ಆಗಾಗ ಪೆಟ್ಟು ಬೀಳುತ್ತಿರುತ್ತದೆ. ಈಗ ಉತ್ತರ ಕೊರಿಯ ಅಂತಹ ಪೆಟ್ಟು ನೀಡಿದೆ. ಆ ಸಣ್ಣ ನಿರುಪದ್ರವೀ ರಾಷ್ಟ್ರಕ್ಕೆ ಛೀಮಾರಿ ಹಾಕಲು ಅಡ್ಡಿಯಿಲ್ಲ, ಆದರೆ ಸಲ್ಲದ ಕಿರುಕುಳವನ್ನು ನೀಡುವುದು ಭ್ರಷ್ಟತೆ ಎನಿಸಿಕೊಳ್ಳುತ್ತದೆ. ಅಣ್ವಸ್ತ್ರಗಳಿಂದ ಬರುವ ಭೀತಿಯನ್ನು ಒಂದು ರಾಷ್ಟ್ರವನ್ನು ದಂಡಿಸುವುದರಿಂದ ತೊಡೆದುಹಾಕಲಾಗುವುದಿಲ್ಲ. ಎಲ್ಲ ರಾಷ್ಟ್ರಗಳೂ ಅಣ್ವಸ್ತ್ರಗಳ ಪೂರ್ಣ ನಿಷೇಧವನ್ನು ಅಂಗೀಕರಿಸಿ ಅಣ್ವಸ್ತ್ರ ನಿಶ್ಶಸ್ತ್ರೀಕರಣದ ಗುರಿಯತ್ತ ಸಾಗುವುದೊಂದೇ ಸೂಕ್ತ ಪರಿಹಾರ. ಸರ್ವಘಾತುಕ ಅಸ್ತ್ರಗಳಿಂದ ಸ್ವ-ದೇಶದ ರಕ್ಷಣೆ ಸಾಧ್ಯವೆಂಬುದು ತಿರಸ್ಕಾರ ಯೋಗ್ಯವಾದ ಐತಿಹ್ಯವಾಗಿದೆ.

[signature]

## ಭಾಷಾಶಾಸ್ತ್ರವನ್ನು ಮೀರಿದ ಅರ್ಥಶಾಸ್ತ್ರ

ಇತ್ತೀಚೆಗೆ ಕನ್ನಡ ಶಾಲೆಗಳಲ್ಲಿ ಮೊದಲ ವರ್ಷದಿಂದಲೇ ಇಂಗ್ಲಿಷ್ ಭಾಷೆಯನ್ನು ಕಲಿಸುವ ನಿರ್ಧಾರವನ್ನು ಸರ್ಕಾರ ಪ್ರಕಟಿಸಿದಂದಿನಿಂದ ಕರ್ನಾಟಕದ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಒಂದು ರೀತಿಯ ವಾಕ್‌ಯುದ್ಧ ಮತ್ತು ಸಂಘರ್ಷದ ವಾತಾವರಣವೇರ್ಪಟ್ಟಿದೆ. ಕನ್ನಡದ ಸಾಹಿತ್ಯಲೋಕವನ್ನು ಇಬ್ಭಾಗವಾಗಿ ಧ್ರುವೀಕರಿಸಿರುವ ಈ ಸಮಸ್ಯೆ ಮೇಲ್ನೋಟಕ್ಕೆ ಭಾಷಾ ಸಮಸ್ಯೆಯಾಗಿ ಕಂಡರೂ ಇದನ್ನು ಕೇವಲ ಭಾಷಾ ಸಮಸ್ಯೆಯೆಂದು ಸರಳೀಕರಿಸಲು ಸಾಧ್ಯವಿಲ್ಲ.

ಕನ್ನಡಶಾಲೆಯಲ್ಲಿ ಮೊದಲ ತರಗತಿಯಿಂದ ಇಂಗ್ಲಿಷ್ ಕಲಿಕೆಯನ್ನು ವಿರೋಧಿಸುತ್ತಿರುವ ಬಹುಪಾಲು ಸಾಹಿತಿಗಳು ವಯೋವೃದ್ಧರೂ, ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿದವರೂ ಆಗಿದ್ದಾರೆ. ತಮ್ಮ ವಾದವನ್ನು ಸಮರ್ಥಿಸಲು ಭಾಷಾ ವಿಜ್ಞಾನವನ್ನು, ಪರರಾಜ್ಯ ಮತ್ತು ದೇಶಗಳ ಅನುಭವವನ್ನು ಅವರು ಉದಾಹರಿಸುತ್ತಿದ್ದಾರೆ. ಇಂಗ್ಲಿಷ್ ಕಲಿಕೆಯ ಪರವಾಗಿರುವ ಸಾಹಿತಿಗಳೂ ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಗಣನೀಯ ಸಾಧನೆಗಳನ್ನು ಮಾಡಿರುವವರೇ. ಈ ನಾಡಿನ ಬಡವರ, ದಲಿತರ, ಗ್ರಾಮೀಣ ಜನಸಮುದಾಯದ ಆಸೆ, ಆಕಾಂಕ್ಷೆಗಳಿಗೆ ಇಂಗ್ಲಿಷ್ ಭಾಷಾ ಅಭ್ಯಾಸ ಅತ್ಯಗತ್ಯವೆಂದು ನಂಬಿದವರು. ಹಲವಾರು ಜನಪರ ಚಳುವಳಿಗೆ ನೇತಾರರಾದ ಈ ಸಾಹಿತಿಗಳು ಇಂಗ್ಲಿಷ್ ಭಾಷಾ ಕಲಿಕೆಯ ಮೂಲಕ ಜಗತ್ತಿನ ಉದ್ಯೋಗದ ಅವಕಾಶಗಳನ್ನು, ಜ್ಞಾನ ಸಂಚಯದ ಮಾರ್ಗಗಳನ್ನು ಪಡೆಯಬಹುದೆಂದು ಸಂಭ್ರಮಿಸುತ್ತಿರುವವರು.

ಈ ಎರಡೂ ಗುಂಪಿನ ಜನರ ಬುದ್ಧಿವಂತಿಕೆ, ವ್ಯಕ್ತಿತ್ವಗಳನ್ನು ಗೌರವಿಸುತ್ತಲೇ ಅವರ ವಿಚಾರಧಾರೆಯನ್ನು ಗಮನಿಸಿದಾಗ ಅದರಲ್ಲಿನ ಗೊಂದಲಗಳು ಸ್ಪಷ್ಟವಾಗುತ್ತವೆ. ಈ ವಿದ್ವಾಂಸರ ಮನೆಯ ಮಕ್ಕಳುಗಳ ವಿದ್ಯಾಭ್ಯಾಸದಲ್ಲಿ ಇಂಗ್ಲಿಷ್ ಭಾಷೆಯ ಪಾತ್ರವೇನಾಗಿದೆ, ಏನಾಗಬೇಕು – ಎಂಬುದು ಇಲ್ಲಿ ಚರ್ಚೆಯ ವಿಷಯವೇ ಅಲ್ಲ. ಆದರೆ ಹೊಟ್ಟೆತುಂಬಿದ ವಿದ್ಯಾವಂತ ವರ್ಗವೊಂದು ಬಡವರ, ದಲಿತರ ಪರವಾಗಿ ಅವರು ಏನನ್ನು ಓದಬೇಕು, ಏನು ಓದುವುದರಿಂದ ಅವರ ಪ್ರಗತಿಯ ಮೆಟ್ಟಿಲುಗಳು ಗೋಚರವಾದಾವು ಎಂಬುದರ ಚಿಂತನೆ ಮಾಡುತ್ತಿರುವುದು ಇಲ್ಲಿದೆ. ದಿನದಿಂದ ದಿನಕ್ಕೆ ಕಾವೇರುತ್ತಿರುವ ಇಂಗ್ಲಿಷ್ ಭಾಷಾ ಕಲಿಕೆಯ ಘರ್ಷಣೆ ವಾಸ್ತವದ ಕೆಲವು ಸತ್ಯಗಳನ್ನು ನಿರ್ಲಕ್ಷಿಸುತ್ತಿದೆಯೇ ಎಂಬ ಅನುಮಾನವುಂಟಾಗುತ್ತಿದೆ. ಭಾಷಾಶಾಸ್ತ್ರದ ವೈಜ್ಞಾನಿಕ ವಿಧಾನವನ್ನು ಇಲ್ಲಿನ ವಿದ್ವಾಂಸರು ಎಷ್ಟೇ ಗಟ್ಟಿಯಾಗಿ ಪ್ರತಿಪಾದಿಸಿದರೂ ಭಾಷಾಶಾಸ್ತ್ರದ ಲೆಕ್ಕಾಚಾರವನ್ನು ಮೀರಿದ ಅರ್ಥಶಾಸ್ತ್ರ ಈ ಸಮಸ್ಯೆಯ ಹಿಂದಿದೆ. ಈ ಅರ್ಥಶಾಸ್ತ್ರದ ಜಾಡಿನಲ್ಲೇ ಸರ್ಕಾರವೂ ತನ್ನ ರಾಜಕೀಯ ದಾಳಗಳನ್ನು ನಡೆಸುತ್ತಿದೆ.

ಮೊದಲ ತರಗತಿಯಲ್ಲೇ ಇಂಗ್ಲಿಷ್ ಓದುವುದರಿಂದ ಮಗುವಿನ ಮನಸ್ಸಿಗೆ ಹೊರೆಯಾಗುತ್ತದೆಂಬ ಅಂಶವನ್ನು ವಿದ್ಯುನ್ಮಾನ ಮಾಧ್ಯಮಗಳ ಭರಾಟೆಯ ಇಂದಿನ ದಿನಗಳಲ್ಲಿ ನಂಬುವುದು ಸ್ವಲ್ಪ ಕಷ್ಟವೇ. ಹಾಗೆಯೇ ಅದರಿಂದ ಕನ್ನಡ ಕಲಿಕೆಗೆ ಯಾವ ತೊಂದರೆಯೂ ಆಗಬೇಕಿಲ್ಲ. ಇದಕ್ಕೆ ಪ್ರತಿಯಾಗಿ ಮೊದಲ ತರಗತಿಯಿಂದಲೇ ಇಂಗ್ಲಿಷ್ ಭಾಷೆಯನ್ನು ಓದಿದ ಮಾತ್ರಕ್ಕೆ ಜಗತ್ತಿನ ಜ್ಞಾನ ಸಾಗರವೆಲ್ಲ ದೊರಕಿಬಿಡಬಹುದೆಂಬ ಹಾಗೂ ಉದ್ಯೋಗದ ಎಲ್ಲ ಬಾಗಿಲುಗಳೂ ತೆರೆದುಬಿಡಬಹುದೆಂಬುದೂ ಒಂದು ಸುಂದರವಾದ ಕನಸು. ಈ ಕನಸು ನನಸಾಗುವಂತೆ ಮಾಡುವಲ್ಲಿ ಭಾಷಾ ಕಲಿಕೆಗಿಂತ ಹೆಚ್ಚಿನ ಸಾಮಾಜಿಕ ಪ್ರಯತ್ನಗಳ ಅಗತ್ಯವಿದೆ.

ಐಟಿ ಬಿಟಿಗಳೇ ಸಮಾಜದ ಕನಸಾಗಿರುವಾಗ ಮತ್ತು ಡಾಕ್ಟರ್, ಇಂಜಿನಿಯರ್‌ಗಳೇ ಸಮಾಜದ ಮಾದರಿಗಳಾಗಿರುವಾಗ ಭಾಷಾ ಕಲಿಕೆ ಯಾರಿಗೆ ಬೇಕಾಗಿದೆ ? ಇಂತಹ ದೃಷ್ಟಿಕೋನದ ಚಿಂತನೆಯ ಮಬ್ಬಿನಲ್ಲಿರುವವರಿಗೆ ಭಾಷಾ ಕಲಿಕೆ ಅಂತಹ ಮಹತ್ವದ ಪರಿಣಾಮವನ್ನೇನೂ ಬೀರುವುದಿಲ್ಲ. ಸಿಬಿಎಸ್‌ಸಿ, ಐಸಿಎಸ್‌ಸಿ ಪಠ್ಯಗಳು, ಇಂಗ್ಲಿಷ್ ಮಾಧ್ಯಮದ ಶಾಲೆಗಳು ನಮ್ಮ ಶ್ರೇಣೀಕೃತ ಸಮಾಜದಲ್ಲಿ ಪ್ರತಿಷ್ಠೆಯ ವಿಷಯಗಳಾಗಿರುವಾಗ ಕನ್ನಡ ಶಾಲೆಯಲ್ಲಿ ಇಂಗ್ಲಿಷ್ ಕಲಿಕೆ ಯಾವ ಪರಿಣಾಮ ಉಂಟುಮಾಡಬಲ್ಲುದು ? ಅವರನ್ನು ಅವರ ಕನಸಿನ ಲೋಕಕ್ಕೆ ಎತ್ತರಿಸಬಲ್ಲುದೇ ? ಇಂಗ್ಲಿಷ್ ಕಲಿಕೆಯಿಂದ ಮಾತ್ರವೇ ಸಮಾನತೆ ಸಿದ್ಧಿಸುತ್ತದೆಂದು ಯಾರೂ ನಂಬಿಲ್ಲ. ಈಗಲೂ ಎಲ್ಲ ವಿದ್ಯಾರ್ಥಿಗಳೂ ಸಮಾನವಾಗಿ ಕಲಿಯುವ ಅನೇಕ ಪಠ್ಯಗಳಿವೆ : ಗಣಿತ, ವಿಜ್ಞಾನ, ಇತ್ಯಾದಿ. ಆದರೆ ಎಲ್ಲ ಶಾಲೆಗಳಲ್ಲೂ ಮಕ್ಕಳ ಕಲಿಕೆ ಇದರಿಂದ ಸಮಾನವಾಗಿಲ್ಲ. ಅದು ಸಾಮಾಜಿಕ-ಆರ್ಥಿಕ ಸನ್ನಿವೇಶದ ಪ್ರಶ್ನೆ, ಸೌಲಭ್ಯಗಳ ಪ್ರಶ್ನೆ. ಕನ್ನಡ ಭಾಷೆಯ ಬಗ್ಗೆ ಅಪಾರವಾದ ಕೀಳರಿಮೆ ತುಂಬಿರುವ ನಮ್ಮ ಬಹುಪಾಲು ಯುವಜನಾಂಗಕ್ಕೆ ಇಂದು ಬೇಕಾಗಿರುವುದು ಸಮಾನ ಪಠ್ಯ, ಸಮಾನ ಅವಕಾಶ ಮತ್ತು ಭಾಷಾ ಕಲಿಕೆಯ ಔಚಿತ್ಯದ ಅರಿವು. ಸಾಮಾಜಿಕ ಹೋರಾಟ ಮಾತ್ರ ಇಂತಹ ಸ್ಥಿತಿಯನ್ನು ತರಬಲ್ಲುದು ಎಂಬ ವಿವೇಕ ಇಂದಿನ ಭಾಷಾ ಹೋರಾಟದಲ್ಲಿ ತೊಡಗಿರುವ ಸಾಹಿತಿಗಳಿಗಿದೆ ಎಂಬ ಅಂಶವನ್ನು ನೆನೆಯುತ್ತಲೇ ಅಂತಹ ಹೋರಾಟಕ್ಕೆ ಎಲ್ಲಪ್ರಗತಿಪರರೂ ಸಜ್ಜಾಗಬೇಕಿದೆ, ಎಂಬ ಅಂಶವನ್ನು ಅತ್ಯಂತ ದೊಡ್ಡ ಸ್ವರದಲ್ಲಿ ಹೇಳಬೇಕಾಗಿದೆ.

ಆದ್ದರಿಂದಲೇ ಇಂದಿನ ಇಂಗ್ಲಿಷ್ ಭಾಷಾಕಲಿಕೆಯ ಹೋರಾಟ ಕೇವಲ ಶಬ್ದಾಡಂಬರದ ಖಾಲಿ ಹೋರಾಟವಾಗಲಾರದೇ ಎಂಬುದು ಪ್ರಶ್ನೆಯಾಗಿಯೇ ಉಳಿಯುತ್ತದೆ.

[signature]


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




### ಕನ್ನಡ – ಕರ್ನಾಟಕ

'ಹೊಸತು' ಸೇರಿದಂತೆ ಕನ್ನಡದ ಸುಮಾರು ಪ್ರಕಟಣೆಗಳಲ್ಲಿ ಈಚೆಗೆ ಕರ್ನಾಟಕದಲ್ಲಿ ಕನ್ನಡದ ನಡಿಗೆ ನಿಧಾನವಾಗಿರುವ ಬಗ್ಗೆ ಆತಂಕಪೂರ್ಣ ಲೇಖನಗಳು ಬರುತ್ತಿವೆ. ಶಾಮಸುಂದರ್ ಮತ್ತು ವಿಶ್ವೇಶ್ವರ ಭಟ್ಟರು ಬಾಲ್ಟಿಮೋರಿನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದ ಹಿನ್ನೆಲೆಯಲ್ಲಿ ಕೆಲವು ಸಂದರ್ಭೋಚಿತ ಸಲಹೆಗಳನ್ನು ಕೊಟ್ಟಿದ್ದಾರೆ. ಈ ರೀತಿಯ ಜಾಗ್ರತೆ, ಕಳಕಳಿಯ ಅಭಿವ್ಯಕ್ತಿ ಉಚಿತವಾದದ್ದೆ. ಆದರೆ ಕನ್ನಡಪರವಾದ ಮಾತುಗಳೆಲ್ಲಾ ಅರ್ಥಪೂರ್ಣವಾದುವು ಎಂದು ಅನ್ನಿಸುವುದಿಲ್ಲ. ಅವುಗಳಲ್ಲಿ ಕೆಲವು ಸಮರ್ಥನೀಯವಲ್ಲ. ಮತ್ತೆ ಕೆಲವು ಸಮಯಸ್ಫೂರ್ತಿಯಿಂದ ಉಂಟಾಗುವ ಹಳೆಯ ರಾಗಗಳ ಏಕತಾನ.

ಕನ್ನಡದ ಬಗ್ಗೆ ಯೋಚನೆ ಮಾಡುವಾಗ ಸುಮಾರು ನಾಲ್ಕೂವರೆ ಕೋಟಿ ಜನರಾಡುವ ಮಾತು ಇಂದೋ ನಾಳೆಯೋ ಅನ್ನುವ ಸ್ಥಿತಿಯಲ್ಲಿದೆ ಎನ್ನುವ ರೀತಿ ಮಾತನಾಡುವುದು ವಿವೇಕದ ಸೂಚನೆಯಲ್ಲ. ಹಿರಿಯ ಪತ್ರಕರ್ತರೊಬ್ಬರು ಮತ್ತು ಇತ್ತೀಚೆಗೆ ಪದ್ಮಶ್ರೀಗಳಾದ ಸಾಹಿತಿಯೊಬ್ಬರು ಕೆಲ ತಿಂಗಳ ಹಿಂದೆ 'ಕನ್ನಡ ವಿನಾಶದ ಅಂಚಿನಲ್ಲಿದೆ' ಎಂದು ಯುನೆಸ್ಕೋ ಸಾರಿದೆಯೆಂದು ಆಧಾರರಹಿತವಾಗಿ ಘೋಷಿಸಿ ಪ್ರಚಾರ ಗಿಟ್ಟಿಸಿಕೊಂಡರು. ಕನ್ನಡವನ್ನು ಉಸಿರಾಡುವ ನಾವೆಲ್ಲಾ ನಮ್ಮ ನುಡಿಯನ್ನು ಗೌರವಿಸುವ ವಿಚಾರ ಬಂದಾಗ ನಮ್ಮ ಸಂಪನ್ಮೂಲಗಳನ್ನು – ಮಾತೂ ಸೇರಿದಂತೆ – ಜಾಣ್ಮೆಯಿಂದ ಉಪಯೋಗಿಸಬೇಕು. ಹಾಗಾಗಲಿ ಎಂದು ಈ ಸಲಹೆಗಳು.

(ಅ) ಕನ್ನಡಕ್ಕೆ ಕುತ್ತು ಎಂದಾಗ, ಆ ಸಮಸ್ಯೆ ಗಡಿಭಾಗಗಳಲ್ಲಿ (ಬೆಂಗಳೂರು ಸೇರಿದಂತೆ) ಎನ್ನುವುದನ್ನು ನಾವು ಸದಾ ಗಮನದಲ್ಲಿಟ್ಟುಕೊಳ್ಳಬೇಕು. ಬೆಂಗಳೂರಿನಲ್ಲಿ ಕನ್ನಡವನ್ನು ನವೆಂಬರ್ ನಾಯಕರ ಕೈಯಲ್ಲಿಟ್ಟು ಕೈಮುಗಿದರೆ ಸಾಲದು ಎಂದು ಭಟ್ಟರು ಅನ್ನುವುದು ಸತ್ಯ. ಆದರೆ ಕೆಲವು ಹೋರಾಟಗಾರರು ಎನ್ನುವಂತೆ ಕನ್ನಡವನ್ನು ಕಡ್ಡಾಯ ಮಾಡುವುದು, ವಲಸೆ ತಡೆಗಟ್ಟುವುದು ಮುಂತಾದ ಅಪ್ರಯೋಜಕ ಸಲಹೆಗಳು ಸಂವಿಧಾನ ವಿರೋಧಿ. ಮುಂಬೈನಲ್ಲಿ ಅಲ್ಪಸಂಖ್ಯಾತರ ಭಾಷೆ ಮರಾಠಿ ಹೇಗೆ ನಿರಾಳವಾಗಿ ಬದುಕಿದೆ ಎನ್ನುವುದನ್ನು ಅಭ್ಯಾಸಮಾಡಿ ಆ ಮಾದರಿಯನ್ನು ನಾವು ಅನುಸರಿಸಬೇಕು. ಈ ನಡುವೆ ಬೆಂಗಳೂರನ್ನು ಕೇಂದ್ರೀಯ ಪ್ರಾಂತ್ಯ ಮಾಡಬೇಕೆಂಬ ಸಲಹೆ ಉದ್ಯಮಿಗಳಿಂದ ಕೇಳಿಬರುತ್ತಿದೆ. ಆ ಸಂಭವನೀಯತೆಯನ್ನು ತಡೆಯಲು ಸಿದ್ಧತೆ ಈಗಲೇ ಶುರುವಾಗಬೇಕು.

(ಆ) ವಿಶ್ವಕನ್ನಡ ಸಮ್ಮೇಳನದಲ್ಲಿ ವಿಚಾರ ಗೋಷ್ಠಿಗಳಿಗೆ ಅಷ್ಟಾಗಿ ಮಹತ್ವ ದೊರಕಲಿಲ್ಲವೆಂಬ ಸಂಗತಿ ಮುಖ್ಯ. ಇದರರ್ಥ, ಕನ್ನಡದ ಉಳಿಕೆ ಸಾಹಿತ್ಯದ ಮೇಲೆ ಅವಲಂಬಿತವಾಗಿಲ್ಲ ಎಂದು. ಕನ್ನಡ ಉಳಿಸುವ ಹೆಸರಿನಲ್ಲಿ ಸಿನೆಮಾ ಜನ, ಮಾಧ್ಯಮಗಳು, ಸಾಹಿತಿಗಳು ತಮ್ಮ ಪೋಷಣೆ ಮಾಡಿಕೊಳ್ಳುವುದಕ್ಕೆ ಘೋಷಣೆ ಕೊಡುವುದರಲ್ಲಿ ಯಾವ ಅರ್ಥವೂ ಇಲ್ಲ. ಸಿನಿಮಾ ನೋಡಬೇಕೆನ್ನುವವರು ನೋಡಲಿ, ಟಿ. ವಿ. ಮುಂದೆ ಕೂರುವವರು ಕೂರಲಿ, ಕಾದಂಬರಿ ಓದುವವರು ಓದಲಿ. ಇದನ್ನೆಲ್ಲಾ ಯಾರು ಕೇಳದಿದ್ದರೂ ಅವರು ಮಾಡಿಯೇ ಮಾಡುತ್ತಾರೆ.

(ಇ) ಕನ್ನಡದ ಶಾಲಾ ಮಕ್ಕಳು ತಪ್ಪಿನ ಇಂಗ್ಲಿಷ್ ಮಾತನಾಡುತ್ತಾರೆಂದ ಮಾತ್ರಕ್ಕೆ, ಇಂಗ್ಲಿಷ್ ಮಿಶ್ರಿತ ಕನ್ನಡ ಜನಪ್ರಿಯವಾಗುತ್ತಿದೆ ಎಂದ ಮಾತ್ರಕ್ಕೆ, ಕನ್ನಡವೇನೂ ನಮ್ಮ ನೆಲದಿಂದ ಮಾಯವಾಗುವುದಿಲ್ಲ.

(ಈ) ಬಹಳ ದಿನಗಳಿಂದ ನನಗೆ ಅನ್ನಿಸುತ್ತಿರುವುದು ಕನ್ನಡ ಜನ ತಮ್ಮ ನಾಡಿನಲ್ಲಿ ವ್ಯವಹರಿಸುವಾಗ ಬೇರೆ ಭಾಷೆಯಲ್ಲಿ ಮಾತನಾಡುವ ಪರಿಸ್ಥಿತಿ ಕನ್ನಡಕ್ಕೆ ಆಗುವ ದೊಡ್ಡ ಅಪಮಾನ. ಇದನ್ನು ತಪ್ಪಿಸುವ ರೀತಿಯನ್ನು ನಾವು



ಹುಡುಕಬೇಕು. ಪರಭಾಷಿಕರು ತಮ್ಮ ಜನಗಳೊಂದಿಗೆ ತಮ್ಮ ತಮ್ಮ ಭಾಷೆಗಳಲ್ಲೇ ಮಾತಾಡಿಕೊಳ್ಳಲಿ. ಆದರೆ ಕನ್ನಡ ಸರಕಾರಿ ಕೆಲಸದಲ್ಲಿರುವಾಗ, ಕನ್ನಡಿಗರೊಂದಿಗೆ ವ್ಯಾಪಾರ ಮಾಡುವಾಗ, ಅವರು ಕನ್ನಡದಲ್ಲೇ ಮಾತನಾಡಬೇಕಾದ ವಾತಾವರಣ ನಿರ್ಮಿಸುವುದು ಸೂಕ್ತ. ಕನ್ನಡದಲ್ಲಿ ಮಾತಾಡಿದರೆ ದುಡ್ಡು ದಕ್ಕುತ್ತದೆ ಎನ್ನುವ ಸಂಭವ ಉಂಟಾದರೆ ಕರ್ನಾಟಕದಲ್ಲಿ ಎಲ್ಲರೂ ಕನ್ನಡ ಕಲಿಯುತ್ತಾರೆ.

(ಉ) ರಾಜಕಾರಣಿಗಳಿಗೆ ಕನ್ನಡ ಏಕೆ ಅಂತಹ ಮುಖ್ಯ ವಿಷಯವಲ್ಲ ಎನ್ನುವುದನ್ನು ನಾವು ಅರ್ಥಮಾಡಿಕೊಳ್ಳಬೇಕು. ಕನ್ನಡದ ಗಂಧ ಇಲ್ಲದ ಜನಗಳನ್ನು ರಾಜ್ಯಸಭೆಗೆ ಕಳುಹಿಸುವುದರಿಂದ ನಮಗಾಗುವ ಲಾಭವೇನು ? ನಮ್ಮ ಬಹಳಷ್ಟು ಲೋಕಸಭಾ ಸದಸ್ಯರಿಗೆ ಹಿಂದಿಯಲ್ಲಿ, ಇಂಗ್ಲಿಷಿನಲ್ಲಿ ಮಾತನಾಡುವ ಸಾಮರ್ಥ್ಯ ಇಲ್ಲ. ಭಾಷಾಂತರಕಾರರಿರುವಾಗ ಕನ್ನಡದಲ್ಲಿ, ಕನ್ನಡಕ್ಕೆ ಪ್ರೋತ್ಸಾಹ ಕೊಡಲು ಅವರಿಗೇನು ಕಷ್ಟ ? ಕನ್ನಡಕ್ಕೇನೂ ಮಾಡದಿದ್ದರೂ ಅವೇ ರಾಜಕೀಯ ಹೆಗ್ಗಣಗಳನ್ನು ಮತ್ತೆ ಮತ್ತೆ ಏಕೆ ಆಯ್ಕೆ ಮಾಡುತ್ತೇವೆ ? ಉತ್ತರ ನಮಗೆಲ್ಲಾ ಗೊತ್ತು : ಜಾತಿ ಮತ್ತು ಹಣ. ನಮ್ಮ ಕನ್ನಡದ ಪ್ರೀತಿ ಜಾತಿ, ದುಡ್ಡಿನ ಎಲ್ಲೆ ದಾಟಿದಾಗ ಮಾತ್ರ ನುಡಿಯ ಬಗ್ಗೆ ನಮ್ಮ ಆತಂಕ ಕಡಿಮೆಯಾಗುತ್ತದೆ.

ಸಿನ್ಸಿನ್ಯಾಟಿ, ಅಮೆರಿಕಾ — *ದಿನೇಶ್ ಹಾಸನ್*

### ಸಮಾಜದ ಸ್ವಾಸ್ಥ್ಯದ ಮೇಲೆ ಪ್ರಸ್ತುತ ಶಿಕ್ಷಣದ ಪರಿಣಾಮ

''ಮಗು ಕೇಂದ್ರಿತ, ಮಗುವಿನ ಸರ್ವಾಂಗೀಣ ಅಭಿವೃದ್ಧಿಯೇ'' ಶಿಕ್ಷಣವೆಂದು ಶಿಕ್ಷಣ ತಜ್ಞರು, ಮನೋವಿಜ್ಞಾನಿಗಳು, ತತ್ವಜ್ಞಾನಿಗಳು ಪ್ರತಿಪಾದಿಸುತ್ತಾ ಬಂದಿದ್ದರೂ, ಈಗಿನ ಸರ್ಕಾರಗಳು ಮತ್ತು ಶಿಕ್ಷಣ ಸಂಸ್ಥೆಗಳು ಮಾತ್ರ ಈ ಪ್ರತಿಪಾದನೆಯನ್ನು ಹುಸಿಗೊಳಿಸಿವೆ. ಕೇವಲ ತಮ್ಮ ಪ್ರತಿಷ್ಠೆ ಹಾಗೂ ಸ್ವಾರ್ಥಕ್ಕಾಗಿ ನೂರಕ್ಕೆ ನೂರು ಫಲಿತಾಂಶ ತೆಗೆಯುವುದೇ ಶಿಕ್ಷಣವೆಂದು ಬಿಂಬಿಸುತ್ತಿವೆ. ಇದನ್ನೇ ಗುಣಮಟ್ಟದ ಶಿಕ್ಷಣವೆಂದೂ ನಂಬಿಕೊಂಡು ಪಾಲಕರು, ಶಿಕ್ಷಕರು ಮಕ್ಕಳಿಗೆ ಪ್ರೋತ್ಸಾಹಿಸುತ್ತಾ ಬೋಧಿಸುತ್ತಾ ಬಂದಿದ್ದಾರೆ. ಇದು ಯಾವ ಪುರುಷಾರ್ಥಕ್ಕಾಗಿ ಎಂಬುದೇ ಇದುವರೆಗೆ ಅರ್ಥವಾಗುತ್ತಿಲ್ಲ.

ಇದರಿಂದ ಮಕ್ಕಳಲ್ಲಿರುವ ಕ್ರೀಡೆ, ಕಲೆ, ಮಾನವೀಯ ಮೌಲ್ಯಗಳು ಹಾಗೂ ಸಂಗೀತಗಳಂಥ ಅವರ ಇನ್ನಿತರ ಅದ್ಭುತವಾದ ಪ್ರತಿಭೆಗಳನ್ನು ಹತ್ತಿಕ್ಕಲಾಗುತ್ತದೆ. ಹಾಗೂ ಅವರ ಸಾಮಾಜಿಕ ಸಂಬಂಧಗಳು, ಸಾಂಸ್ಕೃತಿಕ ಬದುಕು, ರಾಜಕೀಯ ಶಕ್ತಿ, ಧಾರ್ಮಿಕ ನಂಬಿಕೆಗಳನ್ನೆಲ್ಲ ಗೌಣಗೊಳಿಸಲಾಗುತ್ತಿದೆ. ಅಲ್ಲದೆ ಮಾನವೀಯ ಮೌಲ್ಯಗಳಾದ ಪ್ರೀತಿ, ಸ್ನೇಹ, ನ್ಯಾಯ, ಧರ್ಮ, ಸಹಕಾರ, ಅನುಕಂಪ, ಸಮಾನತೆ ಇತ್ಯಾದಿಗಳಿಂದ ಅವರನ್ನು ವಂಚಿಸಲಾಗುತ್ತಿದೆ. ಪ್ರಸ್ತುತ ಶಿಕ್ಷಣದ ಅಂಕುಗಳ ಪ್ರತಿಷ್ಠೆಯಲ್ಲಿ ಪಠ್ಯೇತರ ಚಟುವಟಿಕೆಗಳಿಗೆ ಮಹತ್ವ ಇಲ್ಲದಂತಾಗಿದೆ. ಇದರಿಂದ ಮತ್ತು ಶಿಕ್ಷಣದ ವ್ಯಾಪಾರೀಕರಣದಿಂದಾಗಿ ಪಾಲಕರು - ಮಕ್ಕಳು, ಹಾಗೂ ಗುರು-ಶಿಷ್ಯರ ನಡುವಿನ ಸಂಬಂಧಗಳು ಅರ್ಥ ಕಳೆದುಕೊಂಡು ಸಮಾಜದ ಸ್ವಾಸ್ಥ್ಯವನ್ನು ಹದಗೆಡಿಸಲಾಗಿದೆ.

ಶಿಕ್ಷಣ ಸಂಸ್ಥೆಗಳಂತೂ ನಾಯಿಕೊಡೆಗಳಂತೆ ಗಲ್ಲಿಗಲ್ಲಿಗಳಲ್ಲಿ ಹುಟ್ಟಿಕೊಂಡು ಶಾಲಾ ಕಾಲೇಜು ಹಾಗೂ ವೃತ್ತಿಪರ ಕಾಲೇಜುಗಳನ್ನು ತೆರೆದು ಅವುಗಳನ್ನು ತಮ್ಮ ಸ್ವಂತ ಅಡ್ಡೆಯನ್ನಾಗಿ ಮಾಡಿಕೊಂಡಿವೆ. ಅಲ್ಲದೆ ವ್ಯಾಪಾರೀ ಕೇಂದ್ರಗಳಾಗಿ ಮಾರ್ಪಡಿಸಿಕೊಂಡಿವೆ. ಇದು ಬೆಂಗಳೂರಿನಂತಹ ನಗರಗಳಲ್ಲಿ ಹೆಚ್ಚಾಗಿದೆ. ಹೀಗಾಗಿ ಶಿಕ್ಷಣದ ಅರ್ಥ ಹಾಗೂ ತತ್ವಗಳನ್ನು ಗಾಳಿಗೆ ತೂರಿ, ಮೂಲ ಉದ್ದೇಶ ಈಡೇರದಂತಾಗಿದೆ. ಹೆಚ್ಚು ಅಂಕು ಪಡೆದವರಿಗೆ ಮಾತ್ರ ಸರ್ಕಾರಿ ಕೆಲಸ, ಸಮಾಜದಲ್ಲಿ ಗೌರವ ಪ್ರತಿಷ್ಠೆಗಳೆಂದು ಬಿಂಬಿಸಿ, ಅವರ ಬದುಕು ಕಸಿದುಕೊಳ್ಳಲಾಗುತ್ತಿದೆ. ಇಂತಹ ಬದುಕು ಕಟ್ಟಿಕೊಡದ ಅನೀತಿ ಶಿಕ್ಷಣ ಹಾಗೂ ಅವೈಜ್ಞಾನಿಕ ಮಾನದಂಡದಿಂದಾಗಿ ಮುಂದೊಂದು ದಿನ ಭಾರಿ ಪ್ರಮಾಣದ ಅಪಾಯ ಎದುರಿಸಲು ನಾವು ಸಿದ್ಧರಾಗಬೇಕಾಗಿದೆ.

ಮುಂದೇನಾಗಬಯಸುವೆ ಎಂದು ಯಾವ ಮಗುವನ್ನಾದರೂ ವಿಚಾರಿಸಿದರೆ,' ಅವರ ಸಿದ್ಧವಿರುವ ಉತ್ತರ ಪ್ರಕಟವಾಗಿಬಿಡುತ್ತದೆ. ಡಾಕ್ಟರ್, ಇಂಜಿನಿಯರ್, ಐ.ಎ.ಎಸ್., ಐ.ಪಿ.ಎಸ್.ಗಳಂತೆ ನಟಿಸಿಯೂ ಬಿಡುತ್ತಾರೆ. ಇಂತಹ ಸತ್ಯವಲ್ಲದ ಮನಃಸ್ಥಿತಿಯನ್ನು ಸೃಷ್ಟಿಸಿ ಅವರನ್ನು

ಶಾಶ್ವತವಾಗಿ ನಿರುದ್ಯೋಗಿಗಳನ್ನಾಗಿ ಮಾಡಲಾಗುತ್ತಿದೆ.

ವಿದ್ಯಾರ್ಥಿಗಳು ಹೆಚ್ಚು ಅಂಕು ಪಡೆದು ಆ ಶಾಲೆಗೆ ನೂರಕ್ಕೆ ನೂರು ಫಲಿತಾಂಶ ತಂದುಕೊಟ್ಟರೆ, ಅವರಿಗೂ, ಅವರು ಓದಿದ ಶಿಕ್ಷಣ ಸಂಸ್ಥೆಗೂ ಒಂದು ಪ್ರತಿಷ್ಠೆಯ 'ಗರಿ' ಮೂಡುತ್ತದೆ. ಈ ಗರಿಗಾಗಿ ಮಕ್ಕಳಿಗಾಗುವ ಮಾನಸಿಕ ಹಾಗೂ ದೈಹಿಕ ಒತ್ತಡ, ಶಿಕ್ಷಕರಿಗಿರುವ ಕಿರುಕುಳ, ಪಾಲಕರು ಪಡುವ ಬವಣೆ ಅಷ್ಟಿಷ್ಟಲ್ಲ. ಇಂತಹ ಒಂದು ಮುಖದ ಶಿಕ್ಷಣಕ್ಕಾಗಿ ಇಷ್ಟೊಂದು ಒತ್ತಡವನ್ನು ಹೇರುವುದು ಮತ್ತು ಪಾಲಕರಿಂದ ಯಥೇಚ್ಛವಾಗಿ ವಂತಿಗೆ ಸ್ವೀಕರಿಸುವುದು ಅಕ್ಷಮ್ಯ ಮೋಸವಾಗುತ್ತದೆ. ಇಂತಹ ತುಟ್ಟಿ ಶಿಕ್ಷಣದಿಂದ ಬಡಮಕ್ಕಳನ್ನು ವಂಚಿಸಿ, ಅಧಿಕಾರಿಗಳು, ರಾಜಕಾರಣಿಗಳು ಮತ್ತು ಶಿಕ್ಷಣ ಸಂಸ್ಥೆಯವರು ಹೆಚ್ಚೆಚ್ಚು ಲಾಭ ಮಾಡಿಕೊಳ್ಳುತ್ತಿದ್ದಾರೆ. ಅಕಸ್ಮಾತ್ ಸಂಸ್ಥೆಯವರು ಹೆಚ್ಚು ವಂತಿಗೆ ಸ್ವೀಕರಿಸುತ್ತಿದ್ದರೆ ಅಲ್ಲಿ ಯಾವುದೋ ದೋಷವಿರಬಹುದೆಂಬ ಸಾರ್ವಜನಿಕರ ಆಪಾದನೆಯು ಕೇಳಿಬರುತ್ತಿದೆ. ಈ ವಿಷಮ ಪರಿಸ್ಥಿತಿಗೆ ಕಾರಣವನ್ನು ಗುರುತಿಸಿ ಒಂದು ಗಟ್ಟಿಯಾದ ನಿರ್ಧಾರಕ್ಕೆ ಬರುವುದು ಅತ್ಯಂತ ಜರೂರು ಇದೆ.

ಇನ್ನೊಂದು ಮಹತ್ವದ ವಿಷಯವನ್ನು ಇಲ್ಲಿ ಪ್ರಸ್ತಾಪಿಸಲೇ ಬೇಕಾಗಿದೆ. ಪ್ರತಿವರ್ಷವೂ ಮೇ-ಜೂನ್ ಹೊತ್ತಿಗೆ ರಾಜ್ಯದಲ್ಲಿರುವ ಅನಧಿಕೃತ ಶಾಲಾ-ಕಾಲೇಜುಗಳ ಪಟ್ಟಿಯನ್ನು ಸರ್ಕಾರ ಅತ್ಯಂತ ಕಾಳಜಿಯಿಂದ ಪ್ರಾಮಾಣಿಕವಾಗಿ ಪ್ರಕಟಿಸಿ ಕೈತೊಳೆದುಕೊಂಡುಬಿಡುತ್ತದೆ. ಆದರೆ ವಾಸ್ತವಿಕವಾಗಿ ಅದೇ ಪಟ್ಟಿಯಲ್ಲಿರುವ ಶಾಲಾ ಕಾಲೇಜುಗಳೇ ರಾಜಕಾರಣಿ, ಹಾಗೂ ಅಧಿಕಾರಿಗಳ ಭ್ರಷ್ಟತೆಯಿಂದ ಅಧಿಕೃತ ಶಾಲಾ ಕಾಲೇಜುಗಳಿಗಿಂತ ಹೆಚ್ಚು ವಂತಿಗೆಯನ್ನು ವಸೂಲಿ ಮಾಡಿಕೊಂಡು ರಾಜಾರೋಷವಾಗಿ ನಡೆದುಕೊಂಡುಬರುತ್ತಿವೆ. ಜೊತೆಗೆ ಬಹುತೇಕ ಶಾಲೆಗಳು (ಬೆಂಗಳೂರಿನಲ್ಲಿ ವಿಶೇಷವಾಗಿ) ಕನ್ನಡ ಮಾಧ್ಯಮದಲ್ಲಿ ಪರವಾನಗಿ ಪಡೆದುಕೊಂಡು ಇಂಗ್ಲಿಷ್ ಮಾಧ್ಯಮದಲ್ಲಿ ಶಿಕ್ಷಣ ನೀಡುತ್ತಿವೆ. ಈ ಸತ್ಯವು ಮಂತ್ರಿಗಳಿಗೂ, ಇಲಾಖಾ ಅಧಿಕಾರಿಗಳಿಗೂ ಗೊತ್ತಿದ್ದರೂ ಗೊತ್ತಿಲ್ಲದಂತೆ ಇದ್ದುಬಿಟ್ಟಿದ್ದಾರೆ. ಕನ್ನಡ ಪರ ಸಂಘಟನೆಗಳು ಕೂಡ ಗಮನಕ್ಕೆ ಬಂದೇ ಇಲ್ಲವೆನ್ನುವಂತೆ ಇವೆ. ಇದೇ ಅಸಹಾಯಕತೆಯನ್ನು ಚೆನ್ನಾಗಿ ಬಳಸಿಕೊಳ್ಳಲಾಗುತ್ತಿದೆ. ಇಂದು ಶಿಕ್ಷಣ ಇಲಾಖೆ ಭ್ರಷ್ಟಾಚಾರದಲ್ಲಿ ಪ್ರಥಮ ಸ್ಥಾನದಲ್ಲಿದೆ ಎಂದರೆ ಭವಿಷ್ಯದ ಗಂಭೀರತೆ ನಿದ್ದೆಗೆಡಿಸುತ್ತದೆ. ಇನ್ನು ಮುಂದೆಯಾದರೂ ಅಂಕುಗಳ ಪ್ರತಿಷ್ಠೆ ತಡೆಯಬೇಕು. ಪ್ರತಿಭೆಗೆ ಪ್ರೋತ್ಸಾಹ ಸಿಗಬೇಕು. ಶಿಕ್ಷಣದ ವ್ಯಾಪಾರಿಕರಣ ನಿಲ್ಲಬೇಕು. ವೃತ್ತಿಶಿಕ್ಷಣ ನೀಡಬೇಕು. ಘನರಾಷ್ಟ್ರಪತಿ ಎ.ಪಿ.ಜೆ. ಅಬ್ದುಲ್ ಕಲಾಂರವರು ಪ್ರತಿಪಾದಿಸಿರುವ ನೀತಿ ಶಿಕ್ಷಣ ಖಡ್ಡಾಯವಾಗಿ ಅನುಷ್ಠಾನಗೊಳ್ಳಬೇಕು. ಶಿಕ್ಷಣವೆಂದರೆ ಸಂಸ್ಕಾರ ನೀಡಬೇಕು.

ಜಕ್ಕೂರು **ಶಾಂತಕುಮಾರ್ ಪೂಜಾರ್ (ಶಾಂಪೂ)**

## 'ನಿಲುಕದ ಅಂಕ'

ಮಹಿಳಾ ಸಮಾನತೆ ಪುರುಷ ವಿರೋಧಿ ಕಲ್ಪನೆ ಎಂಬುದು ಸರಿಯಾದುದಲ್ಲ. ಮನುಷ್ಯರು ಮಾಡಿರುವ ತಪ್ಪುಗಳನ್ನು ಸರಿಪಡಿಸಿಕೊಳ್ಳುವುದು, ಅವರೊಂದಿಗೆ ಸಹಕಾರ ಭಾವನೆಯಿಂದ ಬಾಳ್ವೆ ನಡೆಸುವುದು ಒಂದು ದೃಷ್ಟಿಯಲ್ಲಿ ಮಹಿಳಾ ಸಮಾನತೆ. ಸ್ತ್ರೀವಾದ ಜೀವಪರ ಮತ್ತು ಜೀವನಪರವಾದುದೆ ವಿನಾ ಪುರುಷ ವಿರೋಧಿ ಕಲ್ಪನೆಯಲ್ಲ. ಮಹಿಳೆಯರು ಮತ್ತು ಪುರುಷರನ್ನು ಹೆಚ್ಚು ಮಾನವೀಯಗೊಳಿಸಿಕೊಳ್ಳುವುದು ಸ್ತ್ರೀವಾದ. ಮಹಿಳಾ ಮೀಸಲಾತಿ 'ಪುರುಷ ಸಮಾಜ ನೀಡುವ ಸವಲತ್ತಲ್ಲ, ಇದುವರೆಗೂ ಸಮಾಜದಲ್ಲಾದ ಏರುಪೇರುಗಳನ್ನು ಸರಿಪಡಿಸಿಕೊಳ್ಳುವ ಒಂದು ಯತ್ನ. ಅದರಲ್ಲಿ ಸ್ತ್ರೀವಾದಿ ಚಿಂತಕರ ಸ್ತ್ರೀಪರವಾದ ಚಿಂತನೆಗಳ ಪಾಲು ಅಡಗಿದೆ.

ಮಹಿಳೆ ಒಂದು ರಂಗದಲ್ಲಿ ಸಾಧಿಸಿದ ಯಶಸ್ಸು ಮತ್ತೊಂದು ರಂಗದಲ್ಲಿ ಸಾಧಿಸಬೇಕಾದ ಸಾಧನೆಯ ಹಿಂದಿನ ಯಶ. ಭಾರತದಲ್ಲಿನ ಮಹಿಳಾ ಅಧಿಕಾರ ಸ್ಥಾನಗಳನ್ನು ಸರ್ವಾಧಿಕಾರಿ ಪಾಕಿಸ್ತಾನಕ್ಕೆ ಹೋಲಿಸಿದಾಗ ಇಲ್ಲಿ ಮಹಿಳೆಯರ ಸ್ಥಾನಗಳು ವಿರಳವಾಗಿವೆ ಎಂದು ಹೇಳಲೇ ಬೇಕಾಗುತ್ತದೆ. ಭಾರತದಲ್ಲಿ ಒಬ್ಬ ವಿಧವೆ ಗಂಡ ಸತ್ತನೆಂದು ಧಾರ್ಮಿಕ ವಿಧಿವಿಧಾನಗಳಿಂದ ಗಂಡನ ಎಲ್ಲ ಸವಲತ್ತುಗಳನ್ನು ಪಡೆದುಕೊಳ್ಳುವಳು. ಅವಳು ಎಷ್ಟೇ ಉನ್ನತ ಶಿಕ್ಷಣ, ಉನ್ನತ ಹುದ್ದೆ ಮುಂತಾದ ಏನೆಲ್ಲಾ ಸವಲತ್ತನ್ನು ಹೊಂದಿದ್ದರೂ, ಸಮಾಜದ ಕಂದಾಚಾರಗಳಿಗೆ ತಲೆಬಾಗಿ ಸಮಾಜದ ಚೌಕಟ್ಟಿನ ಹೊರಗೆ ಇರುವಳು. ಅವಳನ್ನು ಸಮಾಜ ತನ್ನ ಅಮಾನವೀಯ ಸಂಪ್ರದಾಯಗಳ ಮೂಲಕವಾಗಿ ನಿರಂತರವಾಗಿ ಶೋಷಿಸುತ್ತಿರುವುದು ಹೊಸ ವಿಚಾರವೇನಲ್ಲ. ಅದನ್ನು ತಡೆಗಟ್ಟುವ ನಿಟ್ಟಿನಲ್ಲಿ ಉದ್ದುದ್ದ ಭಾಷಣಗಳು, ರಾಜಕೀಯ ಆಶ್ವಾಸನೆಗಳು ಅಂತರರಾಷ್ಟ್ರೀಯ ಮಹಿಳಾ ದಿನದಂದು ಸ್ಫೋಟಗೊಳ್ಳುತ್ತವೆ. ಆದರೂ ಅವಳ ಸಾಮಾಜಿಕ ಸ್ಥಾನಗಳಲ್ಲಿ ಕಿಂಚಿತ್ತೂ ಬದಲಾವಣೆ ಕಾಣುತ್ತಿಲ್ಲ.

ಸಮಾನತೆಯಲ್ಲಿ ವಿರೋಧವಿಲ್ಲ, ಸಂಘರ್ಷವಿಲ್ಲ. ಮಹಿಳಾ ಸಬಲೀಕರಣ ದೊರೆತರೂ ಅವುಗಳನ್ನು ಅನುಭವಿಸುವ ಆರೋಗ್ಯ ಅವಳಲ್ಲಿ ಇಲ್ಲದಿದ್ದರೆ ಮಹಿಳಾ ಸಬಲೀಕರಣ ವಿಫಲವಾದಂತೆಯೇ ಸರಿ. ಹೆರಿಗೆಯ ಸಂದರ್ಭ ಅಥವಾ ಹೆರಿಗೆಯಾದ ೬ ವಾರಗಳ ನಂತರ ಅಂದರೆ ಯೌವನದ ವಯಸ್ಸಿನಲ್ಲಿ ಸಂಭವಿಸುವ ಸಾವು ಪಾಶ್ಚಾತ್ಯ ದೇಶಗಳಲ್ಲಿ ೧ ಲಕ್ಷ ಹೆರಿಗೆಗಳಲ್ಲಿ ೫ರಿಂದ ೧೦ ಮಹಿಳೆಯರು. ಆದರೆ ಭಾರತದಲ್ಲಿ ೨೦,೦೦೦ ಸ್ತ್ರೀರೋಗ ತಜ್ಞರಿದ್ದರೂ, ೧ ಲಕ್ಷ ಹೆರಿಗೆ ಸಂಭವಿಸಿದರೆ ಸಾವನ್ನಪ್ಪುವ ಮಹಿಳೆಯರ ಪ್ರಮಾಣ ೮೦೦ರಿಂದ ೧೦೦೦.

ಮಹಿಳೆಯರಲ್ಲಿ ಕಂಡುಬರುವ ಗರ್ಭಸ್ಥ ಕ್ಯಾನ್ಸರ್, ಸ್ತನದ ಕ್ಯಾನ್ಸರ್‌ನಂತಹ ಆಘಾತಕಾರಿ ರೋಗಗಳು : ಇದು ಮಹಿಳೆಯರ ಸಬಲೀಕರಣದ ಸಮಯದಲ್ಲೂ ನಡೆಯುತ್ತದೆ ಎಂದರೆ ಶಿಕ್ಷಣ ಎಲ್ಲ ಸ್ತ್ರೀಯರನ್ನೂ ಸಮರ್ಪಕವಾಗಿ ತಲುಪಿಲ್ಲ ಎಂತಲೇ ಹೇಳಬೇಕಾಗುತ್ತದೆ. ಆರೋಗ್ಯವನ್ನು ಕಾಪಾಡಿಕೊಳ್ಳುವ ಮಾನಸಿಕ ಕಾಳಜಿ ಅವರಿಗೆ ಉಪಯುಕ್ತ. ಗರ್ಭಿಣಿಯರ ಆರೋಗ್ಯಗಳಲ್ಲಿ ಆಮೂಲಾಗ್ರ ಬದಲಾವಣೆಯಾಗಬೇಕು, ಪೂರಕವಾದ ಶಿಕ್ಷಣವನ್ನು ಅವಳಿಗೆ ನೀಡಬೇಕು. ಅದಕ್ಕೆ ಅವಳ ಮನೆಯ ಗಂಡ ಮತ್ತು ಕುಟುಂಬದ ಕಾಳಜಿ ಅವಶ್ಯಕ.

ಇನ್ನು ಗರ್ಭಪಾತಗಳ ವಿಷಯಕ್ಕೆ ಬಂದಾಗ ತಂತ್ರಜ್ಞಾನದಲ್ಲಾದ ನಾಗಾಲೋಟದ ಬೆಳವಣಿಗೆಯಿಂದಾಗಿ ಜಗತ್ತಿಗೆ ಕಣ್ಣು ತೆರೆಯುವ ಮೊದಲೇ ಹೆಣ್ಣು ಭ್ರೂಣವನ್ನು ಪತ್ತೆ ಹಚ್ಚಿ, ಅದು ಹೆಣ್ಣು ಎಂದು ಕಂಡುಬಂದಾಗ ಅವಳನ್ನು ಇಲ್ಲವಾಗಿಸುವ ಅಮಾನವೀಯ ಪರಿಪಾಠ ೩೦ ವರ್ಷಗಳಿಂದ ನಿರಂತರವಾಗಿ ನಡೆದಿದೆ. ಮೊದಲು ಕೆಲವೇ ಆಸ್ಪತ್ರೆ, ಊರುಗಳಿಗೆ ಸೀಮಿತವಾಗಿದ್ದ ಇದು ಕಾಳ್ಗಿಚ್ಚಿನಂತೆ ಹಬ್ಬಿದೆ. ೨೦೦೧ರ ಹೆಣ್ಣುಮಕ್ಕಳ ಜನನ ಪ್ರಮಾಣವನ್ನು ನೋಡಿದಾಗ ಗಣನೀಯ ಪ್ರಮಾಣದಲ್ಲಿ ಮಹಿಳೆಯರ ಪ್ರಮಾಣ ಕಡಿಮೆಯಾಗಿದೆ. ಭಾರತದ ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ೧೯೯೧ರಿಂದ ೨೦೦೧ರವರೆಗಿನ ಒಂದು ದಶಕದವರೆಗೆ ೧ ಕೋಟಿ ೨೦ ಲಕ್ಷ ಹೆಣ್ಣು ಭ್ರೂಣಹತ್ಯೆ ನಡೆದಿದೆ. ಇದಕ್ಕೆ ಉದಾಹರಣೆ ಪಂಜಾಬದ ಫತೇಪುರ ಜಿಲ್ಲೆ ಒಂದರಲ್ಲಿಯೇ ೧೦೦೦ ಪುರುಷರಿಗೆ ೭೪೭ ಮಹಿಳೆಯರ ಪ್ರಮಾಣವಿದೆ. ಇದನ್ನು ನೋಡಿದಾಗ ಮಹಿಳೆಯರ ಪ್ರಮಾಣ ಪುರುಷರಿಗೆ ಹೋಲಿಸಿದರೆ ಕೊರತೆಯಿಂದ ಇದೆ ಎಂದು ಹೇಳಬೇಕಾಗುತ್ತದೆ.

ಪ್ರತಿವರ್ಷ ೫೦ ಲಕ್ಷ ಮಹಿಳೆಯರು ಗರ್ಭಪಾತ ಮಾಡಿಸಿಕೊಳ್ಳುವರು. ಅವರು ವಿಧವೆಯರಲ್ಲ, ಹದಿವಯಸ್ಸಿನವರಲ್ಲ. ಕುಟುಂಬಸ್ಥ ಮಹಿಳೆಯರಲ್ಲಿಯೇ ಈ ಗರ್ಭಪಾತಗಳ ಪ್ರಮಾಣ ಅತಿಯಾಗಿದೆ. ವೈದ್ಯಕೀಯ ರಂಗದಲ್ಲಿ ವಿಪರೀತ ಬೆಳವಣಿಗೆ ಆಗಿದ್ದರೂ, ಗರ್ಭನಿರೋಧಕ ಸಾಧನಗಳು ವಿಪುಲ ಪ್ರಮಾಣದಲ್ಲಿ ಲಭ್ಯವಿದ್ದರೂ ಅವುಗಳ ಸಂಖ್ಯೆ ನಿಂತಿಲ್ಲ. ೩೦ ವರ್ಷಗಳ ಹಿಂದೆ ಗರ್ಭಪಾತ ಬಹಳ ಹಾನಿಕರವಾಗಿತ್ತು. ಆದರೆ ಈಗ ಆ ಸ್ಥಿತಿಯಿಲ್ಲ. ಒಟ್ಟಾರೆಯಾಗಿ ಗರ್ಭಪಾತಗಳು ಜವಾಬ್ದಾರಿಯುತ ದಾಂಪತ್ಯದ ಲಕ್ಷಣವಂತೂ ಅಲ್ಲ. ಇಲ್ಲಿ ಮಹಿಳಾ ಸಬಲೀಕರಣವಾಗಬೇಕು. ಅದಕ್ಕೆ ಪುರುಷರ ಸಂಪೂರ್ಣ ಜವಾಬ್ದಾರಿ ಅವಶ್ಯಕ.

ಮಹಿಳಾ ಆರೋಗ್ಯದಲ್ಲಿ ಕೊರತೆ ಕಂಡುಬರಲು ಶಸ್ತ್ರಚಿಕಿತ್ಸೆಗಳು ಮೂಲ ಕಾರಣ ಎಂದಾಯಿತು. ಮಹಿಳಾ ಸಬಲೀಕರಣ ಸಾಧಿಸಬೇಕಾದರೆ ಅಲ್ಲಿ ಪುರುಷರ ಸಹಕಾರ ಅಗತ್ಯ. ಮಹಿಳೆಯರು ಮಾಡಿಸಿಕೊಳ್ಳುವ ಶಸ್ತ್ರಚಿಕಿತ್ಸೆಗಳನ್ನು ಪುರುಷರು ಕಡಿಮೆ ಖರ್ಚು ಮತ್ತು ಕಡಿಮೆ ಸಮಯದಲ್ಲಿ ಮಾಡಿಸಿಕೊಳ್ಳಬಹುದು. ತುರ್ತು ಪರಿಸ್ಥಿತಿಗಿಂತ ಮೊದಲು ಇಂತಹ ಶಸ್ತ್ರಚಿಕಿತ್ಸೆಗಳು ಅಸ್ತಿತ್ವದಲ್ಲಿದ್ದವು. ತದನಂತರ ಅವುಗಳಲ್ಲಿ ಕೊರತೆ ಕಂಡುಬಂದಿತು. ಪ್ರಸ್ತುತದಲ್ಲಿ ೯೯ರಷ್ಟು ಮಹಿಳಾ ಶಸ್ತ್ರಚಿಕಿತ್ಸೆಗಳು ಸಂಭವಿಸಿದರೆ, ಕೇವಲ ೧ರಷ್ಟು ಪುರುಷ ಶಸ್ತ್ರಚಿಕಿತ್ಸೆಗಳು ಎಂದಾಗ ಮಹಿಳೆಯರ ನಿರಂತರ ಶೋಷಣೆ ನಡೆದಿದೆ ಎಂಬುದು ವೇದ್ಯವಾಗುತ್ತದೆ.

ಹೆಣ್ಣು ಭ್ರೂಣಹತ್ಯೆಗಳು ಅತಿಯಾಗಿ ನಡೆಯುತ್ತಿರುವುದು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮುಂದುವರಿದ ಶ್ರೀಮಂತ ನಗರಗಳಾದ ದೆಹಲಿ ಮತ್ತು ಪಂಜಾಬಗಳಲ್ಲಿಯೇ ಹೊರತು ಗ್ರಾಮಗಳಲ್ಲಿ ಅಲ್ಲ. ಇಂತಹ ಜ್ವಲಂತ ಸಮಸ್ಯೆಗಳ ಮಧ್ಯೆಯೂ ಸಬಲೀಕರಣದ ಅವಕಾಶ ಸೃಷ್ಟಿಯಾಗಿದ್ದರೂ ಪುರುಷ ಮಹಿಳೆ ಸಮಾನರು ಎಂಬ ಮೂಲಭೂತ ಮೌಲ್ಯ ಜಾರಿಯಾಗದಿದ್ದರೆ, ಮಹಿಳೆ ಪುರುಷ ಪ್ರಧಾನ ಸಮಾಜದಲ್ಲಿಯೇ

**ಬಾಲ್ಟಿಮೋರ್‌ನಲ್ಲಿ ಆದಿವಾಸಿ ಕನ್ನಡಿಗರು !**

ಕರ್ನಾಟಕದ ಉಪಮುಖ್ಯಮಂತ್ರಿ ಶ್ರೀಮಾನ್ ಯಡಿಯೂರಪ್ಪನವರು ಬಾಲ್ಟಿಮೋರ್ ಕನ್ನಡಿಗರನ್ನುದ್ದೇಶಿಸಿ ಭಾಷಣ ಮಾಡುವಾಗ 'ಪ್ರಿಯ ಆದಿವಾಸಿ ಕನ್ನಡಿಗರೇ' — ಎಂದೇ ಸಂಬೋಧಿಸಿದರಂತೆ !

ಬದುಕಬೇಕಾಗುತ್ತದೆ. ಅವುಗಳಿಗೆ ಪೂರಕವಾದ ಯತ್ನಗಳು ನಡೆದಿದ್ದಾರೆ ಮಹಿಳಾ ಸಬಲೀಕರಣ ಯಶಸ್ವಿಯಾಗುವುದರಲ್ಲಿ ಸಂಶಯವಿಲ್ಲ. ಇವೆರಡನ್ನೂ ಸಾಧಿಸಿದಾಗ ಮಹಿಳಾ ಸಬಲೀಕರಣಕ್ಕೆ, ಸ್ತ್ರೀವಾದಕ್ಕೆ ನಿಜವಾದ ಅರ್ಥ ಬರುತ್ತದೆ.

ಮನೆಗಳಲ್ಲಿ ಸ್ತ್ರೀಯರ ಪರಿಸ್ಥಿತಿ ಸುಧಾರಿಸಬೇಕು, ಜಾಹೀರಾತುಗಳಲ್ಲಿನ ಅವಳ ಶೋಷಣೆ ನಿಲ್ಲಬೇಕು. ಒಟ್ಟಿನಲ್ಲಿ ಸ್ತ್ರೀಯರ ಪರಿಸ್ಥಿತಿ ಸುಧಾರಿಸುವ ಕುರಿತು ಅರಿವು ಮೂಡಿಸಬೇಕು. ಅದರ ಹೊರತು ಮಹಿಳಾ ಸಬಲೀಕರಣಕ್ಕೂ, ಮಹಿಳಾ ದಿನಾಚರಣೆಗಳ ದಿನ ನಡೆಯುವ ಮಹಿಳಾ ಸಮಾನತೆ ಕುರಿತಾದ ಉದ್ದುದ್ದ ಭಾಷಣಕ್ಕೂ, ಜೊಳ್ಳು ರಾಜಕೀಯ ಆಶ್ವಾಸನೆಗಳಿಗೂ ಯಾವುದೇ ಅರ್ಥ ಬರಲಾರದು.

*ಪ್ರಭುಗೌಡ ಪಾಟೀಲ*

## ಪತ್ರಿಕೆ ಮತ್ತು ಗೆದ್ದಲ ಹುಳು

ಕಂಪ್ಯೂಟರ್ ಯುಗ, ಇಂಟರ್‌ನೆಟ್ ಯುಗ, ಸೈಬರ್ ಲೋಕವೆಂದೆಲ್ಲಾ ಹೇಳಿದರೂ ಬೆಳಗಿನ ದಿನಚರಿಯನ್ನು ಪ್ರಾರಂಭಿಸುವುದು ದಿನಪತ್ರಿಕೆಯನ್ನು ಓದುವುದರೊಂದಿಗೆಯೇ ಎನ್ನಬಹುದು. ಆದರೆ ಜೀವನದ ಇಂತಹ ಒಂದು ಅವಿಭಾಜ್ಯ ಅಂಗವಾಗಿರುವ ಈ ಪತ್ರಿಕೋದ್ಯಮವು ಯಾವ ದಿಶೆಯತ್ತ ಸಾಗುತ್ತಿದೆ, ಎಷ್ಟೊಂದು ಆರೋಗ್ಯಕರವಾದ ರೀತಿಯಲ್ಲಿ ಜನರಿಗೆ ತಲುಪುತ್ತಿದೆ ಎಂದು ಒಂದು ಸಾರಿ ಚಿಂತನೆ-ಮಂಥನೆ ಮಾಡಿದಾಗ ನಮಗೆ ಸಿಗುವ ಉತ್ತರ ಋಣಾತ್ಮಕವಾದುದಾಗಿದೆ.

ಕ್ರಿ.ಶ. ೧೭೮೭ರಲ್ಲಿ ಜೇಮ್ಸ್ ಅಗಸ್ಟಸ್ ಹಿಕ್ವಿಯ 'ದಿ ಬೆಂಗಾಲ್ ಗೆಜೆಟ್' ಪತ್ರಿಕೆಯಿಂದ ಆರಂಭವಾದ ಭಾರತೀಯ ಪತ್ರಿಕೋದ್ಯಮವು ಗತಕಾಲದಲ್ಲಿ ದೇಶಸೇವೆಗಾಗಿ ಸ್ವಾತಂತ್ರ್ಯಕ್ಕಾಗಿ ತಮ್ಮ ವಿಚಾರಧಾರೆಗಳನ್ನು ಜನಸಾಮಾನ್ಯರಿಗೆ ತಿಳಿಸಲು ಅಸ್ತಿತ್ವಕ್ಕೆ ಬಂದವು. ತದನಂತರದ ದಿನಗಳಲ್ಲಿ ಅವುಗಳು ಸಮಾಜದ ಅಂಕು ಡೊಂಕು, ಲೋಪ ದೋಷಗಳನ್ನು ತಿದ್ದುತ್ತಾ ಸಾಗಿ ವಾಸ್ತವದಲ್ಲಿ ಸಂವಿಧಾನದ ನಾಲ್ಕನೇ ಅಂಗವಾಗಿ, ಒಂದು ಬೃಹತ್ ಉದ್ದಿಮೆಯಾಗಿ ಬೆಳೆದು ನಿಂತಿರುವುದು ಅತ್ಯಂತ ಹೆಮ್ಮೆಯ ಸಂಗತಿ.

ಇಂದು ಮಾರುಕಟ್ಟೆಯಲ್ಲಿ ಇಂತಹ ದೀರ್ಘ ಇತಿಹಾಸ ಹೊಂದಿರುವ ಪತ್ರಿಕೆಗಳ ಗುಣಮಟ್ಟದತ್ತ ಒಮ್ಮೆ ನೋಡಿದರೆ ಸಾಕು, ಅಲ್ಲಿ ಕಂಡುಬರುವುದು ಬರೀ ಕೊಳಕು ಅಶ್ಲೀಲ ಸಾಹಿತ್ಯ. ವಿವಿಧ ಭಂಗಿಯ ಅರೆಬೆತ್ತಲೆ, ನಗ್ನ ಹುಡುಗಿಯರಿರುವ ಜಾಹೀರಾತುಗಳೇ ರಾರಾಜಿಸುತ್ತವೆ. ಇಂತಹ ಜಿಡ್ಡುಗಟ್ಟಿದ ವಾತಾವರಣ ಕೇವಲ ಒಂದು ನಗರಕ್ಕೆ ಸೀಮಿತವಾಗಿರದೆ ಅದು ದಿಲ್ಲಿಯ ದುಲ್ಲಾಖಾನನ ಬೀಡಿ ಅಂಗಡಿಯಿಂದ ಹಿಡಿದು ಹಳ್ಳಿಯ ಹನುಮಂತನ ಪಾನ ಶಾಪ್ ಅಂಗಡಿಯವರೆಗೆ ವ್ಯಾಪಿಸಿರುವ ವ್ಯವಸ್ಥೆಯಾಗಿದೆ.

ಕಡಿಮೆ ದರಗಳಲ್ಲಿ ಕೈಗೆಟಕುವ ಇಂತಹ ಪತ್ರಿಕೆಗಳು ಯುವ ಪೀಳಿಗೆಯ ಮೇಲೆ ಭಾರಿ ಗಾತ್ರದ ಪರಿಣಾಮ ಬೀರುವುದರೊಂದಿಗೆ ಜನರನ್ನು ಸಮಾಜ ಘಾತುಕ ವ್ಯಕ್ತಿಗಳಾಗಿ ಬೆಳೆಯಲು ಪ್ರೇರೇಪಣೆ ನೀಡುತ್ತವೆ. ಅಶ್ಲೀಲ ಸಾಹಿತ್ಯ ಹಾಗೂ ಅರೆಬೆತ್ತಲೆ ಜಾಹೀರಾತುಗಳು ಇರುವ ಇಂತಹ ಪತ್ರಿಕೆಗಳು ಅವರಿಗೆ ಅಲ್ಪಸ್ವಲ್ಪ ಲೈಂಗಿಕ ಸುಖವನ್ನು ಕೊಡುವುದರೊಂದಿಗೆ ನಾಯಿಕೊಡೆಗಳಂತೆ ಬೀದಿ ಕಾಮಣ್ಣರನ್ನಾಗಿ ಮಾರ್ಪಡಿಸುತ್ತವೆ.

ಇತ್ತೀಚಿನ ದಿನಗಳಲ್ಲಿ ಯುವಕರಿಗೆ ಮಾರ್ಗದರ್ಶಕರಾಗಿ, ಪತ್ರಿಕಾರಂಗದ ಭೀಷ್ಮರಾಗಿ ನಾಡೋಜ ಪ್ರಶಸ್ತಿ ಪಡೆದ ಪಾಟೀಲ ಪುಟ್ಟಪ್ಪ ಅವರ ಪತ್ರಿಕಾ ಕಾರ್ಯಾಲಯದಲ್ಲಿಯೇ ಇಂತಹ ಅಶ್ಲೀಲ ಸಾಹಿತ್ಯ ಮುದ್ರಣವಾಗುತ್ತಿದ್ದುದು ಅತ್ಯಂತ ವಿಷಾದಕರ ಸಂಗತಿ.

ಒಂದು ಕಡೆ ಅಶ್ಲೀಲ ಸಾಹಿತ್ಯವನ್ನು ವ್ಯಾಪಕವಾಗಿ ಮಾರಾಟ ಮಾಡುತ್ತಿರುವ ಈ ಪೀತ ಪತ್ರಿಕೆಗಳು ಮತ್ತೊಂದು ಕಡೆ ಬ್ಲಾಕ್‌ಮೇಲ್, ಗೂಂಡಾಗಿರಿ, ದಬ್ಬಾಳಿಕೆ ಹಾಗೂ ಸಮಾಜಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಹಗಲು ದರೋಡೆ ನಡೆಸುತ್ತಿರುವುದು ಅನಾರೋಗ್ಯಕರ ಬೆಳವಣಿಗೆಯಾಗಿದೆ. ಕೆಲವು ನೌಕರರ ಅಭಿಪ್ರಾಯದಂತೆ, ''ಪೀತ ಪತ್ರಿಕೆಯ ಸಂಪಾದಕರು, ನಕಲಿ ಪತ್ರಕರ್ತರು, ಹಾಗೂ ಭೋಟಾ ಮತ್ತು ಖೋಟಾ ವರದಿಗಾರರು ಕೆಲವು ಕಚೇರಿಗಳಿಗೆ ಗೂಳಿಯಂತೆ ನುಗ್ಗಿ ಹಫ್ತಾ ವಸೂಲಿ ಮಾಡುತ್ತಾರೆ, ಕೊಡದೆಹೋದರೆ ಇಲ್ಲಸಲ್ಲದ ವಿಷಯವನ್ನು ಇದ್ದಂತೆ (ಸತ್ಯ) ಬರೆದು ತನ್ಮೂಲಕ ವ್ಯಕ್ತಿ, ಕಚೇರಿಗೆ ಮಸಿ ಬಳಿಯುವ ಕಾಯಕವನ್ನು ನಿರಂತರವಾಗಿ ಮಾಡುತ್ತಿದ್ದಾರೆ'' ಎಂದು ಹೇಳುತ್ತಿರುವುದು ಪತ್ರಿಕೆಯ ಮಗದೊಂದು ಮುಖವನ್ನು ಪರಿಚಯಿಸುವ ವಿಪರ್ಯಾಸದ ಘಟನೆಯಾಗಿದೆ.

ವೈಚಾರಿಕತೆ, ಆರೋಗ್ಯ, ವಿಜ್ಞಾನ, ಅಪರಾಧ, ಲೈಂಗಿಕ ಶಿಕ್ಷಣ ಮುಂತಾದ ಹೆಸರಿನಲ್ಲಿ ತ್ರೈಮಾಸಿಕ, ಮಾಸಿಕ, ಪಾಕ್ಷಿಕ, ಸಾಪ್ತಾಹಿಕ, ದಿನಪತ್ರಿಕೆ ಎಂಬ ಹೆಸರಿನಲ್ಲಿ ಪ್ರಕಟಗೊಳ್ಳುವ ಇಂತಹ ಪತ್ರಿಕೆಗಳು ಯುವ ಜನಾಂಗವನ್ನು ದಾರಿತಪ್ಪಿಸುವುದರೊಂದಿಗೆ ಅಪರಾಧವನ್ನು ಮಗದೊಂದು ರೂಪದಲ್ಲಿ ನಿರ್ಮಾಣಮಾಡುತ್ತಿವೆ. ಈ ಬಗೆಯ ಪತ್ರಿಕೆಗಳನ್ನು ಪ್ರಕಟಿಸುವ ಈ ಪತ್ರಿಕೆಗಳ ಸಂಪಾದಕರ ಗುಪ್ತ ಜಾಲವನ್ನು ಕೂಲಂಕಷವಾಗಿ ನೋಡಿದರೆ ಸಂವಿಧಾನದ ನಾಲ್ಕನೇ ಸ್ತಂಭದಂತಿರುವ ಪತ್ರಿಕೋದ್ಯಮದ ಸ್ತಂಭಕ್ಕೆ ಗೆದ್ದಲ ಹುಳುಗಳು ಮೆಲ್ಲನೆ ಮೆತ್ತುತ್ತಿವೆ ಎಂದು ಭಾಸವಾಗುತ್ತಿದೆ.

ದಿನಬೆಳಗಾದರೆ ಪೀತ ಪತ್ರಿಕೆಯ ಡಾನ್ ಸಂಪಾದಕರು ನಾಯಿಕೊಡೆಗಳಂತೆ ಹುಟ್ಟಿಕೊಳ್ಳುತ್ತಿರುವುದು, ಅಶ್ಲೀಲ ಸಾಹಿತ್ಯ ರಾಶಿರಾಶಿಯಾಗಿ ಮುದ್ರಣಗೊಳ್ಳುತ್ತಿರುವುದು, ನಗ್ನ ಜಾಹಿರಾತುಗಳು ನರ್ತನ ಮಾಡುತ್ತಿರುವುದು ಇತ್ಯಾದಿ ದುರಂತಮಯ ಕಲುಷಿತ ವಾತಾವರಣವನ್ನು ತಪ್ಪಿಸಲು, ಪತ್ರಿಕಾ ಕಾನೂನು, ರಾಜ್ಯಕಾರ್ಯನಿರತ ಪತ್ರಿಕಾ ಸಂಘ, ವೇದಿಕೆಗಳು ಯಾವ ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಳ್ಳುತ್ತವೆ ಎನ್ನುವುದು ಓದುಗರ ಯಕ್ಷಪ್ರಶ್ನೆಯಾಗಿದೆ.

*ಗದಗ* *ವಿರುಪಾಕ್ಷ ಗೌಡ ಎಚ್. ಪಾಟೀಲ್*

## ಇಂಜಿನಿಯರಿಂಗ್ ಶಿಕ್ಷಣ

ತಾಂತ್ರಿಕ ವಿಶ್ವವಿದ್ಯಾಲಯದ ಹಿರಿಯ ಅಧಿಕಾರಿಯೊಬ್ಬರು, ''ನಮ್ಮ ಶಿಕ್ಷಣ ಕ್ರಮ ಇಂದಿನ ತಂತ್ರಜ್ಞಾನಕ್ಕೆ ಅನುಗುಣವಾಗಿಲ್ಲ, ಅದನ್ನು ನವೀಕರಿಸುವ ದಿಶೆಯಲ್ಲಿ ಕಾರ್ಯಪ್ರವೃತ್ತರಾಗಿದ್ದೇವೆ'' ಎಂದು ಹೇಳಿಕೆ ನೀಡಿದ್ದನ್ನು ಅನೇಕರು ಓದಿರಬಹುದು. ತಾಂತ್ರಿಕ ವಿಶ್ವವಿದ್ಯಾಲಯ ಸ್ಥಾಪಿತವಾಗುವುದಕ್ಕೆ ಮುನ್ನ ಇಂಜಿನಿಯರಿಂಗ್ ಶಿಕ್ಷಣವನ್ನು ನಮ್ಮ ರಾಜ್ಯದ ಆರು ವಿಶ್ವವಿದ್ಯಾಲಯಗಳೇ ನೋಡಿಕೊಳ್ಳುತ್ತಿದ್ದವಷ್ಟೆ. ಅಲ್ಲಿಯ ಹಳೆಯ ಕಡತಗಳನ್ನು ಪರಿಶೀಲಿದರೆ ನಿಗದಿತ ಸಮಯಕ್ಕೆ (ಐದು ವರುಷಗಳಿಗೊಮ್ಮೆ) ಸರಿಯಾಗಿ ಸಿಲೆಬಸ್ ನವೀಕರಣ ಪ್ರಕ್ರಿಯೆ ನಿಯಮಿತವಾಗಿ ನಡೆದಿರುವುದು ಕಂಡುಬರುತ್ತದೆ. ಹಾಗಿದ್ದರೂ ಇಂತಹ ಪರಿಸ್ಥಿತಿ ಉಂಟಾಗಿದೆ ಎಂದರೆ ''ನವೀಕರಣದ ಹೊಣೆ ಹೊತ್ತ ಮೆಂಬರುಗಳು ಏನು ಮಾಡಿದ್ದಾರೆ? ಹಳೆಯ ಸರಕನ್ನೇ ಹೊಸಬಾಟಲಿಯಲ್ಲಿ ತುಂಬಿದ್ದಾರೆ!'' ಎಂದು ಉಳಿದ ಶಿಕ್ಷಕರು ಗೊಣಗುತ್ತಿದ್ದುದರಲ್ಲಿ ಸತ್ಯಾಂಶವಿತ್ತು ಎಂದಂತಾಯಿತು.

ನಾಗಾಲೋಟದಲ್ಲಿ ಮುಂದುವರಿಯುತ್ತಿರುವ ತಂತ್ರಜ್ಞಾನದ ಇಂದಿನ ಯುಗದಲ್ಲಿ ನಮ್ಮ ಶಿಕ್ಷಣಕ್ರಮಕ್ಕೆ ಕಾಯಕಲ್ಪದ ರೀತಿಯ ಬದಲಾವಣೆಯ ಅಗತ್ಯವಿದೆ. ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟಿಷರು ಹಾಕಿದ ಶಿಕ್ಷಣಪದ್ಧತಿಯನ್ನು ನಾವು ವಿಶೇಷ ಬದಲಾವಣೆಯಿಲ್ಲದೆ ಹಾಗೆಯೇ ಮುಂದುವರಿಸಿಕೊಂಡು ಹೋಗುತ್ತಿದ್ದೇವೆ. ಅವರ ಶಿಕ್ಷಣದ ಚೌಕಟ್ಟು ಭಾರತದಲ್ಲಿ ಸುಶಿಕ್ಷಿತ ಗುಲಾಮರನ್ನು ತಯಾರಿಸುವುದಕ್ಕೆಂದು ನಿರೂಪಿಸಲ್ಪಟ್ಟಿತ್ತು. ''ತಂತ್ರಜ್ಞಾನ ಪರದೇಶದಿಂದ ಬರುತ್ತದೆ. ಅವರು ಸ್ಥಾಪಿಸಿದ ಸ್ಥಾವರಗಳನ್ನು ನಿಷ್ಠೆಯಿಂದ ನೋಡಿಕೊಂಡು ಹೋಗುವುದಷ್ಟೇ ಭಾರತೀಯರ ಕೆಲಸ. ಹೊಸ ಹೊಸ ಸಂಶೋಧನೆಗಳನ್ನು ಮಾಡುವುದು ಬಿಳಿಯರಿಂದಷ್ಟೇ ಸಾಧ್ಯ'' ಎಂಬ ಧೋರಣೆ ಅದರಲ್ಲಿ ಅಡಕವಾಗಿತ್ತು. ಸ್ವಾತಂತ್ರ್ಯ ಸಿಕ್ಕ ಬಳಿಕ ಅದನ್ನು ''ಭವ್ಯ ರಾಷ್ಟ್ರದ ರೂವಾರಿಗಳನ್ನು ನಿರ್ಮಿಸುವ'' ಶಿಕ್ಷಣ ಪದ್ಧತಿಯನ್ನಾಗಿ ಮಾರ್ಪಡಿಸಬೇಕಾಗಿತ್ತು. ಆದರೆ ಆ ದಿಶೆಯಲ್ಲಿ ಪ್ರಯತ್ನ ಸಮರ್ಪಕವಾಗಿ ನಡೆಯಲಿಲ್ಲ.

''ಆ ಜಲಧಿಯನ್ನು ಜಿಗಿದ'' ಹನುಮನಿಗೆ ಅವನ ಶಕ್ತಿಯ ಬಗೆಗೆ ಬೇರೆಯವರು ತಿಳಿಸಿಹೇಳಿ ಹುರಿದುಂಬಿಸಿದಂತೆ ''ಬಿಳಿಯರಿಗಿಂತ ನೀವು ಯಾವ ರೀತಿಯಲ್ಲೂ ಕಡಿಮೆಯಿಲ್ಲ'' ಎಂದು ನಮ್ಮ ವಿದ್ಯಾರ್ಥಿಗಳ ಆತ್ಮವಿಶ್ವಾಸ ಹೆಚ್ಚುವಂತೆ ಮಾಡಬೇಕಾಗಿದೆ. ಅದು ನಮ್ಮ ಪಾಠ ಮಾಡುವ ರೀತಿಯಲ್ಲಿಯೇ ಅಡಕವಾಗಿರಬೇಕು, ಮತ್ತು ಅದು ಅವರು ಇಂಜಿನಿಯರಿಂಗ್ ಕ್ಷೇತ್ರಕ್ಕೆ ಕಾಲಿಡುವ ಮೊದಲನೆಯ ವರುಷದಲ್ಲಿಯೇ ಪ್ರಾರಂಭವಾಗಬೇಕು. ''ಕೇವಲ ಪರೀಕ್ಷೆಯಲ್ಲಿ ಪಾಸಾಗಬೇಕು, ಅಥವಾ ಉತ್ತಮ ಗುಣಾಂಕಗಳನ್ನು ಸಂಪಾದಿಸಬೇಕು ಎಂಬಷ್ಟಕ್ಕೆ ಸೀಮಿತವಾಗಿರುವ ಈಗಿನ ಶಿಕ್ಷಣ ಪದ್ಧತಿ, ಕೇವಲ ಅಷ್ಟೇ ಉದ್ದೇಶವನ್ನಿಟ್ಟುಕೊಂಡು ಬರೆಯಲ್ಪಟ್ಟು ಮಾರುಕಟ್ಟೆಗೆ ಬರುತ್ತಿರುವ ಪುಸ್ತಕಗಳು, ಅವುಗಳನ್ನು ನೋಡಿಕೊಂಡು ನಿರೂಪಿಸಲ್ಪಡುವ ಸಿಲೆಬಸ್ ಮತ್ತು ಪರೀಕ್ಷಾ ಪದ್ಧತಿ ಇವೆಲ್ಲ ಸೇರಿ ನಮ್ಮ ಶಿಕ್ಷಣವನ್ನು ಇಂದಿನ ಈ ಅಧೋಗತಿಗೆ ತಂದಿವೆ'' ಎಂಬ ಮಾತಿನಲ್ಲಿಯ ಸತ್ಯಾಂಶವನ್ನು ಪ್ರಾಮಾಣಿಕವಾಗಿ, ಕೂಲಂಕಷವಾಗಿ, ಪರಿಶೀಲಿಸಬೇಕಾಗಿದೆ.

ಈಗ ನಾವು ಕಲಿಸುತ್ತಿರುವ ಪದ್ಧತಿಯಲ್ಲಿ ಯಂತ್ರಗಳು ಹೇಗೆ ಕೆಲಸಮಾಡುತ್ತವೆ ಎಂಬುದನ್ನು ಮಾತ್ರ ಹೇಳಿಕೊಡುತ್ತೇವೆ. ಆ ಯಂತ್ರದ ಭಾಗಗಳ ವಿನ್ಯಾಸವನ್ನು ಅಂತಹುದೇ ರೀತಿಯಲ್ಲಿ ನಿರ್ಮಾಣ ಮಾಡಬೇಕಾಗಿ ಬಂದುದಕ್ಕೆ ಕಾರಣಗಳೇನು, ಆ ನಿರ್ಣಯಕ್ಕೆ ಬರಲು ಏನೆಲ್ಲ ಪ್ರಯೋಗ ಮಾಡಬೇಕಾಯಿತು ಎಂಬೆಲ್ಲ ವಿಚಾರಗಳನ್ನು ಚರ್ಚಿಸುವುದಕ್ಕೆ ಅವಕಾಶವನ್ನೇ ಕಲ್ಪಿಸಿಕೊಂಡಿಲ್ಲ.

ಈ ಸಂದರ್ಭದಲ್ಲಿ ನಾನು ಓದಿದ ಹೇಳಿಕೆಯೊಂದು ನೆನಪಿಗೆ ಬರುತ್ತದೆ: 'ಹೇಗೆ' ಎಂಬುದನ್ನು ತಿಳಿದಿರುವವನಿಗೆ ಉದ್ಯೋಗ ಖಾತರಿ, ಆದರೆ 'ಏಕೆ' ಎಂಬುದನ್ನು ತಿಳಿದಿರುವವನು ಅವನ ಮೇಲಿನ ಅಧಿಕಾರಿಯಾಗುತ್ತಾನೆ. ಬರಿ 'ಹೇಗೆ' ಎಂಬುದನ್ನು ಅರಿತುಕೊಳ್ಳುವುದಕ್ಕಿಂತ

''ಯಾಕೆ ಹೀಗೆ'' ಎಂಬುದನ್ನು ತಿಳಿದುಕೊಳ್ಳುವ ಜ್ಞಾನ ಹೆಚ್ಚಿನ ಮಟ್ಟದ್ದು. ಆ ಧಾಟಿಯಲ್ಲಿ ನಾವು ಪಾಠ ಮಾಡಲು ಪ್ರಾರಂಭಿಸಿದರೆ ''ಹೊಸ ಹೊಸ ಆವಿಷ್ಕಾರಗಳನ್ನು ಮಾಡಿದವರು ನಮ್ಮ ನಿಮ್ಮಂತೆ ಸಾಮಾನ್ಯ ಜನರೇ, ಆದರೆ ನಿರಂತರ ಪರಿಶ್ರಮದಿಂದ ಯಶಸ್ಸು ಕಂಡವರು. ಅದೇ ರೀತಿಯ ಕಾರ್ಯತತ್ಪರತೆಯನ್ನು ನೀವೂ ಅಳವಡಿಸಿ ಕೊಂಡರೆ ಅವರಂತೆ ನೀವೂ ಹೊಸ ಶೋಧ ಮಾಡುವಲ್ಲಿ ಯಶಸ್ಸು ಕಾಣಬಹುದು'' ಎಂಬ ಉಪದೇಶ ಅವರಲ್ಲಿಯ ಆತ್ಮವಿಶ್ವಾಸವನ್ನು ಬಡಿದೆಬ್ಬಿಸುವುದು. ಆ ರೀತಿ ಪಾಠ ಮಾಡುವುದು ಹೇಗೆ ಎಂಬುದನ್ನು ವಿವರಿಸಲು ಒಂದು ಚಿಕ್ಕ ಉದಾಹರಣೆಯನ್ನು ಪರಿಶೀಲಿಸಬಹುದು.

ಓದುಗರಲ್ಲಿ ಅನೇಕರು ಇಂಜಿನಿಯರಿಂಗ್ ಓದಿರದವ ರಿದ್ದರೂ ಅರ್ಥವಾಗುವಂತಹ ಸಾದಾ ಉದಾಹರಣೆಯನ್ನೇ ನೀಡುತ್ತಿದ್ದೇನೆ. ಉಪನ್ಯಾಸಕರು ಹೇಳುತ್ತಾರೆ :

''ಒಂದು ದೊಡ್ಡ ಕೆರೆಯ ದಡದಲ್ಲಿರುವ ಊರಿಗೆ ನೀರಿನ ಪೂರೈಕೆ ಆ ಕೆರೆಯಿಂದಲೇ ಆಗಬೇಕಾಗಿದೆ. ಮಳೆಗಾಲದಲ್ಲಿ ಆ ನೀರು ಕೆಂಪಾಗಿರುವುದು ಸಹಜ. ಆ ಸಮಯದಲ್ಲೂ ಜನರಿಗೆ ಒಳ್ಳೆಯ ನೀರನ್ನು ಪೂರೈಸ ಬೇಕಾಗಿದೆ. ಫಿಲ್ಟರ್ ಪೇಪರು ಮತ್ತು ಫನಲ್ ಉಪಯೋಗಿಸಿ ಮಣ್ಣು ನೀರನ್ನು ಶುದ್ಧೀಕರಿಸುವ ವಿಧಾನವನ್ನು ರಸಾಯನ ಶಾಸ್ತ್ರದಲ್ಲಿ ನೀವೆಲ್ಲ ಓದಿದ್ದೀರಿ. ಆ ವಿಧಾನವನ್ನು ಇಲ್ಲಿ ಶಿಫಾರಸು ಮಾಡುತ್ತೀರಾ ? ಇಲ್ಲ, ಒಂದು ಅಮೆರಿಕನ್ ಕಂಪನಿ ಪುಕ್ಕಟೆಯಾಗಿ ಲಕ್ಷಗಟ್ಟಲೆ ಫನಲ್ ಮತ್ತು ಫಿಲ್ಟರ್ ಪೇಪರ್ ಸರಬರಾಜು ಮಾಡಲು ಮುಂದೆ ಬಂದರೂ ಆ ವಿಧಾನವನ್ನು 'ವ್ಯಾವಹಾರಿಕವಲ್ಲ'ವೆಂದು ನಿರಾಕರಿಸುತ್ತೀರಿ. ಆ ವಿಧಾನದಲ್ಲಿ ಅದಕ್ಕೆ ತಗಲುವ ಸಮಯ ತೀರಾ ಹೆಚ್ಚು, ಅದಕ್ಕೆ ಅಗತ್ಯವಿರುವ **ಸಮಯವನ್ನು ಸೃಷ್ಟಿಸಿಕೊಡುವುದು** ಯಾವ ಅಮೆರಿಕನ್ ಕಂಪನಿಗೂ ಸಾಧ್ಯವಿಲ್ಲ.

''ಬೇರೊಂದು ಮಾರ್ಗವನ್ನು ಹುಡುಕುವ ನಿಮಗೆ, ಸ್ತಬ್ಧವಾಗಿ ನಿಂತ ನೀರಿನಲ್ಲಿ ಮಣ್ಣಿನ ಕಣಗಳು ತಮ್ಮಷ್ಟಕ್ಕೆ ತಾವೇ ತಳಕ್ಕೆ ತೆರಳಿ ನೀರು ತಿಳಿಯಾಗುವ ಘಟನೆ ನೆನಪಾ ಗುತ್ತದೆ. ಅದಕ್ಕೆಂದು ರಾಡಿನೀರನ್ನು ಶೇಖರಿಸಲು ಎತ್ತರ ಹೆಚ್ಚಿಗೆ ಇರುವ ಟ್ಯಾಂಕನ್ನು ನಿರ್ಮಿಸಿ, ಅದರಲ್ಲಿ ರಾಡಿಯ ಕಣಗಳೆಲ್ಲ ತಳಕ್ಕೆ ಕುಳಿತ ಬಳಿಕ ಮೇಲೆ ನಿಂತ ತಿಳಿನೀರನ್ನು ಊರಿಗೆ ಸರಬರಾಜು ಮಾಡುವ ಪೈಪಿಗೆ ಬಿಡುವ ಯೋಜನೆ ಸಮರ್ಪಕ ಎಂಬ ನಿರ್ಣಯಕ್ಕೆ ಬರುತ್ತೀರಿ.

''ಈ ರೀತಿ ಎಲ್ಲ ನೀರು ಬಿಟ್ಟ ಬಳಿಕ ಟ್ಯಾಂಕ್ ಬರಿದಾಗುತ್ತದೆ. ಮತ್ತೆ ರಾಡಿನೀರನ್ನು ತುಂಬಿಸಿದಾಗ, ಅದು ತಿಳಿಗೊಳ್ಳುವವರೆಗೆ ಸಮಯ ಬೇಕಲ್ಲವೇ ? ಆಗ ಏನು ಮಾಡಬೇಕು ? ''**ನೀರಿನ ಪೂರೈಕೆಯಲ್ಲಿ ವ್ಯತ್ಯಯ ವಾಗುತ್ತದೆ, ಸಾರ್ವಜನಿಕರು ಸಹಕರಿಸಬೇಕು**'' ಎಂಬ ಒಕ್ಕಣೆಯನ್ನು ಹೊತ್ತ ಪ್ರಕಟಣೆಯನ್ನು ಕೊಡುವುದೂ ಒಂದು ವಿಧಾನ. (ಸ್ವಲ್ಪ ನಾಚಿಕೆಗೇಡು ಅಷ್ಟೆ!) ಅದರ ಬದಲು ದೂರದೃಷ್ಟಿಯುಳ್ಳ ಇಂಜಿನಿಯರುಗಳು ಪ್ರಾರಂಭ ದಲ್ಲಿಯೇ ಇನ್ನೊಂದು ಅಂತಹ ಟ್ಯಾಂಕ್ ನಿರ್ಮಿಸಿ, ಒಂದು ಟ್ಯಾಂಕಿನಿಂದ ನೀರು ಪೂರೈಸುತ್ತಿರುವಾಗ ಇನ್ನೊಂದರಲ್ಲಿ ರಾಡಿನೀರು ತಿಳಿಯಾಗುವ ಕಾರ್ಯ ಪೂರ್ತಿಗೊಳ್ಳುವಂತೆ ವ್ಯವಸ್ಥೆ ಮಾಡಿರುತ್ತಾರೆ. ನಗರಕ್ಕೆ ಅಗತ್ಯವಿರುವಷ್ಟು ನೀರನ್ನು ಶೇಖರಿಸಿಟ್ಟು ಪೂರೈಸಲು ಅಗತ್ಯವಿರುವಷ್ಟು ಟ್ಯಾಂಕುಗಳನ್ನು ಯೋಜನೆಯ ಆರಂಭದಲ್ಲಿಯೇ ನಿರ್ಮಿಸುವುದು ಅವರ ದೂರದೃಷ್ಟಿಯ ದ್ಯೋತಕ.''

ಈ ಪ್ರಕಾರ ಪಾಠಮಾಡುವ ಕ್ರಮದಲ್ಲಿ ವಿದ್ಯಾರ್ಥಿಗಳ ವಿಚಾರಶಕ್ತಿಯು ನೀರು ಸರಬರಾಜಿನ ಪ್ರಕ್ರಿಯೆಯ ಪ್ರತಿಹಂತದಲ್ಲಿ ಪಾಲುಗೊಂಡ ಅನುಭವವಾಗುತ್ತದೆ.

ಅದರ ಬದಲು ಈಗ ಇರುವ ಪದ್ಧತಿಯಂತೆ ''ರಾಡಿನೀರಿನ ಕೊಳದ ದಂಡೆಯಲ್ಲಿಯ ಊರಿಗೆ ನೀರು ಸರಬರಾಜು ಮಾಡುವುದಕ್ಕೆ ಎರಡು ಟ್ಯಾಂಕುಗಳನ್ನು ನಿರ್ಮಿಸಿ, ಒಂದರಿಂದ ನೀರು ಸರಬರಾಜಾಗುತ್ತಿರುವಾಗ ಇನ್ನೊಂದರಲ್ಲಿ ನೀರು ತಿಳಿಗೊಳ್ಳುವ ಪ್ರಕ್ರಿಯೆ ನಡೆಯುವಂತೆ ಯೋಜಿಸಲಾಗುತ್ತದೆ'' ಎನ್ನುವ ರೀತಿಯಲ್ಲಿ ಬೋಧಿಸಿದರೆ ವಿದ್ಯಾರ್ಥಿಗಳಿಗೆ ''ಇದನ್ನೆಲ್ಲ ಯೋಜಿಸಿ ದವರು ಬಹಳ ಬುದ್ಧಿವಂತರು, ಅವರು ನಿರ್ಮಿಸಿದ್ದನ್ನು ನಾವು ನೋಡಿಕೊಂಡು ಹೋದರೆ ಆಯಿತು'' ಎಂಬ ಭಾವನೆ ಬರಬಹುದಲ್ಲವೇ ?

ನಮ್ಮ ಭಾರತ ಮಹಾನ್ ಆಗಬೇಕಾದರೆ ಅದನ್ನು ನಿರ್ಮಿಸುವುದರಲ್ಲಿ ಪಾಲುಗೊಳ್ಳುವ ವಿದ್ಯಾರ್ಥಿಗಳನ್ನೂ ಅದಕ್ಕೆ ಸರಿಹೊಂದುವ ರೀತಿಯಲ್ಲಿ ತಯಾರಿಸಬೇಕು. ಅದಕ್ಕಾಗಿ ಶಿಕ್ಷಣ ಪದ್ಧತಿಗೆ ಕಾಯಕಲ್ಪದ ಅಗತ್ಯವಿದೆ. ಮೊದಲನೆಯ ವರುಷದಿಂದಲೇ ಪರಿಣಾಮಕಾರಿ ಯಾಗುವಂತೆ ಆಚರಣೆಯಲ್ಲಿ ತರಬೇಕೆಂದು ಪಾಲಕರೂ, ಸಾರ್ವಜನಿಕರೂ ಬಲವಂತ ಮಾಡಬೇಕಾಗಿದೆ.

ವಿಜಯನಗರ, ಮೈಸೂರು **ವಿಕ್ರಮ ಕವಲಿ**

### 'ಹೊಸತು' – ಅಕ್ಟೋಬರ್ ೨೦೦೬

ಸುವರ್ಣ ಕರ್ನಾಟಕದ ವರ್ಷಾಚರಣೆಯ ಸಂದರ್ಭಕ್ಕೆ 'ಹೊಸತು' ನೀಡಿರುವ ಕನ್ನಡ ಪರ ಲೇಖನಗಳು ಒಂದಕ್ಕಿಂತ ಒಂದು ಮಾಸಿಕದ ಮೆರುಗನ್ನು ವೃದ್ಧಿ ಗೊಳಿಸುತ್ತಿವೆ. ಈ ನಿಟ್ಟಿನಲ್ಲಿ 'ಕನ್ನಡ-ಕನ್ನಡಿಗ-ಕರ್ನಾಟಕ' ಕನ್ನಡ ಪುಸ್ತಕ ಪ್ರಾಧಿಕಾರದ ಪ್ರಕಟಣೆಯನ್ನು ಕುರಿತಾದ ಲೇಖನ ವ್ಯಾಖ್ಯಾನ, ಅಂಕಿ-ಅಂಶಗಳೊಂದಿಗೆ ಪ್ರತಿಯೋರ್ವ ಕನ್ನಡಿಗನ ಮನವನ್ನು ಕಲಕುವಲ್ಲಿ ಯಶಸ್ವಿ. ನಮ್ಮ ಇಂದಿನ ನಾಯಕರಲ್ಲಿ ಕನ್ನಡ ಪರ ಕಾಳಜಿ ಮೂಡಿಸುವಲ್ಲಿ ಒಂದು ಚಿಂತನೆಯೂ ಆಗಿದೆ.

'ಜಾಗತೀಕರಣ ಮತ್ತು ಸಮಕಾಲೀನ ದೃಶ್ಯ ಮಾಧ್ಯಮಗಳು' ಬಿ. ಸುರೇಶರ ಸಾರಥ್ಯದಲ್ಲಿ ಒಂದು ನೈಜ ಚರ್ಚೆಯಾಗಿ ಹೊರಹೊಮ್ಮಿದೆ. ಕನ್ನಡ ಚಿತ್ರರಂಗಕ್ಕೆ ಅಂಟಿ ಕೊಂಡು ಕನ್ನಡ ಚಲನಚಿತ್ರರಂಗವನ್ನು ಕಾಡುತ್ತಿರುವ ರೀಮೇಕ್ ರೋಗವನ್ನು ಕುರಿತಾದ ಲೇಖಕರ ಧೋರಣೆ ಇಂದಿನ ಪರಿಸ್ಥಿತಿಯ ಪ್ರತೀಕ. ನಿಜಕ್ಕೂ ಮಧ್ಯಮ ವರ್ಗದ ಕನ್ನಡಿಗರು ಇಂದು ಕನ್ನಡ ಚಲನಚಿತ್ರ ಗಳಿಂದ ದೂರವಾಗಿರುವುದಕ್ಕೆ ಸಕಾರಣಗಳನ್ನು ಪ್ರತಿಬಿಂಬಿಸುವಲ್ಲಿನ ದರ್ಪಣವೇ ಎಂದರೂ ಅತಿಶಯೋಕ್ತಿಯಲ್ಲ.

ವಿಜಯನಗರ, ಬೆಂಗಳೂರು **ನೆ. ಲ. ರಾಮಮೂರ್ತಿ**

'ವಂದೇ ಮಾತರಂ' ಗೀತೆಯ ಇತಿಮಿತಿಯನ್ನು, ಹಿನ್ನೆಲೆಯನ್ನು, ವಿವರಿಸಿ ಅದರ ಮತ್ತೊಂದು ಮಗ್ಗುಲಿನ ಮೇಲೆ ಬೆಳಕುಚೆಲ್ಲಿದ್ದೀರಿ. ಆದರೂ ನಾವು ಬಲ್ಲಂತೆ ಜಗತ್ತಿನ ಎಲ್ಲ ದೇಶಗಳೂ ತಮ್ಮ ದೇಶವನ್ನ ಮಾತೃದೇಶ ವನ್ನಾಗಿಯೇ ಪರಿಗಣಿಸುತ್ತಿವೆ. ಇಂದು ಕನಿಷ್ಠ ೪೦ರ ಆಸುಪಾಸಿನ ಸಂಖ್ಯೆಯಲ್ಲಿರುವ ಮುಸ್ಲಿಂ ರಾಷ್ಟ್ರಗಳ ಮುಸ್ಲಿಂ ಬಾಂಧವರೆಲ್ಲ ಮಾತೃದೇಶಕ್ಕೆ ವಂದಿಸುವುದಿಲ್ಲವೇ ? ಅಲ್ಲಾನನ್ನು ಬಿಟ್ಟು ಇನ್ನಾರಿಗೂ ನಾವು ಹಣೆ ಬಾಗೆವು ಎನ್ನುವ ಮುಸ್ಲಿಂ ಜನ ಅಲ್ಲಲ್ಲಿಯ ತಮ್ಮ ದೇಶಮಾತೆಗೂ ರಾಷ್ಟ್ರಧ್ವಜಕ್ಕೂ ಅಷ್ಟೆ ಅಲ್ಲ, ತಮ್ಮ ಧರ್ಮಗುರುಗಳು, ತಮ್ಮನ್ನು ಹೆತ್ತ ತಂದೆ ತಾಯಿಗಳಿಗೂ ನಮಿಸುವುದಿಲ್ಲವೇ ?

ಯಕ್ಸಂಬಾ, ಬೆಳಗಾವಿ **ಡಾ|| ಅನಿಲ ಕಮತಿ**

ಕವಿ ನಿಸಾರ್ ಅಹಮದ್ ಅವರ ಕಾವ್ಯಕೃಷಿಯ ವಿವಿಧ ಮುಖ (ಮಜಲು)ಗಳನ್ನು ವೈವಿಧ್ಯಮಯ ವಿಶಿಷ್ಟ ಶೈಲಿಯೊಂದಿಗೆ ಲೇಖಕರು ವಾಚಕಾಭಿಮಾನಿಗಳಿಗೆ ಪರಿಚಯಿಸಿರುವುದು ಖುಷಿ ನೀಡಿತು. ಲೇಖಕರ ಲೇಖನದಿಂದ 'ಕವಿ-ಕಾವ್ಯ-ತುಡಿತ-ಮಿಡಿತ'ವು ಓದುಗರ ಹೃದಯ ತಟ್ಟಿವೆ. ಪ್ರಕಟಿಸಿದ 'ಹೊಸತು'ವಿಗೂ ಲೇಖಕರಿಗೂ ಧನ್ಯವಾದಗಳು. ಹಾಂ ! ಕವಿಯ ಕಾವ್ಯ ಕೃಷಿಯ ಜೊತೆಗೆ ನಿಸಾರ್ ಅವರು ವಿಹರಿಸಿದ ಗದ್ಯ ಲೇಖನದ ಪರಿಚಯದ 'ಝಲಕ್' ಇದ್ದಲ್ಲಿ ಇನ್ನೂ ಮೆರುಗಿರುತ್ತಿತ್ತು.

ಮುಂಡರಗಿ **ಎಮ್. ಎಮ್. ಹೆಬ್ಬಾಳ**

### ಸಂಗೀತ ವಿಮರ್ಶೆ

ಬದುಕಿನ ಅವಿಭಾಜ್ಯ ಅಂಗವಾಗಿರುವ ಭಾವನಾತ್ಮಕ ಭಾಷೆ, ಹಾಗೂ ನಾಗರಿಕತೆಗಳನ್ನು ಪ್ರತಿಬಿಂಬಿಸುವ ಸಂಗೀತವನ್ನು ವಿಮರ್ಶಿಸುವ ರೀತಿನೀತಿಗಳ ಬಗ್ಗೆ ಅಪರೂಪವೆನಿಸುವ ಮಾಹಿತಿಪೂರ್ಣ ಲೇಖನವನ್ನು ಡಾ|| ಕೆ. ಪೂರ್ಣಮಂಗಳಾ ನೀಡಿದ್ದಾರೆ. ತಮ್ಮ ಭಾವ ಗಳನ್ನು ರಾಜನ ಸಮ್ಮುಖದ ಸಂಗೀತ ಸಭೆಯಲ್ಲಿ ಪ್ರದರ್ಶಿ ಸುತ್ತಿದ್ದ ನಿಜ ಸಂಗೀತಗಾರರನ್ನು ಪತ್ತೆಮಾಡಲು ತಲೆ ಅಲ್ಲಾಡಿಸುವವರ ತಲೆಗಳನ್ನು ಕತ್ತರಿಸಲಾಗುವುದು ಎಂಬ ಆಜ್ಞೆಯನ್ನು ನೀಡಿದ ರಾಜ ಪ್ರಥಮ ವಿಮರ್ಶಕನಾಗಿ ನಮಗೆ ಪರಿಚಯಿತರಾಗಿದ್ದಾರೆ. ಇಂದಿನ ದಿನಗಳಲ್ಲಿ ಸಂಗೀತದ ವಿಸ್ತಾರತೆ, ಹಾಗೂ ಅಧ್ಯಯನಗಳಿಂದಾಗಿ ಈ ಕ್ಷೇತ್ರದಲ್ಲಿ ಅದ್ಭುತವಾದ ಬೆಳವಣಿಗೆಯು ವಿವಿಧ ಆಯಾಮಗಳನ್ನು ಪಡೆದುಕೊಂಡಿರುವಾಗ ಸಂಗೀತದ ಮೌಲ್ಯಗಳು ಏರುಪೇರಾಗುತ್ತಿರುವಾಗ ಅವುಗಳನ್ನು ಗುರುತಿಸಿ, ಸಹಜ, ಕೃತ್ರಿಮ, ವ್ಯಾಪಾರಿ, ಜನಪ್ರಿಯ, ಸಾಂಪ್ರದಾಯಿಕ, ಶಾಸ್ತ್ರೀಯ ಹಾಗೂ ಶುದ್ಧತೆಗಳ ಬಗ್ಗೆ ವಿಮರ್ಶಿಸುವ ಗುರುತರವಾದ ಜವಾಬ್ದಾರಿ ವಿಮರ್ಶಕರ ಮೇಲಿದೆ. ಸಂಗೀತವು ಪ್ರದರ್ಶಕ ಕಲೆಯಾಗಿರುವು ದರಿಂದ ಅವುಗಳನ್ನು ವಿಂಗಡಿಸಿ, ವಸ್ತು ಹಾಗೂ ವ್ಯಕ್ತಿ ನಿಷ್ಠವೆಂದು, ರಾಗತಾಳಗಳ ಸಮ್ಮಿಶ್ರಣದ ಫಲಗಳನ್ನು, ಮೂಡಿ ಮರೆಯಾಗುತ್ತಿರುವ ಮಾಧುರ್ಯದ ನಾದ ಗಳನ್ನು ತುಲನಾತ್ಮಕವಾಗಿ ಅರಿಯಲು ಪ್ರತಿಯೊಬ್ಬರೂ ಸಂಗೀತಗಾರರಾಗಿರಬೇಕಿಲ್ಲ ಎಂಬುದು ಸಾರ್ವಕಾಲಿಕ ಸತ್ಯವಾಗಿರುವಾಗ ಸಂಗೀತಗಾರ, ಸಂಗೀತ, ಭಾಷೆ, ರಾಗ ಹಾಗೂ ಶೈಲಿಗಳ ಬಗ್ಗೆ ಬರೆದು ಅವುಗಳ ಮೂಲರೂಪವು ರೂಪಾಂತರವಾಗದೆ ಉಳಿದು ಒಟ್ಟಾರೆ ಆನಂದವನ್ನು ಅನುಭವಿಸುವಲ್ಲಿ ಹೆಚ್ಚಿನ ಪರಿಶ್ರಮವನ್ನು ವಿಮರ್ಶಕರು ವಹಿಸಿಕೊಳ್ಳಬೇಕಾಗಿದೆ ಎಂಬುದನ್ನು ನಿರೂಪಿಸಿರುವ ಲೇಖನಕ್ಕಾಗಿ ಅಭಿನಂದನೆಗಳು.

ಬೆಂಗಳೂರು *ನರೇಂದ್ರ ಸಿರಕಜೆ*

*೩ನೇ ಪುಟದಿಂದ (ಈ ತಿಂಗಳು)*

ಕ್ಷಮಾದಾನ ಮಾಡಬೇಕೇ ಇಲ್ಲವೇ ಎಂಬುದನ್ನು ಪ್ರಧಾನ ರಾಜಕೀಯ ಪಕ್ಷಗಳು ದೇಶದಲ್ಲಿ ಬಹಿರಂಗವಾಗಿ ಗುದ್ದಾಟಗಳಿಂದ ತಾವೇ ತೀರ್ಮಾನಿಸಹೊರಟಿವೆ. ಮರಣದಂಡನೆಯನ್ನು ಶಾಸನರೀತ್ಯಾ ತೆಗೆದುಹಾಕದಿರುವ ನಮ್ಮ ದೇಶದಲ್ಲಿ ನ್ಯಾಯಾಲಯಗಳು ಆ ಶಿಕ್ಷೆಯನ್ನು ವಿಧಿಸುತ್ತವೆ. ಬೇರೆ ಸಂದರ್ಭಗಳಲ್ಲಿ ನ್ಯಾಯಾಲಯದ ಶ್ರೇಷ್ಠತೆಯನ್ನು ಸಾರುವವರಿಗೆ ಈ ವಿಷಯದಲ್ಲಿ ಅದೇಕೋ ಮುಜುಗರ ಉಂಟಾಗಿದೆ. ಗುರುವನ್ನು ನೇಣುಗಂಭಕ್ಕೇರಿಸಿದರೆ ದೇಶ ಹತ್ತಿ ಉರಿಯದಿರಬಹುದು, ಆದರೆ ಕಾಶ್ಮೀರದಲ್ಲಿ ಪ್ರಕ್ಷುಬ್ಧತೆ ಹೆಚ್ಚುತ್ತದೆಂಬ ನಿರೀಕ್ಷೆ ವಾಸ್ತವವಾದ್ದು. ದಿನೇ ದಿನೇ ಕ್ಷೀಣಿಸುತ್ತಿರುವ ಕಾಶ್ಮೀರದ ವಾತಾವರಣವನ್ನು ಗಡುಸು ಮಾತುಗಳಿಂದ ತಿಳಿಗೊಳಿಸಲಾಗುವುದಿಲ್ಲ. ಗುರುವಿನ ಮರಣದಂಡನೆಯನ್ನು ಜೀವಾವಧಿ ಶಿಕ್ಷೆಯಾಗಿ ಪರಿವರ್ತಿಸಬೇಕೆಂದು ನುಡಿಯದೆ ಜನರ ನಡುವೆ ಹೋಗಲಾಗದಿರುವ ಸನ್ನಿವೇಶದ ಸೃಷ್ಟಿ ಕಾಶ್ಮೀರದಲ್ಲಿ ಹೇಗುಂಟಾಯಿತೆಂದು ಈಗ ತಲೆ ತುರಿಸಿಕೊಂಡರೆ ಪ್ರಯೋಜನವಿಲ್ಲ. ಕಾಶ್ಮೀರದ ಹೊರಗಿರುವವರು ಸಂವಿಧಾನದ ಮಾತನ್ನಾಡಬಹುದು, ಆದರೆ ಒಳಗೆ ಸಂವಿಧಾನ ಎಲ್ಲಿದೆಯೆಂದು ಶೋಧಿಸಿ ತೆಗೆಯಬೇಕಾಗಿದೆ. ಅಫ್‌ಜಲ್ ಬದುಕಿದ್ದರೆ ನಾಳೆ ಯಾವುದಾದರೊಂದು ವಿಮಾನವನ್ನು ಅಪಹರಿಸಿ ಭಯೋತ್ಪಾದಕರು ಅವನ ಬಿಡುಗಡೆಗೆ ಒತ್ತಾಯಿಸಿದರೆ ಮತ್ತೆ ಅದ್ವಾನಿ ಪಕ್ಷದ ವಿದೇಶಾಂಗ ಸಚಿವ ಅವನನ್ನು ಕರೆದುಕೊಂಡು ಹೋಗಿ ಕಂದಾಹಾರ್‌ನಲ್ಲೋ ಜೆಡ್ಡಾದಲ್ಲೋ ಬಿಟ್ಟುಬರಬೇಕಾಗಬಹುದೆಂಬ ಆತಂಕವಿದೆ, ನಿಜ. ಆದರೆ ರಾಷ್ಟ್ರಪತಿಗಳು ಕ್ಷಮೆ ಕೊಡುವುದಾದರೆ ಅದನ್ನೆಲ್ಲಾ ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲ. ಜೊತೆಗೆ ಅಫ್‌ಜಲ್‌ನನ್ನು ನೇಣುಗಂಬಕ್ಕೇರಿಸಿದರೆ ಮಾನವ ಹಕ್ಕು ಚ್ಯುತಿಯಾಯಿತೆಂದು ನಾವು ತಳಮಳ ಅನುಭವಿಸಬೇಕಾಗಿಲ್ಲ. ನ್ಯಾಯಾಲಯವು ತೀರ್ಮಾನಕ್ಕೆ ಬರುವಾಗ ದಾಖಲೆಗಳನ್ನೆಲ್ಲಾ ಸರಿಯಾಗಿ ಪರಿಶೀಲಿಸಿಲ್ಲದಿದ್ದರೆ ಈಗ ಅದನ್ನು ಆದ್ಯತೆಯ ಪ್ರಕಾರ ನೆರವೇರಿಸಿ ಆಮೇಲೆ ಮರಣದಂಡನೆಯನ್ನು ಸ್ಥಿರೀಕರಿಸಬೇಕು ಇಲ್ಲವೇ ರದ್ದುಮಾಡಬೇಕು.

ನಿಜಕ್ಕೂ ತಳಮಳಕ್ಕೆ ಕಾರಣವಾಗುತ್ತಿರುವುದು ಮಣಿಪುರ. ಇನ್ನು ಎರಡು-ಮೂರು ವರ್ಷಗಳಲ್ಲಿ ಮಣಿಪುರವು ಇಂದಿನ ಕಾಶ್ಮೀರದಂತಾದರೆ ಯಾರನ್ನು ದೂಷಿಸಬೇಕು? ರಾಷ್ಟ್ರಪತಿ ಇತ್ತೀಚೆಗೆ ಅಲ್ಲಿಗೆ ಭೇಟಿ ನೀಡಿದಾಗ ಹೆಲಿಕಾಪ್ಟರ್‌ಗಳಲ್ಲಿ ಮಾತ್ರವೇ ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಹೋಗಬೇಕಾಯಿತು. ನಿರ್ಜನವಾದ ರಸ್ತೆಗಳು. ಅಧ್ಯಕ್ಷರಿಗೆ ಯಾಕಾದರೂ ಬಂದೆನೋ ಎನಿಸಿರಬೇಕು. ಮಹಿಳೆಯರು ಬೆತ್ತಲಾಗಿ ಪ್ರತಿಭಟಿಸಿದ್ದಾಗ್ಯೂ ಸರ್ಕಾರಗಳು ಕಣ್ಣುಬಿಡುವುದಿಲ್ಲ. ಅವರು ದೆಹಲಿಯಲ್ಲಿ ಉಪವಾಸ ಆರಂಭಿಸಿದರೆ ದಸ್ತಗಿರಿ ಮಾಡಿ ಜೈಲಿಗೆ ಕಳಿಸುತ್ತಾರೆ. ಇಷ್ಟಾಗಿ, ಮಣಿಪುರ ಒತ್ತಾಯಿಸುತ್ತಿರುವುದು ಒಂದು ಕ್ರೂರ ಶಾಸನವನ್ನು ಹಿಂತೆಗೆದುಕೊಳ್ಳಬೇಕೆಂದು, ಅಷ್ಟೇ. ಆ ಬಗ್ಗೆ ಕೇಂದ್ರದ ಅಧಿಕೃತ ಸಮಿತಿಯ ಶಿಫಾರಸ್ಸು ಸಹ ಇದೆ. ಆದರೆ ಗೃಹ ಸಚಿವಾಲಯ ಇನ್ನೂ ಹಿಂದು-ಮುಂದು ನೋಡುತ್ತಿದೆ. ಸೈನಿಕರ ಎಲ್ಲ ಕೃತ್ಯಗಳಿಗೂ ರಕ್ಷಣೆ ನೀಡುವ ಕಾನೂನು ಅದು. ಭಾವನೆಗಳನ್ನು ತುಳಿಯುತ್ತಾ ಹೋದಂತೆ ಮಣಿಪುರವು ಕಾಶ್ಮೀರವಾಗದಿರುತ್ತದೆಯೇ? ಆಮೇಲೆ ನಾವು ಮಣಿಪುರದವರಿಗೆ ದೇಶಭಕ್ತಿ ಸಾಲದೆಂದು ಬೆಂಗಳೂರಿನಲ್ಲಿ ಹೇಳಿಕೆ ನೀಡುತ್ತಿರಬೇಕು, ಅಷ್ಟೇ!

ಇದಕ್ಕೆ ಸಮವಲ್ಲದಿದ್ದರೂ ಒರಿಸ್ಸಾದಲ್ಲಿ ಸಣ್ಣ ರೈತರ ಮೇಲೆ ನಡೆದ ಹಲ್ಲೆ ಆತಂಕಕ್ಕೆ ಎಡೆಮಾಡಿದೆ. ಬಹುರಾಷ್ಟ್ರೀಯ ಕಂಪನಿಗೆ ತಮ್ಮ ಭೂಮಿಯನ್ನು ಬಿಟ್ಟುಕೊಡಲು ಸಿದ್ಧರಿಲ್ಲದವರನ್ನು ಚೆನ್ನಾಗಿ ಚಚ್ಚಿದರೆ ನಾಳೆ ಶಾಂತಿ ನೆಲೆಸುತ್ತದೆಯೇ? ಅವರನ್ನು ಚರ್ಚೆಗೆ ಆಹ್ವಾನಿಸಿ, ಪರ್ಯಾಯ ಜೀವನಕ್ಕೆ ಏನು ಕಲ್ಪಿಸಿಕೊಡಲು ಸಾಧ್ಯವೆಂಬುದನ್ನು ವಿವರಿಸಿ ಮನವೊಲಿಸಬೇಕು. ದಂಡಪ್ರಯೋಗದಿಂದಲೇ ಎಲ್ಲವನ್ನೂ ಸಾಧಿಸುವ ಹುಚ್ಚು ದೇಶವನ್ನು ನಾಶಮಾಡುತ್ತದೆ. ನಮ್ಮ ರಾಜ್ಯದಲ್ಲಿ ಸಹ ವಿಶೇಷ ಆರ್ಥಿಕ ವಲಯಗಳ ರಚನೆಗೆ ಫಲವತ್ತಾದ ಭೂಮಿಯನ್ನು ರೈತರಿಂದ ಕಿತ್ತುಕೊಳ್ಳುವ ಯತ್ನ ನಡೆಯುತ್ತಿದೆ. ಅಲ್ಲಿ ಲಾಭವು ವಿದೇಶಿ ಉದ್ಯಮಗಳಿಗೆ ಮತ್ತು ನಮ್ಮಲ್ಲಿರುವ ಅವರ ಏಜೆಂಟರಿಗೆ. ಸರ್ಕಾರವು ಆ ಭೂಮಿಯು ಫಲವತ್ತಾದುದಲ್ಲವೆಂಬ ಸುಳ್ಳು ಹೇಳಿ ತಪ್ಪಿಸಿಕೊಳ್ಳಲಾಗದು. ಬೆಂಗಳೂರಿನ ಎನ್.ಜಿ.ಇ.ಎಫ್. ಜಾಗದಲ್ಲಿ ಇಂತಹ ತಾಣಕ್ಕೆ ಆಸ್ಪದ ನೀಡುವುದು ಬೇರೆ, ಮಂಡ್ಯದ ಬಳಿ ಭತ್ತ ಬೆಳೆಯುವ ಭೂಮಿಯನ್ನು ಬಹುರಾಷ್ಟ್ರೀಯ ಕಂಪನಿಗಾಗಿ ಮೀಸಲಿಡುವುದು ಬೇರೆ. ಚಿದಂಬರಂ-ಅಹ್ಲುವಾಲಿಯ ಆರ್ಥಿಕತೆಯು ಎಲ್ಲವನ್ನೂ ವಿದೇಶೀಯರಿಗೆ ಪರಭಾರೆ ಮಾಡುವುದಷ್ಟೇ ಆಗಿರುವುದು ಶೋಚನೀಯ. ಬರುವ ಪಂಚವಾರ್ಷಿಕ ಯೋಜನೆಯನ್ನು ಎಲ್ಲ ಕ್ಷೇತ್ರಗಳಲ್ಲೂ ಸಂಪೂರ್ಣ ಖಾಸಗೀಕರಣಕ್ಕೆ ಬಳಸಿಕೊಳ್ಳುವ ಹುನ್ನಾರ ಖಚಿತವಾಗಿದೆ. ಜನ ಎಚ್ಚೆತ್ತುಕೊಳ್ಳಬೇಕು, ಇಲ್ಲವೇ ನವವಸಾಹತುಶಾಹಿಗೆ ದಾಸರಾಗಬೇಕು. ಆಯ್ಕೆ ನಮ್ಮದು, ನಾಳೆ ಗೊಣಗಾಡಿದರೆ ಅದು ನಿರರ್ಥಕ.

ಈ ಸಂಬಂಧದಲ್ಲಿ ಕೇಂದ್ರ ಮಂತ್ರಿ ರಾಮವಿಲಾಸ ಪಾಸ್ವಾನರ ಒಂದು ಅಭಿಪ್ರಾಯ ಗಮನಾರ್ಹವಾಗಿದೆ. ಅದನ್ನು ನಾವು ಮೂವತ್ತು ವರ್ಷಗಳಿಂದಲೂ ಹೇಳುತ್ತಾ ಬಂದಿದ್ದೇವೆ. ದೇಶದಲ್ಲಿರುವ ಕಬ್ಬಿಣದ ಅದಿರನ್ನು ರಫ್ತು ಮಾಡುತ್ತಾ ನಮ್ಮ ಸಂಪತ್ತನ್ನು ಹಾಳುಗೆಡಹಬಾರದೆಂಬುದು ಅವರ ಸಲಹೆ. ನಮ್ಮ ದೇಶಕ್ಕಿಂತಲೂ ಹೆಚ್ಚು ನಿಕ್ಷೇಪ ಹೊಂದಿರುವ ಚೀಣಾ ಅದಿರನ್ನು ರಫ್ತು ಮಾಡುವುದಿಲ್ಲ, ಬದಲಾಗಿ ಉಕ್ಕನ್ನು ಆಮದು ಮಾಡಿಕೊಳ್ಳುತ್ತಿದೆ. ಪಾಸ್ವಾನರ ಈ ಮಾತನ್ನು ವಾಣಿಜ್ಯ ಮಂಡಲಿ ಟೀಕಿಸಿದೆ. ರಫ್ತಿನಿಂದ ಹಣ ಮಾಡಿಕೊಳ್ಳುತ್ತಿರುವ ಮಂಡಲಿಯ ಸದಸ್ಯರಿಂದ ಇನ್ನೇನು ನಿರೀಕ್ಷಿಸಬೇಕು! ವಿದೇಶಿ ವಿನಿಮಯ ಗಳಿಸಲು ಇಂದು ನಾವು ಕಬ್ಬಿಣದ ಅದಿರನ್ನು ಮಾರುವ ಅವಶ್ಯಕತೆಯಿಲ್ಲ. ನಿಕ್ಷೇಪವನ್ನು ಉಳಿಸಿಕೊಂಡು ಸರಕುಗಳ ತಯಾರಿಕೆ - ಮಾರಾಟ ನಮ್ಮ ಸೂತ್ರವಾಗಬೇಕು.

ಮಂಗಳೂರು-ಬಂಟ್ವಾಳ-ಸುಳ್ಯ-ಉಲ್ಲಾಳ ಮುಂತಾದೆಡೆ ಭುಗಿಲೆದ್ದ ಹಿಂಸಾಚಾರವು ಆಕಸ್ಮಿಕವಲ್ಲ. ಕೆಲವು ವರ್ಷಗಳಿಂದ ಅದಕ್ಕೆ ರಂಗ ಸಜ್ಜಾಗುತ್ತಿದ್ದಿತೆಂದು ನಮ್ಮ ಗೃಹ ಸಚಿವ ಶ್ರೀ ಎಂ. ಪಿ. ಪ್ರಕಾಶ್ ಅವರಿಗೆ ತಿಳಿದಿದೆ. ಅವರು ಜೆ. ಎಚ್. ಪಟೇಲ್ ಸಂಪುಟದಲ್ಲಿ ಸಚಿವರಾಗಿದ್ದಾಗ ಬಾಗೂರು-ನವಿಲೆಯಲ್ಲಿ ಪೊಲೀಸರು ನಡೆಸಿದ ಹಲ್ಲೆ ಅವರ ನೆನಪಿನಲ್ಲಿ ಉಳಿದಿರಬಹುದು. ಆಗ ಇವರು ಗೃಹ ಸಚಿವರಾಗಿರಲಿಲ್ಲ. ಈಗ ಉಲ್ಲಾಳದಲ್ಲಿ ಅಂಥದೇ ಹೇಯ ಕೃತ್ಯವನ್ನು ಪೊಲೀಸರು ಎಸಗಿದ್ದಾರೆಂದು ವರದಿಯಾಗಿದೆ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದವರನ್ನು ತನಿಖೆಗೆ ಸ್ವತಃ ಪ್ರಕಾಶ್ ಅವರೇ ಆಹ್ವಾನಿಸಿದರೆ ಅವರಿಗೆ ಸ್ವಲ್ಪ ಮರ್ಯಾದೆ ಉಳಿಯುತ್ತದೆ. ಬೇರೆಯಂತೆ, ಕೋಮು ಗಲಭೆಗೆ ಯಾವುದೋ ಒಂದು ಘಟನೆ ಮೂಲಭೂತ ಕಾರಣವಾಗುವುದಿಲ್ಲ; ಅದೊಂದು ನೆಪ ಅಷ್ಟೇ. ಮೊದಲ ಅಪರಾಧ ಯಾರಿಂದ ಆಯಿತೆಂಬುದು ಪುಂಡಾಟಿಕೆಗೆ ಮುಕ್ತ ಸ್ವಾತಂತ್ರ್ಯ ನೀಡಬೇಕೆಂಬ ಕಾನೂನು ನಮ್ಮಲ್ಲಿಲ್ಲ. ಮೊದಲ, ಮಧ್ಯದ ಮತ್ತು ಕಡೆಯ ಅಪರಾಧಿಗಳನ್ನು ಹಿಡಿದು ಶಿಕ್ಷಿಸುವುದು ಸರ್ಕಾರದ ಕೆಲಸ, ಕಾನೂನಿನ ಕ್ರಮ. ಒಂದು ಕೋಮಿನವರು ಇನ್ನೊಂದು ಕೋಮಿನವರನ್ನು ಶಿಕ್ಷಿಸುವುದನ್ನು ಸರ್ಕಾರದಿಂದ ಗುತ್ತಿಗೆ ಪಡೆಯಲು ಬರುವುದಿಲ್ಲ. ಯಾವ ಕೋಮಿನವರೂ ಸರ್ಕಾರದ ಯಂತ್ರಕ್ಕೆ ಪರ್ಯಾಯವಲ್ಲ. ಕಾನೂನು ಮೀರಿ ಗೋವುಗಳನ್ನು ಸಾಗಿಸುವುದಾಗಲೀ, ಮಸೀದಿಯೊಂದಕ್ಕೆ ಬೆಂಕಿ ಹಚ್ಚುವುದಾಗಲೀ, ಸರ್ಕಾರದ ದೃಷ್ಟಿಯಲ್ಲಿ ಅಪರಾಧವೇ ಆಗಬೇಕು. ಆದರೆ ಕೆಲವು ವರ್ಷಗಳಿಂದ ದನ ಸಾಗಿಸುವವರನ್ನು ಖಾಸಗಿ ವ್ಯಕ್ತಿಗಳು ಮಾರ್ಗ ಮಧ್ಯದಲ್ಲಿ ತಡೆದು ಮನಬಂದಂತೆ ವರ್ತಿಸುತ್ತಿದ್ದುದನ್ನು ಪೊಲೀಸರು ನಿರ್ಬಂಧಿಸಲಿಲ್ಲ; ಪರಿಣಾಮ ಇಂದಿನ ಸಾವು-ನೋವುಗಳು. ಆರಕ್ಷಕ ದಳದಲ್ಲಿ ಸಹ ಕೋಮು ಭಾವನೆ ತೀವ್ರವಾಗಿ ಹೆಚ್ಚುತ್ತಿದೆಯೆಂಬ ದೂರು ಕೇಳಿ ಬಂದಿದೆ. ಕರ್ನಾಟಕವನ್ನು ಗುಜರಾತ್ ಮಾಡಬೇಕೆಂಬ ಮನಸ್ಸನ್ನು ಶುಚಿಗೊಳಿಸುವುದು ದೀರ್ಘಾವಧಿಯ ಕೆಲಸ; ಆದರೆ ಗುಜರಾತು ಮಾಡಲು ಹೊರಟಿರುವ ಕೈಗಳನ್ನು ಕಟ್ಟಿಹಾಕಬೇಕಾದ್ದು ತಕ್ಷಣದ ಕೆಲಸ. ಅಂತೆಯೇ, ಜಡ್ಡು ಮತಾಂಧತೆಯನ್ನು ಪ್ರಚೋದಿಸುವ ಮುಲ್ಲಾಗಳ ಬಾಯಿಗೂ ಬಟ್ಟೆ ಕಟ್ಟಬೇಕಾದ್ದು ಅನಿವಾರ್ಯ.

ಅಕ್ಟೋಬರ್ ೧೫ರಂದು ಬೆಂಗಳೂರಿನ ಎಲ್ಲಪ್ಪ ಗಾರ್ಡನ್‌ನಲ್ಲಿ ಕೆಲವು ಮತಾಂಧ ಯುವಕರು ದೇವರಾಜ್ ಎಂಬುವವರಿಗೆ ಚಿತ್ರಹಿಂಸೆ ಕೊಟ್ಟಿದ್ದನ್ನು ಖಂಡಿಸುತ್ತಾ ಅದರ ಹಿನ್ನೆಲೆಯನ್ನು ವಿಶ್ಲೇಷಿಸಿಕೊಳ್ಳಬೇಕು. ಒಬ್ಬ ದೇವರಾಜನು ಒಬ್ಬ ಯಾಸ್ಮೀನಳೊಡನೆ ಪರಸ್ಪರ ಒಪ್ಪಿಗೆಯಿಂದ ಜೊತೆಯಾಗಿ ಅಂಗಡಿಗೆ ಹೋದದ್ದನ್ನು ಸಹಿಸದ ಕೆಲವು ಮುಸಲ್ಮಾನ ಯುವಕರು ದೇವರಾಜನ ತಲೆ ಬೋಳಿಸಿ ರಸ್ತೆಯಲ್ಲಿ ಎಳೆದಾಡಿದ್ದಾರೆ. ಇದು ಯಾವ ಕೋಮಿನವರೂ ಮನ್ನಿಸುವಂತಹ ಕೆಲಸವಲ್ಲ. ಆ ಯುವಕರ ತಲೆಗಳಲ್ಲಿ ಕಶ್ಮಲ ತುಂಬಿಕೊಳ್ಳಲು ಜಡ್ಡು ಹಿಡಿದ ಮತಾಂಧತೆಯನ್ನು ಬೋಧಿಸುವ ಧರ್ಮ ಪ್ರಚಾರಕರು ಸಹ ಕಾರಣರಾಗಿರುತ್ತಾರೆ. ಯಾವಾಗಲೋ ಕ್ಷಣಮಾತ್ರದಲ್ಲಿ ಕೋಮು ಬೆಂಕಿ ಹೊತ್ತಿಕೊಳ್ಳುತ್ತದೆ. ಮಾನವ ಸಂಬಂಧಗಳನ್ನು ಕಲುಷಿತಗೊಳಿಸುವಂತಹ ಯಾವುದೇ ಕೋಮಿನ ಅಕೃತ್ಯಗಳನ್ನು ಬೆಂಬಲಿಸದಿರುವುದು, ಅವುಗಳ ವಿರುದ್ಧ ಜೊತೆಯಾಗಿ ಹೋರಾಡುವುದು ಸೌಹಾರ್ದತೆಯ ಸ್ಥಾಪನೆಗೆ ಅವಶ್ಯಕ. ದೇವರಾಜನ ಸಂದರ್ಭದಲ್ಲಿ ಇದು ಚಿಕ್ಕ ಪ್ರಮಾಣದ್ದು, ಬಾಬಾಬುಡನ್‌ಗಿರಿ ಸಂದರ್ಭದಲ್ಲಿ ದೊಡ್ಡ ಪ್ರಮಾಣದ್ದು. ಒಟ್ಟಿನಲ್ಲಿ ಸೌಹಾರ್ದದ ನೆಲೆಗಳನ್ನು ಗಟ್ಟಿಗೊಳಿಸಲು ಎಲ್ಲರೂ ಕೈಸೇರಿಸೋಣ.

# ಹುತಾತ್ಮ ಭಗತ್ ಸಿಂಗ್

ಬಸವರಾಜ ಹುಡೇದಗಡ್ಡಿ

೧೯೦೭ರ ಸೆಪ್ಟೆಂಬರ್ ೨೭ರಂದು ಪಂಜಾಬ್ ಪ್ರಾಂತ್ಯದ ರಾಯ್‌ಪುರ್ ಜಿಲ್ಲೆಯ ಬಂಗಾರ ಗ್ರಾಮದಲ್ಲಿ ಭಗತ್ ಸಿಂಗ್ ಜನಿಸಿದ. ಬಾಲಕನಾಗಿದ್ದಾಗ ಅವರ ಚಿಕ್ಕಪ್ಪನನ್ನು ಆಂಗ್ಲರು ಸೆರೆಯಲ್ಲಿಟ್ಟು ಚಿತ್ರಹಿಂಸೆ ನೀಡಿದ್ದರಿಂದಾಗಿ ಆತ ಕಾಯಿಲೆ ಗೀಡಾಗಿ ಜೈಲಿನಿಂದ ಬಿಡುಗಡೆಯ ನಂತರ ತೀರಿ ಕೊಂಡರು. ಅವರ ಸಾವಿನಿಂದ ಹತಾಶರಾಗಿದ್ದ ಚಿಕ್ಕಮ್ಮನಿಗೆ ಬಾಲಕ ಭಗತ್, ''ಅಳಬೇಡ ಚಿಕ್ಕಮ್ಮ, ನಾನು ದೊಡ್ಡವನಾದ ಮೇಲೆ ಆಂಗ್ಲರನ್ನು ನಮ್ಮ ದೇಶದಿಂದ ಒದ್ದೋಡಿಸುತ್ತೇನೆ'' ಎಂದು ಎದೆಯುಬ್ಬಿಸಿ ಹೇಳಿ ಅವರಿಗೆ ಸಮಾಧಾನ ಮಾಡಿದ್ದ. ಚಿಕ್ಕಪ್ಪನ ಧೈರ್ಯ ಸಾಹಸಗಳು ಬಾಲ ಭಗತ್‌ನ ಮೇಲೆ ಅಗಾಧ ಪರಿಣಾಮ ಬೀರಿದ್ದವು.

ಶಾಲೆಯಲ್ಲಿ ಓದುತ್ತಿರುವಾಗ ದೊಡ್ಡವರಾದ ಮೇಲೆ ಏನಾಗುವರೆಂಬುದರ ಬಗ್ಗೆ ಚರ್ಚೆ ನಡೆದಾಗ ಕೆಲವರು ವೈದ್ಯರಾಗುವುದಾಗಿ, ಸರಕಾರಿ ಅಧಿಕಾರಿಯಾಗುವುದಾಗಿ, ವ್ಯಾಪಾರಿಯಾಗುವುದಾಗಿ ಕೆಲ ಬಾಲಕರು ಹೇಳಿಕೊಂಡರೆ ಭಗತ್ ಸಿಂಗ್, ''ನಾನು ಆಂಗ್ಲರನ್ನು ದೇಶದಿಂದ ಹೊರ ದಬ್ಬುವ ಯೋಧನಾಗುವೆ'' ಎಂದು ಕೆಚ್ಚೆದೆಯಿಂದ ಹೇಳಿಕೊಂಡಿದ್ದ.

ಲಾಹೋರ್‌ನಲ್ಲಿ ನ್ಯಾಶನಲ್ ಮಹಾವಿದ್ಯಾಲಯದಲ್ಲಿ ಅಧ್ಯಯನವನ್ನು ಮಾಡುವಾಗ ಸುಖದೇವನೆಂಬ ಕ್ರಾಂತಿಕಾರಿಯ ಪರಿಚಯವಾಯಿತು. ಪುರೋಹಿತಶಾಹಿಗಳು ಶೂದ್ರರನ್ನು ಹಾಗೂ ಅಂತ್ಯಜರನ್ನು ಅತ್ಯಂತ ಕ್ರೂರ ರೀತಿಯಿಂದ ನಡೆಸಿಕೊಳ್ಳುವ ರೀತಿಯನ್ನು ಗಮನಿಸಿದ ಭಗತ್‌ರವರು ಸ್ವಾತಂತ್ರ್ಯ ಹೋರಾಟದ ಜೊತೆಜೊತೆಗೆ ಸಾಮಾಜಿಕ ಸಂಕೋಲೆಗಳಿಂದ ಜನರ ಬಿಡುಗಡೆ ಮಾಡುವ ಕುರಿತು ಚಿಂತನವನ್ನು ನಡೆಸಿದ್ದರು.

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವ ಮಹದಾಶೆ ಹೊಂದಿದ್ದ ಭಗತ್ ಅಧ್ಯಯನವನ್ನು ಕೈಬಿಟ್ಟು ಮನೆಯ ಜನರಿಗೆ ಸೂಚನೆ ನೀಡದೆ ಕಾನ್ಪುರಕ್ಕೆ ತೆರಳಿದ. ಅಲ್ಲಿ ಭಗತ್ ಸಿಂಗ್‌ಗೆ ಅಪ್ರತಿಮ ಕ್ರಾಂತಿಕಾರಿ, ದೇಶಪ್ರೇಮಿಯೊಬ್ಬರು, ''ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವುದು ಎಂದರೆ ಸುಂದರ ಪತಂಗವು ಜ್ವಾಲೆಯನ್ನು ಬಯಸಿ ಅದರ ಬಳಿ ಸಾರಿದಂತೆಯೇ'' ಎಂದು ನುಡಿದಾಗ ತತ್‌ಕ್ಷಣವೇ ಭಗತ್ ಸಿಂಗ್, ''ದೇಶವನ್ನು ಆಂಗ್ಲರ ಕಪಿಮುಷ್ಟಿಯಿಂದ, ದಾಸ್ಯದ ಸಂಕೋಲೆಗಳಿಂದ ಹೊರ ತರಲು ಹೋರಾಟ ಮಾಡುವ ದೃಢ ನಿರ್ಧಾರದಿಂದಲೇ ಮಾಡಲು ಇಲ್ಲವೇ ಮಡಿಯಲೆಂದೇ ಬಂದಿರುವೆ'' ಎಂದು ನುಡಿದರು. ಅಲ್ಲಿ ಭಗತ್ ಸಿಂಗ್‌ರವರಿಗೆ ಕ್ರಾಂತಿಕಾರೀ ವಿಚಾರಧಾರೆಯ ಚಂದ್ರಶೇಖರ ಆಜಾದ್, ದತ್, ಶಂಕರ್ ಸಂಪರ್ಕವು ಲಭಿಸಿತು.

ಸ್ವಾಭಿಮಾನಿ ಭಾರತದ ನಿರ್ಮಾಣಕ್ಕಾಗಿ ದೇಶದ ಯುವಪೀಳಿಗೆಯನ್ನು, ಕಾರ್ಮಿಕರನ್ನು ಹಾಗೂ ನಮ್ಮ ದೇಶದ ಬೆನ್ನೆಲುಬುಗಳೆಂದೇ ಹೇಳಬಹುದಾದ ರೈತರನ್ನು ಸಂಘಟಿಸಿ ಅವರಿಂದಲೇ ಸ್ವತಂತ್ರ ಗಣರಾಜ್ಯ ಸ್ಥಾಪನೆ ಮಾಡುವ ಹಾಗೂ ಈ ದಿಶೆಯಲ್ಲಿ ನಡೆಯುವ ಚಳುವಳಿಗೆ ಪ್ರೋತ್ಸಾಹ ನೀಡುವ ಉದ್ದೇಶಗಳ ಹಿನ್ನೆಲೆಯಲ್ಲಿ ರಷ್ಯಾದಲ್ಲಿ ನಡೆದ ಕ್ರಾಂತಿಯಿಂದ ಪ್ರಭಾವಿತರಾಗಿ ೧೯೨೬ರಲ್ಲಿ ಲಾಹೋರದಲ್ಲಿ 'ನೌ ಜವಾನ್ ಭಾರತ ಸಭಾ' ಎನ್ನುವ ಸಂಘಟನೆಯನ್ನು ಭಗತ್ ಸಿಂಗ್ ಪ್ರಾರಂಭಿಸಿ ತಾವು ಅದರ ಕಾರ್ಯದರ್ಶಿಯಾದರು.

''ಸೈಮನ್ ಮರಳಿ ಹೋಗು'' ಎಂಬ ಘೋಷಣೆಯೊಂದಿಗೆ ಸೈಮನ್ ಕಮೀಶನ್‌ಗೆ ರಾಷ್ಟ್ರಾದ್ಯಂತ ಪ್ರಬಲವಾದ ಪ್ರತಿರೋಧ ವ್ಯಕ್ತವಾಗತೊಡಗಿತು. ಲಾಹೋರಿನಲ್ಲಿ ೧೯೨೮ರ ಅಕ್ಟೋಬರ್ ೩೦ರಂದು ಪಂಡಿತ್ ಮದನಮೋಹನ ಮಾಳವೀಯಾ, ಪಂಜಾಬದ ಸಿಂಹವೆಂದೇ ಖ್ಯಾತರಾಗಿದ್ದ ಲಾಲಾ ಲಜಪತರಾಯ್, ಭಗತ್ ಸಿಂಗರ ನೇತೃತ್ವದಲ್ಲಿ ಸೈಮನ್ ಆಯೋಗದ ವಿರುದ್ಧ ಪ್ರತಿಭಟನಾ ರ್‍ಯಾಲಿಯನ್ನು ಸಂಘಟಿಸಲಾಗಿತ್ತು. ಪ್ರತಿಭಟನೆಯ ತೀವ್ರತೆಯನ್ನು ಸೂಕ್ಷ್ಮವಾಗಿ ಗಮನಿಸಿದ ಲಾಹೋರಿನಲ್ಲಿ ಪೊಲೀಸ್ ಅಧಿಕಾರಿಯಾಗಿದ್ದ ಸ್ಕಾಟ್ ರ್‍ಯಾಲಿ ನಡೆಸದಂತೆ ಪ್ರತಿಬಂಧಕಾಜ್ಞೆ ಜಾರಿ ಮಾಡಿದನು.

ಪ್ರತಿಬಂಧಕಾಜ್ಞೆಯನ್ನೂ ಲೆಕ್ಕಿಸದೆ ಒಂದೇ ಸಮನೆ ಸಾವಿರಾರು ಪ್ರತಿಭಟನಾಕಾರರು ಮುನ್ನುಗ್ಗ ತೊಡಗಿದರು. ಅವರ ಮೇಲೆ ಲಾಠಿಪ್ರಹಾರ ನಡೆಸುವಂತೆ ಆದೇಶಿಸಿದ ಸ್ಕಾಟ್ ಪ್ರತಿಭಟನಾ ರ್‍ಯಾಲಿಯ ಮುಂದಾಳತ್ವವಹಿಸಿ ಮುಂಚೂಣಿಯಲ್ಲಿದ್ದ ಲಾಲಾ ಲಜಪತರಾಯ್‌ರ ತಲೆಗೆ ತಾನೇ ಲಾಠಿಪ್ರಹಾರ ಮಾಡಿ ಭಾರೀ ಗಾಯವನ್ನು ಉಂಟುಮಾಡಿದ್ದರಿಂದಾಗಿ ಭಾರೀ ರಕ್ತಸ್ರಾವವಾಗಿ ೧೯೨೮ರ ನವೆಂಬರ್ ೧೭ರಂದು ಮಡಿದರು. ಭಗತ್ ಸಿಂಗ್‌ರ ಜೀವನದಲ್ಲಿ ನಡೆದ ಜಲಿಯನ್‌ವಾಲಾಬಾಗ್ ಹತ್ಯಾಕಾಂಡ ಹಾಗೂ ಲಾಲಾ ಲಜಪತರಾಯ್‌ರ ಕಗ್ಗೊಲೆಯ ಕರಾಳ ಛಾಯೆ ಹಾಗೂ ಕಾರ್ಮಿಕ ವಿವಾದ ಕಾನೂನುಗಳು ಅವರ ಆಲೋಚನೆಯ ದಿಕ್ಕನ್ನು ಸ್ಪಷ್ಟಪಡಿಸಿದವು.

ಕ್ರಾಂತಿಯ ನೇತೃತ್ವ ವಹಿಸಿದ್ದ ಭಗತ್, ಸುಖದೇವ್, ಅವರುಗಳು ಸರಕಾರಕ್ಕೆ ಸಿಂಹಸ್ವಪ್ನವಾಗಿದ್ದರು. ಶಾಸನಸಭೆಯಲ್ಲಿ ಕಾರ್ಮಿಕ ವರ್ಗಕ್ಕೆ ಉರುಳಾಗಿದ್ದ ಕಾರ್ಮಿಕ ಕಾನೂನನ್ನು ೧೯೨೯ರ ಏಪ್ರಿಲ್ ೮ರಂದು ಮಂಡಿಸುವ ನಿರ್ಧಾರವನ್ನು ಸರಕಾರ ಮಾಡಿತು. ಭಗತ್ ಸಿಂಗ್ ಹಿಂದೆ ಲಾಹೋರಿನಲ್ಲಿ ಸ್ಥಾಪಿಸಿದ 'ನೌ ಜವಾನ್ ಭಾರತ್ ಸಭಾ'ದ ಹೆಸರನ್ನು 'ಹಿಂದುಸ್ತಾನ ಸಮಾಜವಾದಿ ಗಣತಂತ್ರ ಸಂಘಟನೆ' ಎಂದು ಬದಲಾಯಿಸಿ ಅದರ ಸರ್ವ ಸದಸ್ಯರ ಸಭೆ ಕರೆದರು. ನ್ಯಾಯಕ್ಕೆ ಬ್ರಿಟಿಷ್ ಆಡಳಿತದಲ್ಲಿ ಕಿಂಚಿತ್ ಅವಕಾಶವಿಲ್ಲ. ಹಿಂಸೆ, ದಬ್ಬಾಳಿಕೆ, ಬಲಪ್ರಯೋಗಗಳ ಮೂಲಕ ಆಂಗ್ಲರು ನಮ್ಮನ್ನು ದಮನ ಮಾಡುವರು. ''ನಮ್ಮ ತ್ಯಾಗ, ಬಲಿದಾನಗಳೇ ಆಂಗ್ಲರಿಂದ ಒದಗಿಬಂದ ಸಂಕಷ್ಟಗಳಿಗೆ ಪರಿಹಾರ ನೀಡುವ ಸಮರ್ಥ ಸಾಧನಗಳಾಗಿವೆ. ಶಾಸನಸಭೆಯಲ್ಲಿ ಕಾರ್ಮಿಕ ವಿವಾದ ಕಾನೂನು ಮಂಡಿಸಿ ಮತಗಳ ಎಣಿಕೆ ಪ್ರಾರಂಭಿಸುವ ಪ್ರಕ್ರಿಯೆ ನಡೆದಾಗ ಶಾಸನಸಭೆಯ ಪ್ರೇಕ್ಷಕರ ಗ್ಯಾಲರಿಯಿಂದ ''ಇಂಕ್ವಿಲಾಬ್ ಜಿಂದಾಬಾದ್'' ಎಂಬ ಘೋಷಣೆ ಕೂಗುತ್ತಾ ಬಾಂಬುಗಳನ್ನು ಸಿಡಿಸಬೇಕು. ಇದರಿಂದಾಗಿ ಭಾರತೀಯ ಯುವಕರು ಸಚೇತನಗೊಂಡಿದ್ದಾರೆ ಎಂಬ



ಭಗತ್ ಸಿಂಗ್ ಹಾಗೂ ಇತರರ ಮೇಲೆ ವಿವಿಧ ಮೊಕದ್ದಮೆಗಳಲ್ಲಿ ವಿಚಾರಣೆ ನಡೆದು ಆಂಗ್ಲ ಸರಕಾರದ ನ್ಯಾಯಾಧೀಶರು ೧೯೩೦ ಅಕ್ಟೋಬರ್ ೭ರಂದು, ''ತಾವು ಮಾಡುತ್ತಿರುವ ಕೃತ್ಯಗಳು ಕಾನೂನುಬಾಹಿರ ಎಂಬುದರ ಅರಿವಿದ್ದೂ ಉದ್ದೇಶ ಪೂರ್ವಕವಾಗಿ ಹೇಡಿತನದ ಹತ್ಯೆಯ ಪಿತೂರಿಯ ಪ್ರಮುಖ ಸದಸ್ಯರಾಗಿ ಹತ್ಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಭಗತ್ ಸಿಂಗ್ ಹಾಗೂ ಇತರರನ್ನು ನೇಣು ಶಿಕ್ಷೆಗೆ ಗುರಿಪಡಿಸಿದೆ'' ಎಂಬ ತೀರ್ಪು ನೀಡಿದರು.

# ನಿನ್ನ ನೆನಪಿನ ರಾತ್ರಿ



ಹೃದಯದ ರಾತ್ರಿಗೆ
ನಿನ್ನ ನೆನಪು
ಚೂರು ಚೂರೇ ಸರಿಯುವಾಗ
ಕೆಂಪು ಸೂರ್ಯ
ಕೈಗಳೊಳಗೆ
ಸಿಕ್ಕಿಕೊಂಡ ನಾಣ್ಯದಂತೆ
ಮೌನದಲ್ಲಿ ಜಾರುತ್ತಾನೆ.

ದೂರದ ಬೆಟ್ಟ
ಮಬ್ಬು ಮೋಡದಲಿ
ಒಂದಾಗುವಾಗ
ನಿಶಾಂತಕ್ಕೆ
ಬೆಳ್ಳಕ್ಕಿ ಸಾಲೊಂದು
ಕವಿತೆ ಗೀಚುತ್ತದೆ,
ಗಿಳಿಗಳು ರಾಗ ಹಾಕುತ್ತವೆ,
ಕೋಗಿಲೆಯೊಂದು ಹಾಡುತ್ತದೆ.

ಪ್ರೀತಿ ತುಂಬಿ
ಜಾರಿದ ಇಬ್ಬನಿಗೆ
ಕೆಂಪಾದ ಹೂವೊಂದು
ಬಾಗಿದೆ ತೂಗಿದೆ ಲಜ್ಜೆಯಲಿ
ನಿನ್ನ ನೆನಪಿನ
ಎದೆಯಲ್ಲಿ ರಾತ್ರಿ
ಕಳೆವ ನನ್ನಂತೆ,
ನಿನ್ನ ಪುಟ್ಟ ಕಣ್ಣಾಲಿಗಳ
ಕೆಳಗೆ ಹಾಸಿಗೆ
ಮಾಡಿಕೊಂಡ ಬೆಳಕಿನಂತೆ.

ಜ. ನಾ. ತೇಜಶ್ರೀ
ಉಪನ್ಯಾಸಕಿ, ಸಂತ ಫಿಲೋಮಿನಾ ಪ. ಪೂ. ಕಾಲೇಜು, ಹಾಸನ - ೫೭೩ ೨೦೧

ಸಂದೇಶವನ್ನು ಆಂಗ್ಲರಿಗೆ ತಿಳಿಸಬೇಕು ಹಾಗೂ ಅವರಿಗೆ ತಕ್ಕ ಪಾಠ, ಸರಕಾರಕ್ಕೆ ತಕ್ಕ ಪ್ರತಿಪಾಠ ಕಲಿಸಬೇಕು'' ಎಂದು ಭಗತ್ ಸಿಂಗ್ ಕರೆ ನೀಡಿದರು.

ಶಾಸನಸಭೆಯಲ್ಲಿ ಬಾಂಬ್ ಸ್ಫೋಟದ ಹೊಣೆಯನ್ನು ಭಗತ್ ಸಿಂಗ್ ಹಾಗೂ ಬಿ. ಕೆ. ದತ್ತರಿಗೆ ವಹಿಸಲಾಗಿತ್ತು. ಬಾಂಬ್ ಸಿಡಿಸಿದ ತಕ್ಷಣದಲ್ಲಿ ಸಭೆಯಿಂದ ಪರಾರಿ ಆಗಬೇಕೆಂಬ ಸಲಹೆಯನ್ನು ನಿರಾಕರಿಸಿದ ಭಗತ್ ಸಿಂಗ್ ಸ್ಫೋಟದ ನಂತರ ಬಂಧಿತರಾಗಬೇಕು, ನಂತರ ನಮ್ಮನ್ನು ನ್ಯಾಯಾಲಯದ ಮುಂದೆ ಹಾಜರು ಪಡಿಸುವರು. ನಮ್ಮ ಸಂದೇಶವನ್ನು ಯುವಶಕ್ತಿಗೆ ನಾಡಿನ ಯುವಕರಿಗೆ ಬಹಿರಂಗವಾಗಿ ತಿಳಿಯಪಡಿಸಲು ನ್ಯಾಯಾಲಯದಲ್ಲಿಯ ಪ್ರಕರಣ ಅನುಕೂಲವಾಗಲಿದೆ. ಅದೊಂದು ಉತ್ತಮ ಅವಕಾಶ ಎಂದು ನುಡಿದರು.

ಬಾಂಬ್ ಸ್ಫೋಟದಿಂದ ಶಾಸನಸಭೆಯ ಯಾವುದೇ ಸದಸ್ಯರಿಗಾಗಲಿ, ಗ್ಯಾಲರಿಯಲ್ಲಿ ಶಾಸನಸಭೆಯ ನಡವಳಿಕೆ ವೀಕ್ಷಿಸಲು ಬಂದ ಪ್ರೇಕ್ಷಕರಿಗಾಗಲಿ ಯಾವುದೇ ರೀತಿಯ ಪೆಟ್ಟು ಬೀಳದಂತೆ ನೋಡಿಕೊಂಡು ಬಾಂಬ್ ಎಸೆಯಲು ತೀರ್ಮಾನಿಸಿ ಏಪ್ರಿಲ್ ೮ರಂದು ಭಗತ್ ಸಿಂಗ್ ಹಾಗೂ ದತ್ ಮಾರುವೇಷದಲ್ಲಿ ಪ್ರೇಕ್ಷಕರ ಗ್ಯಾಲರಿಯಲ್ಲಿ ಕುಳಿತುಕೊಂಡರು.

ಸಭಾಪತಿಗಳಾಗಿದ್ದ ವಿಠಲಭಾಯಿ ಪಟೇಲರವರು ನಡವಳಿಕೆಗಳ ಅಂತಿಮ ಹಂತವಾಗಿ ನಿರ್ಣಯ ಪ್ರಕಟಿಸುವ ಕಾಲಕ್ಕೆ ಸಭಾಂಗಣದಲ್ಲಿ ಜನರಿಲ್ಲದ ಭಾಗಗಳಿಗೆ ಪ್ರೇಕ್ಷಕರ ಗ್ಯಾಲರಿಯಲ್ಲಿದ್ದ ಭಗತ್ ಹಾಗೂ ದತ್ತರು ಬಾಂಬ್ ಎಸೆದರು. ಏಕಾಏಕಿ ಬಾಂಬ್ ಸಿಡಿತದಿಂದಾಗಿ ಭಾರೀ ಸಪ್ಪಳ ಹಾಗೂ ಹೊಗೆಯು ಸಭಾಂಗಣದ ತುಂಬೆಲ್ಲಾ ಹರಡಿತು. ತಾವು ತಂದಿದ್ದ ಕರಪತ್ರಗಳನ್ನು ಸಭೆಯೊಳಗೆ ತೂರಿದ ಅವರು ಕರಾಳ ಕಾನೂನಿನ ವಿರುದ್ಧ ಪ್ರತಿಭಟಿಸಿ ಘೋಷಣೆ ಕೂಗಿದರು.

ಇದರಿಂದ ಗಾಬರಿಗೊಂಡ ಸಭಾಸದರು ಹಾಗೂ ಗ್ಯಾಲರಿಯಲ್ಲಿದ್ದ ಪ್ರೇಕ್ಷಕರು ಗಾಬರಿಗೊಂಡು ಗಡಿಬಿಡಿಯಿಂದ ಹೊರಗೋಡಿಬಂದರು. ಬಾಂಬ್ ಸಿಡಿಸಿದ ಭಗತ್ ಸಿಂಗ್ ಹಾಗೂ ದತ್ತರವರು ಮೊದಲೇ ನಿರ್ಣಯಿಸಿದಂತೆ ಅಲ್ಲಿಯೇ ಉಳಿದು ಬಂಧಿತರಾದರು. ಅವರಿಬ್ಬರನ್ನೂ ಪೊಲೀಸರು ಬಂಧಿಸಿ ಮೊದಲು ಠಾಣೆಯಲ್ಲಿ ನಂತರ ದೆಹಲಿಯಲ್ಲಿ ಬಂಧನದಲ್ಲಿಟ್ಟರು.

ಭಗತ್ ಸಿಂಗ್ ಹಾಗೂ ಇತರರ ಮೇಲೆ ವಿವಿಧ ಮೊಕದ್ದಮೆಗಳಲ್ಲಿ ವಿಚಾರಣೆ ನಡೆದು ಆಂಗ್ಲ ಸರಕಾರದ ನ್ಯಾಯಾಧೀಶರು ೧೯೩೦ ಅಕ್ಟೋಬರ್ ೭ರಂದು, ''ತಾವು ಮಾಡುತ್ತಿರುವ ಕೃತ್ಯಗಳು ಕಾನೂನುಬಾಹಿರ ಎಂಬುದರ ಅರಿವಿದ್ದೂ ಉದ್ದೇಶಪೂರ್ವಕವಾಗಿ ಹೇಡಿತನದ ಹತ್ಯೆಯ ಪಿತೂರಿಯ ಪ್ರಮುಖ ಸದಸ್ಯರಾಗಿ ಹತ್ಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡ ಭಗತ್ ಸಿಂಗ್ ಹಾಗೂ ಇತರರನ್ನು ನೇಣು ಶಿಕ್ಷೆಗೆ ಗುರಿಪಡಿಸಿದೆ'' ಎಂಬ ತೀರ್ಪು ನೀಡಿದರು.

ನ್ಯಾಯಾಲಯದ ವಿಚಾರಣೆಯ ಸಂದರ್ಭದಲ್ಲಿ ಭಗತ್‌ರವರ ತಂದೆಗೆ ಕ್ಷಮೆಕೋರಿ ಶಿಕ್ಷೆಯಿಂದ ಹೊರಗುಳಿಯಲು ಪ್ರಯತ್ನಿಸಲು ತಿಳಿಸಿದ ಅಂಶವನ್ನು ಕೇಳಿದ ಭಗತ್ ಅದಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿ ಖಾರವಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದರು.

ತೀರ್ಪು ಹೊರಬಿದ್ದ ನಂತರ ಶಿಕ್ಷೆಯಲ್ಲಿ ರಿಯಾಯಿತಿ ಕೋರಿ ಸರಕಾರಕ್ಕೆ ಮೊರೆ ಹೋಗುವಂತೆ ಭಗತ್‌ರ ಆತ್ಮೀಯರೊಬ್ಬರು ನೀಡಿದ ಸಲಹೆಯನ್ನು ಭಗತ್ ಸಿಂಗ್, ''ಶತ್ರುವಿನಿಂದ ಪ್ರಾಣಭಿಕ್ಷೆ ಬೇಡುವುದಕ್ಕಿಂತ ವೀರಮರಣವು ಸಾವಿರ ಪಾಲು ಸಮಾಧಾನ ತರುತ್ತದೆ. ನಾನು ಭಾರತ ಮಾತೆಗೆ ಎಂದೆಂದಿಗೂ ಚಿರಋಣಿ'' ಎಂದು ಖಡಾಖಂಡಿತವಾಗಿ ತಿರಸ್ಕರಿಸಿದರು.

ಭಾರತ ಮಾತೆಯ ವೀರ ಹೆಮ್ಮೆಯ ಪುತ್ರ ಭಗತ್ ಸಿಂಗ್ ದೇಶಪ್ರೇಮಿ ಯುವಕರೊಂದಿಗೆ ೧೯೩೧ರ ಮಾರ್ಚ್ ೨೩ರಂದು ನಗುನಗುತ್ತ ನೇಣುಗಂಬವನ್ನೇರಿದರು.

ಬಸವರಾಜ ಹುಡೇದಗಡ್ಡಿ
ಸಹಾಯಕ ಅಭಿಯೋಗ ನಿರ್ದೇಶಕರು, ನ್ಯಾಯಾಲಯಗಳ ಆವರಣ,
ಎಂ. ಜಿ. ರಸ್ತೆ, ಹಾವೇರಿ - ೫೮೧ ೧೧೦

**ಆಂ**ಗ್ಲರು ಇಂಡಿಯಾವನ್ನು ಹೊಕ್ಕು ಕೇವಲ ನಮ್ಮ ವ್ಯಾಪಾರ ವಾಣಿಜ್ಯಗಳನ್ನಷ್ಟೇ ಅತಿಕ್ರಮಿಸಿರಲಿಲ್ಲ, ಬದಲಾಗಿ ನಮ್ಮ ಮನಸ್ಸು ಹಾಗೂ ಚಟುವಟಿಕೆಗಳನ್ನು ಸಹ ನಿಯಂತ್ರಿಸಬಲ್ಲಷ್ಟು ಗಾಢವಾಗಿ ಬೆರೆತುಹೋಗಿದ್ದರು. ಇದರಿಂದ ಸಾಂಸ್ಕೃತಿಕ ದಾಳಿ ಅಥವಾ ಆಘಾತವಷ್ಟೇ ಆಗಲಿಲ್ಲ, ಬದಲಾಗಿ ಅವರ ರಾಜಕಾರಣದ ಕುಟಿಲತೆಗೂ ನಮ್ಮವರು ಬಲಿ ಆಗುತ್ತಾ ಬಂದರು. ಇದಕ್ಕೆ ಸೂಕ್ಷ್ಮವಾಗಿ ಪ್ರತಿಕ್ರಿಯಿಸಿದರೂ ಉಳಿಗಾಲವಿರಲಿಲ್ಲ. ಪ್ರತಿರೋಧಗಳನ್ನು ಒಡ್ಡುವ ಮಾತಂತೂ ದೂರವೇ ಉಳಿಯಿತು. ಆಂಗ್ಲರ ಸಾರ್ವಭೌಮತ್ವವನ್ನು ಧಿಕ್ಕರಿಸುವ ಪ್ರಯತ್ನಗಳು ದೇಶೀರಾಜರಿಂದ ನಡೆದವು. ಆದರೆ ಆರಂಭ ಆಗುವುದಕ್ಕೆ ಮೊದಲೇ ಅವುಗಳನ್ನು ಚಿವುಟಿಹಾಕಲಾಗುತ್ತಿತ್ತು. ಇದಕ್ಕೆ ನಮ್ಮಲ್ಲಿದ್ದ ಒಳಜಗಳಗಳೂ ಕಾರಣ. ಇಂಥ ಸಾಧನೆಗಳನ್ನು ಆಂಗ್ಲರು ತಮ್ಮೊಂದಿಗಿದ್ದ ವೃತ್ತಿನಿರತರಿಂದಲೇ ದಾಖಲಿಸತೊಡಗಿದ್ದರು. ಹೀಗೆ ದಾಖಲಿಸುತ್ತಿದ್ದವರ ಪೈಕಿ ಬಹುಪಾಲು ಆಂಗ್ಲ ಸೈನ್ಯಾಧಿಕಾರಿಗಳೇ ಹೆಚ್ಚು. ಹೀಗಾಗಿ ತಮ್ಮ ವೈಭವೀ ಚರಿತ್ರೆಯ ಹರಿಕಾರರು ಅವರೇ ಆಗಬೇಕಾಯಿತು. ಇದಕ್ಕೆ ಬಲಿಯಾದವರು ಅನೇಕರು. ಅಂತೆಯೇ ಪರಿಣಾಮಗಳು ಸಹ ಹಲವು. ತಮ್ಮನ್ನು ವಿರೋಧಿಸಿದ ರಾಜ-ನಿಜಾಮರ ಸಾಧನೆಗಳನ್ನು ಆಂಗ್ಲರು ತಿರುಚಿ ಬರೆದರು. ಹೀಗಾಗಿ ದೇಶೀ ಸಂಸ್ಥಾನಗಳ ರಾಜ-ಸುಲ್ತಾನರ ಚರಿತ್ರೆಗಳು ಆಂಗ್ಲರಿಗೆ ಬೇಕಾದ ನೋಟದಿಂದಲೇ ಹೊರಹೊಮ್ಮಿದವು. ಇಲ್ಲಿನ ಒಳಜಗಳಗಳು, ವಿಭಿನ್ನತೆಗಳು ಅವರ ಒಡೆದು ಆಳುವ ತಂತ್ರಕ್ಕೆ ಈಡಾದದ್ದು ಇನ್ನೊಂದು ಬಗೆಯಲ್ಲಿ. ಇಲ್ಲಿನ ಜಾತಿ, ಧರ್ಮಗಳು ಸಹ ಆಂಗ್ಲರಿಗೆ ಹೇಳಿ ಮಾಡಿಸಿದ ಪರಿಕರಗಳಾಗಿ ಪರಿಣಮಿಸಿದ್ದವು. ಇವೆಲ್ಲದರ ಅಂತಿಮ ಪರಿಣಾಮ ಆಂಗ್ಲರ ದಾಖಲೆ, ಆಕರಗಳನ್ನು ಬಳಸಿಕೊಂಡ ನಮ್ಮ ರಾಷ್ಟ್ರೀಯವಾದಿ ಚರಿತ್ರಕಾರರ ಮೇಲೂ ಆಯಿತು. ಇನ್ನು ಕೋಮುವಾದಿ ಹಾಗೂ ವಿದೇಶೀ ಚರಿತ್ರಕಾರರ ಬರಹಗಳಂತೂ ಅತಿರೇಕಗಳನ್ನೇ ಹುಟ್ಟುಹಾಕಿವೆ. ಆ ಬಗೆಯ ಅತಿರೇಕದ ಚರಿತ್ರೆಯ ಬರವಣಿಗೆಗೆ ನಾಡಿನ ಚರಿತ್ರೆಯ ವಿಶ್ಲೇಷಣೆಯೂ ಒಳಗಾಗಿದೆ. ಅದರಲ್ಲೂ ಹೈದರ್-ಟಿಪ್ಪು ಸುಲ್ತಾನರ ಚರಿತ್ರೆಯ ಬರಹಕ್ಕೆ ಸಿಂಹಪಾಲು.

ಆಂಗ್ಲರ ಸಾಮ್ರಾಜ್ಯಶಾಹಿ ನಿಲುವನ್ನು ವಿರೋಧಿಸುತ್ತಿದ್ದವರ ಪೈಕಿ ಪ್ರಬಲವಾಗಿ ಕಾಡಿದವರು ಹೈದರ್ ಹಾಗೂ ಟಿಪ್ಪು. ಟಿಪ್ಪುವಿನ ಪ್ರತಿಕ್ರಿಯೆ-ಪ್ರತಿರೋಧಗಳಂತೂ ಆಂಗ್ಲರನ್ನು ಗಂಭೀರ ಚಿಂತನೆಗೆ ಈಡುಮಾಡಿದ್ದವು. ಇದರ ಪರಿಣಾಮ ಟಿಪ್ಪುವಿನ ಅಸ್ತಿತ್ವದ ಪ್ರಶ್ನೆಯಾಗಿಯೂ ಕಾಡಿತು. ಆಂಗ್ಲರು ಆತನನ್ನು ಭೌತಿಕವಾದ ಪ್ರಯೋಗಗಳಿಂದಷ್ಟೇ ಅಲ್ಲದೆ ಬೌದ್ಧಿಕವಾಗಿಯೂ ಮುಗಿಸುವ ಹುನ್ನಾರ ಮಾಡಿದರು. ಅಂದರೆ ಅವನ ವ್ಯಕ್ತಿತ್ವಕ್ಕೆ ಕುಂದನ್ನುಂಟುಮಾಡುವ ಪ್ರಯತ್ನಗಳು ನಡೆದವು. ಇದಕ್ಕೆ ನೆರವಾದದ್ದು ಅಂದಿನ ಸೇನಾಧಿಕಾರಿ ಚರಿತ್ರಕಾರರು ಹಾಗೂ ಅವರ ಬರಹಗಳು. ಅದರಲ್ಲೂ ಮಾರ್ಕ್ ವಿಲ್ಕ್ಸ್, ಬೀಟ್ಸನ್, ಬುಕಾನನ್, ಮೆಕೆಂಜಿ, ಬೌರಿಂಗ್, ಫುಲ್ಲರ್‌ಟನ್, ಕರ್ಕ್‌ಪ್ಯಾಟ್ರಿಕ್‌ಸನ್, ಹ್ಯಾಂಡರ್‌ಸನ್, ಮನ್ರೋ, ಮೂರ್ ಮೊದಲಾದವರು ಬರೆದ ಟಿಪ್ಪುವಿನ ಚರಿತ್ರೆ ಅವನನ್ನು ಗರಿಷ್ಠಮಟ್ಟದಲ್ಲಿ ತೇಜೋವಧೆ ಮಾಡಿತು. 'ಮತಾಂಧ', 'ಕ್ರೂರಿ', 'ದುರಾಕ್ರಮಣಿ' ಮೊದಲಾದ ಚಿತ್ರಣಗಳು ಟಿಪ್ಪುವನ್ನು ನೈಜವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗದಂತೆ ಮಾಡಿದವು. ಆಸ್ಥಾನದ ಇತಿಹಾಸಕಾರರ ಜನಾಬ್ ಕಿರ್ಮಾನಿಯಂತೂ ಆಂಗ್ಲರ ಮುಲಾಜಿಗೆ ಒಳಗಾಗಿ ಚರಿತ್ರೆಯನ್ನು ರಚಿಸಿರುವಂತೆ ಕಂಡುಬರುತ್ತದೆ. ಇಂಥ ಆಕರಗಳನ್ನೇ ಆಧಾರವನ್ನಾಗಿಸಿಕೊಂಡು ಬರೆದ ದೇಶೀ ಚರಿತ್ರಕಾರರ ಬರಹಗಳು ಭಿನ್ನ ಆಗಲಿಕ್ಕಂತೂ ಸಾಧ್ಯವಾಗಲೇ ಇಲ್ಲ. ಅದರಲ್ಲೂ ಕೆ. ಎಂ. ಪಣಿಕ್ಕರ್, ಸರ್‌ದೇಸಾಯಿ, ಕೆ. ಕೆ. ಸುಬ್ಬಯ್ಯ, ಐ. ಮಾ. ಮುತ್ತಣ್ಣ, ಸೀತಾರಾಮ ಗೋಯೆಲ್ ಮೊದಲಾದವರು ಟಿಪ್ಪುವನ್ನು ಮತಾಂಧ, ಕ್ರೂರಿ ಎಂತಲೇ ಚಿತ್ರಿಸಿದ್ದಾರೆ.

# ಚರಿತ್ರಕಾರರು, ಲಾವಣಿಕಾರರು ಹಾಗೂ ಟಿಪ್ಪು

ಡಾ|| ಸಿ. ಆರ್. ಗೋವಿಂದರಾಜು

ಬರಹರೂಪದ ದಾಖಲೆಗಳು ಚಿತ್ರಿಸಿರುವ ಟಿಪ್ಪುವಿನ ಚಿತ್ರಣಕ್ಕೂ, ಮೌಖಿಕ ಪರಂಪರೆಯಲ್ಲಿ ಜನಜನಿತವಾಗಿರುವ ಚಿತ್ರಣಕ್ಕೂ ಸಾಕಷ್ಟು ಭಿನ್ನತೆಗಳಿವೆ. ಜನಪದರು ತಮ್ಮ ಅವಧಿಯ ಚಿತ್ರಣಗಳನ್ನು ಬಾಯಿಂದ ಬಾಯಿಗೆ ತೋಂಡಿ ರೂಪದಲ್ಲಿ ದಾಖಲಿಸುತ್ತಾ ಹೋಗುವುದು ನಮ್ಮಲ್ಲಿ ಮೊದಲಿನಿಂದಲೂ ನಡೆದುಕೊಂಡುಬಂದಿರುವ ರೂಢಿ. ಈ ರೂಢಿಯಲ್ಲಿ ಕತೆ, ಐತಿಹ್ಯ, ಒಗಟು, ಪುರಾಣ, ಕಥನಗೀತೆ, ಹಾಡು, ಕೋಲುಪದ, ಲಾವಣಿ ಮೊದಲಾದ ಪ್ರಕಾರಗಳೂ ಇವೆ. ಲಾವಣಿಗಳಲ್ಲಿ ಟಿಪ್ಪುವಿನ ಚಿತ್ರಣವನ್ನು ಪರಿಶೀಲಿಸುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ. ಬರಹರೂಪದ ಚರಿತ್ರೆಯ ವಿಶ್ಲೇಷಣೆಗಳಲ್ಲಿ ದೊರೆಯದ ಅನೇಕ ಉತ್ತರಗಳು ಇಲ್ಲಿ ಕಾಣಸಿಗುತ್ತವೆ. ಅಷ್ಟೇ ಅಲ್ಲದೆ, ಇತ್ತೀಚಿನ ಬರಹಗಳಲ್ಲಿ ಟಿಪ್ಪುವನ್ನು ಚಿತ್ರಿಸುತ್ತಿರುವ ದೇಶಪ್ರೇಮಿ, ಮತಸಹಿಷ್ಣು, ಜಾತ್ಯತೀತ ಅಥವಾ 'ಸೆಕ್ಯುಲರ್' ಚಿತ್ರಣಗಳಿಗಿಂತಲೂ ಭಿನ್ನವಾದ, ಸಹಜವಾದ ರೂಪಗಳು ಲಾವಣಿಗಳಲ್ಲಿ ಅಭಿವ್ಯಕ್ತಗೊಂಡಿವೆ. ಅಂದರೆ, ಟಿಪ್ಪುವಿನ ವ್ಯಕ್ತಿತ್ವವನ್ನು ತಮಗೆ ತಿಳಿದಂತೆ, ಕಂಡಂತೆ, ಕೇಳಿದಂತೆ ಹೇಳುವ ಧಾಟಿ ಈ ಮೌಖಿಕ ಆಕರಗಳಲ್ಲಿ ರೂಪುತಳೆದಿದೆ. ಟಿಪ್ಪುವನ್ನು ಕೇವಲ ಒಬ್ಬ 'ಸೈತಾನ'ನ ರೀತಿಯಲ್ಲೋ ಅಥವಾ 'ದೇವರ' ರೀತಿಯಲ್ಲೋ ನೋಡುವ ಪೂರ್ವಗ್ರಹಪೀಡಿತ ನೋಟ ಜನಪದರಲ್ಲಿ ಮೂಡಿಲ್ಲ, ಬದಲಾಗಿ ಅವನೂ ಒಬ್ಬ ವ್ಯಕ್ತಿಯಾಗಿ, ಸುಲ್ತಾನನಾಗಿ, ಮಹತ್ವಾಕಾಂಕ್ಷಿಯಾಗಿ, ಪ್ರೀತಿ, ದ್ವೇಷ, ಸೇಡು ಇತ್ಯಾದಿಗಳನ್ನು ಒಳಗೊಂಡ ಸಹಜ ವಿಸ್ತರಣಾ ಕಾಂಕ್ಷಿಯಾಗಿ; ದುಃಖಕ್ಕೆ ಮರುಗುವ, ಪಶ್ಚಾತ್ತಾಪ ಹೊಂದುವ ಹೃದಯದವನಾಗಿ; ಜನರಲ್ಲಿ ನೆಲೆನಿಂತ ಜನಾನುರಾಗಿಯಾಗಿ ಲಾವಣಿಗಳಲ್ಲಿ ಕಾಣಿಸಿಕೊಂಡಿದ್ದಾನೆ. ಲಾವಣಿಗಳಲ್ಲಿ ಉತ್ಪ್ರೇಕ್ಷೆಗಳೇ ಇಲ್ಲ ಎಂದು ಸಹ ಪರಿಗಣಿಸುವ ಅಗತ್ಯ ಇಲ್ಲ, ಬದಲಾಗಿ ಬರಹರೂಪದ ದಾಖಲೆಗಳಲ್ಲಿ, ಚರಿತ್ರೆಯ ವಿಶ್ಲೇಷಣೆಗಳಲ್ಲಿ ಪೂರ್ವಗ್ರಹಪೀಡಿತವಾಗಿರುವಷ್ಟು ಅಲ್ಲ ಎಂದು ಸಮಾಧಾನಪಟ್ಟುಕೊಳ್ಳಬೇಕಿದೆ.

ಹೈದರ್-ಟಿಪ್ಪು ಅವರನ್ನೊಳಗೊಂಡ ಲಾವಣಿಗಳು ನಾಡಿನಾದ್ಯಂತ ಪ್ರಚಲಿತವಾಗಿದ್ದವು. ಆದರೆ ಅವುಗಳಲ್ಲಿ ಕೆಲವು ಮಾತ್ರ ಸಂಪಾದಿತವಾಗಿವೆ. ನಾಡಿನ ಚರಿತ್ರೆಯಲ್ಲಿ ಎಲ್ಲರ ಬಗೆಗೂ ಲಾವಣಿಗಳಿವೆ ಎಂದು ಸಹ ಭಾವಿಸಬೇಕಿಲ್ಲ, ಏಕೆಂದರೆ, ಜನಪದರು ಎಲ್ಲರನ್ನೂ ಕುರಿತು ಲಾವಣಿಗಳನ್ನು ಕಟ್ಟುವುದಿಲ್ಲ, ಹಾಡುವುದಿಲ್ಲ. ನಾಡಿನ ಚರಿತ್ರೆಯಲ್ಲಿ ಅನೇಕ ರಾಜ-ಮಹಾರಾಜರು, ನಿಜಾಮರು, ಸುಲ್ತಾನರು ಆಗಿಹೋದರು. ಆದರೆ ಅವರೆಲ್ಲರ ಬಗೆಗೂ ಲಾವಣಿಸಾಹಿತ್ಯ ಲಭ್ಯವಿಲ್ಲ. ಬದಲಾಗಿ ತಮ್ಮ ಹೃದಯಕ್ಕೆ ನಾಟುವವರನ್ನು ಮಾತ್ರ ಸಾಂಸ್ಕೃತಿಕ ನಾಯಕರನ್ನಾಗಿಸುವ, ಅಮರರನ್ನಾಗಿಸುವ ಆಶಯ ಜನಪದರದು. ಈ ದಿಸೆಯಲ್ಲಿ ಹೈದರ್, ಟಿಪ್ಪು, ಅವರುಗಳು ಸಹ ಲಾವಣಿಗಳಲ್ಲಿ ದಾಖಲಾಗಿದ್ದಾರೆ.

ಮೈಸೂರಿನ ಚರಿತ್ರೆಯಲ್ಲಿ ಜನಪದರು ಆಯ್ಕೆಮಾಡಿಕೊಂಡದ್ದು ಟಿಪ್ಪು ಸುಲ್ತಾನನನ್ನು ಮಾತ್ರ. ಸ್ವಲ್ಪಮಟ್ಟಿಗೆ ಹೈದರ್‌ನನ್ನು. ಇನ್ನುಳಿದಂತೆ ಯಾವುದೇ ರಾಜರು ಇವರಿಗೆ 'ಹೀರೋ'ಗಳಾಗಲಿಲ್ಲ. ಏಳೆಂಟು ಲಾವಣಿಗಳು ಟಿಪ್ಪುವನ್ನು



ಕುರಿತು ಮಾತನಾಡುತ್ತವೆ. ಆದರೆ ಅವುಗಳಲ್ಲಿ ಮುಖ್ಯ ಅನ್ನಿಸಿಕೊಳ್ಳುವುದು ಹಾಗೂ ಸಮಗ್ರ ಲಾವಣಿ ಅನ್ನಿಸಿಕೊಳ್ಳುವುದು ಮಾತ್ರ ಎರಡೇ. ಈ ಎರಡೂ ಲಾವಣಿಗಳಲ್ಲಿ ಲಾವಣಿ ಕಟ್ಟಿದವರ ಹೆಸರುಗಳಿವೆ. ಅವು 'ಮೈಸೂರು ಹುಲಿ ಟೀಪು ಸುಲ್ತಾನ್' ಹಾಗೂ 'ಟೀಪು ಸುಲ್ತಾನ್' ಎಂಬುವು. ಮೊದಲನೆಯದು ಲಾವಣಿಕಾರ ಜಿ. ನೀಲಕಂಠಯ್ಯನವರಿಂದಲೂ ಎರಡನೆಯದು ರಾಜೋಜಿಯಿಂದಲೂ ಹಾಡಲ್ಪಟ್ಟವು.

ನೀಲಕಂಠಯ್ಯನವರು –

ಬೇಷಕ್ ತಮಾಷಾ ಟೈಗರ್ ನಿಶಾನಾ  
ಟಿಪ್ಪು ಸುಲ್ತಾನನ ಬಿರುದಾಯ್ತು!  
ಮಸಲತ್ ಮಾಡಿದ ಮೀರ್ಸಾದಕನಿಗೆ  
ದೇಶದ್ರೋಹಿ ಎಂಬ್ಹೆಸರಾಯ್ತು ||

ಎಂದು ಹಾಡಲು ಆರಂಭಿಸಿದ್ದರೆ, ರಾಜೋಜಿಯು –

ಅಜಬ್ ತಮಾಷ ಈಸ್ಟ್ ಇಂಡಿಯಾ ಕಂಪನಿ  
ಇಂಗ್ಲೀಷರ ಸೇಲೆ ಆದೀತು  
ಸುತ್ತ ಕಾವೇರಿ ನಡುವೆ ಶ್ರೀರಂಗಪಟ್ಟಣ ಟಪ್ಪಿನ್  
ಕವಲತ್ತು ಹೋಯಿತು ||

ಎಂಬುದಾಗಿ ಹಾಡಿದ್ದಾನೆ. ಈ ಎರಡೂ ಲಾವಣಿಕಾರರು ಕಟ್ಟಿಕೊಟ್ಟಿರುವ ಟಿಪ್ಪುವಿನ ಚಿತ್ರಣವನ್ನು ಮಾತ್ರ ಕೆಲವು ಪ್ರಮುಖ ಚರಿತ್ರಕಾಂಶಗಳೊಂದಿಗೆ ಇಲ್ಲಿ ಪರಿಶೀಲಿಸಲಾಗಿದೆ.

ಈ ಎರಡೂ ಲಾವಣಿಗಳು ಶ್ರೀರಂಗಪಟ್ಟಣದ ನಿರ್ಣಾಯಕ ಯುದ್ಧವನ್ನೇ ಪ್ರಧಾನ ಕೇಂದ್ರವನ್ನಾಗಿಸಿ ಕೊಂಡಿವೆ. ಆಂಗ್ಲರೊಂದಿಗೆ ಸೆಣಸಿ ಕೊನೆಗಾಣುವ ಟಿಪ್ಪುವಿನ ಕೊನೆಯ ಕ್ಷಣಗಳು ಜನಪದರಿಗೆ ಸಹಿಸಿ ಕೊಳ್ಳಲು ಸಾಧ್ಯವಾಗದಿರುವ ಸಂವೇದನೆಯನ್ನು ಬಿಂಬಿಸಿವೆ. ಬಹುಶಃ ಈ ಅನುಕಂಪವೇ ಅವನನ್ನು ಮರೆಯಲು ಸಾಧ್ಯವಾಗದಂತೆ ಮಾಡಿದ್ದು.

ಮೊದಲ ಲಾವಣಿಯಲ್ಲಿ ಟಿಪ್ಪುವಿಗಿಂತ ಹೈದರನ ವ್ಯಕ್ತಿತ್ವದ ಹಿನ್ನೆಲೆ ಹೆಚ್ಚು ಅಭಿವ್ಯಕ್ತಗೊಂಡಿದೆ. ಓದುಬರಹ ಬಾರದ ಹೈದರ್ ಕನ್ನಡ ಮಾತನಾಡುವ 'ಕನ್ನಡ ಗಂಡುಗಲಿ'ಯಾಗಿ ಮೈಸೂರಿನ ಧ್ವಜವನ್ನು ಮೆರೆಸಿದ ಚಿತ್ರಣ ಇಲ್ಲಿಯದು. ಹೈದರನ secularityಯ ಪ್ರತೀಕ ವಾಗಿ ಈ ಲಾವಣಿ ಮಗ ಟಿಪ್ಪುವಿನ ಹಿಂದಿನ ಚರಿತ್ರೆಗೆ ಪೀಠಿಕೆ ಹಾಕಿಕೊಡುವ ರೀತಿಯಲ್ಲಿದೆ. ಮೈಸೂರಿನ ವಿಸ್ತರಣೆ ಯಾಗಿ ಟಿಪ್ಪು ನಡೆದುಕೊಳ್ಳುವ ರೀತಿಯನ್ನು, ಹೈದರನ ಅವಧಿಯ ಅನಂತರ ಹದಿನೇಳು ವರುಷ ಟಿಪ್ಪು ಆಳಿದ ಥಾಟಿಯನ್ನು ಇಲ್ಲಿ ಚಿತ್ರಿಸಲಾಗಿದೆ. ಸರ್ಕಾರದ ಅಥವಾ ಸುಲ್ತಾನನ ವ್ಯಕ್ತಿತ್ವವನ್ನು ಸಾರುವ ರಾಜಕಾರಣದ ಚಿತ್ರಣಗಳು ಬರಹರೂಪದ ದಾಖಲೆಗಳಿಗಿಂತ ಇಲ್ಲಿ ಭಿನ್ನ. ಶರಾಬು,

---

ಬರಹರೂಪದ ದಾಖಲೆಗಳು ಚಿತ್ರಿಸಿರುವ ಟಿಪ್ಪುವಿನ ಚಿತ್ರಣಕ್ಕೂ, ಮೌಖಿಕ ಪರಂಪರೆಯಲ್ಲಿ ಜನಜನಿತವಾಗಿರುವ ಚಿತ್ರಣಕ್ಕೂ ಸಾಕಷ್ಟು ಭಿನ್ನತೆಗಳಿವೆ. ಜನಪದರು ತಮ್ಮ ಅವಧಿಯ ಚಿತ್ರಣಗಳನ್ನು ಬಾಯಿಂದ ಬಾಯಿಗೆ ತೋಂಡಿ ರೂಪದಲ್ಲಿ ದಾಖಲಿಸುತ್ತಾ ಹೋಗುವುದು ನಮ್ಮಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದಿರುವ ರೂಢಿ. ಈ ರೂಢಿಯಲ್ಲಿ ಕತೆ, ಐತಿಹ್ಯ, ಒಗಟು, ಪುರಾಣ, ಕಥನಗೀತೆ, ಹಾಡು, ಕೋಲುಪದ, ಲಾವಣಿ ಮೊದಲಾದ ಪ್ರಕಾರಗಳೂ ಇವೆ. ಲಾವಣಿಗಳಲ್ಲಿ ಟಿಪ್ಪುವಿನ ಚಿತ್ರಣವನ್ನು ಪರಿಶೀಲಿಸುವ ಪ್ರಯತ್ನವನ್ನು ಮಾತ್ರ ಇಲ್ಲಿ ಮಾಡಲಾಗಿದೆ.

---

ಶೇಂದಿ, ಗಾಂಜಾ, ಅಫೀಮು, ಜೂಜಾಟ, ವ್ಯಭಿಚಾರ ಗಳನ್ನು ಹತ್ತಿಕ್ಕಿದ್ದ ಈ ರಾಜ್ಯದಲ್ಲಿ ಟಿಪ್ಪು ಅಂತ್ಯಹೊಂದುವುದು ತನ್ನವನೇ ಆದ ಮೀರ್‌ಸಾದಕನ ಪಿತೂರಿಯಿಂದ. ಸೈತಾನನ ಪ್ರತಿರೂಪದ ಚಿತ್ರಣವನ್ನು ಮೀರ್‌ಸಾದಕನಿಗೆ ತೊಡಿಸಿ ಶಪಿಸುವ ಜನಪದರು, ಟಿಪ್ಪುವನ್ನು 'ಮೈಸೂರು ಹುಲಿ' ಎಂತಲೇ ಕೊಂಡಾಡುತ್ತಾರೆ. ಸಾರಂಗಬಾಗಿಲ ಬಳಿ ಕಾದಾಡಿ ಬೀಳುವ ಟಿಪ್ಪು ಹಾಗೂ ಅನಂತರ ಪ್ರಳಯದಂತೆ ಬೀಳುವ ಮಳೆಯ ಚಿತ್ರಣಗಳು ಲಾವಣಿಗಳಲ್ಲಿ ಹಾದುಹೋಗುತ್ತವೆ.

ರಾಜೋಜಿಯ 'ಟೀಪು ಸುಲ್ತಾನ್' ಲಾವಣಿಯಲ್ಲಿ ಟಿಪ್ಪುವೇ ಕೇಂದ್ರಬಿಂದು. ಚಾರಿತ್ರಿಕವಾಗಿ ಹೆಚ್ಚು ವಿವರ ಗಳಿರುವ ಈ ಲಾವಣಿ, ಬರಹರೂಪದ ದಾಖಲೆಗಳ ತಿರುಚಿರುವಿಕೆಗೆ ಉತ್ತರಗಳನ್ನು ನೀಡುವಂಥದ್ದು. ಟಿಪ್ಪುವನ್ನು 'ಮತಾಂಧ', 'ಪ್ರಕೋಪದ ಹುಚ್ಚ', 'ಕ್ರೂರಿ' ಎನ್ನುವ ಮೊದಲಾದ ಆರೋಪಗಳಿಗೆ ಉತ್ತರವನ್ನು ಈ ಲಾವಣಿಯು –

*ಜೋಡಿಸುತ್ತಿನ ಕೋಟೆಗೆ ಟೈಗರ್ ಆಗಿ ಕಾದಿದ್ದ*
*ಬೇಡಿದ ದ್ವಿಜರಿಗೆ ಬಿಡದೆ ದಾನ ನೀಡಿದ್ದ*

ಎನ್ನುವುದರ ಮೂಲಕ ನೀಡುತ್ತದೆ. ಅಲ್ಲದೆ, ಮುಂದುವರೆದು –

*ಇರಬೇಕಾಗಿತ್ತು ಟೀಪೂ ಸುಲ್ತಾನ್ ಹಿಂದೂ*
*ಮುಸ್ಲಮಾನರ ಉದ್ಧಾರಿ*
*ದೊರೆಯಾಗಿದ್ದ ಶ್ರೀರಂಗಪಟ್ಟಣಕ್ಕೆ ಅನಾಥ ಜನರಿಗೆ*
*ಆಧಾರಿ ॥*

ಎನ್ನುವುದರ ಮುಖೇನ ಟಿಪ್ಪುವಿನ ಸಹಜ ಕಾಳಜಿಗಳನ್ನು ಬಿತ್ತರಿಸುತ್ತದೆ.

ಈ ಲಾವಣಿಯು ಟಿಪ್ಪುವಿನ ಯುದ್ಧ ಹಾಗೂ ಸಾವಿನ ಚಿತ್ರಣಗಳನ್ನೇ ವಿಶೇಷವಾಗಿ ಪ್ರತಿಬಿಂಬಿಸಿದೆ. ಅವನ ನೆಚ್ಚಿನ ಬಂಟ, ಸೇನಾನಿ ಸೈಯದ್ ಗಫೂರನನ್ನು ಆಂಗ್ಲರು ಕೊಂದಾಗ ಆಗುವ ಆಘಾತ, ಅಂತಃಪುರದ ಸ್ತ್ರೀಯರ ರಕ್ಷಣೆಗೆ ತೋರುವ ಕಾಳಜಿ, ಆಂಗ್ಲ 'ಸೋಜರ್'ಗಳ ನರಮೇಧದ ಚಿತ್ರಣ, ಜೀವಂತವಾಗಿ ಹಿಡಿಯಲು ಸಾಧ್ಯವಾಗದ ಸೇನಾಧಿಕಾರಿ ಹ್ಯಾರಿಸ್‌ನ 'ಟಿಪ್ಪುವನ್ನು ಸುಡಿರಿ ಬಂದೂಕಿನಿಂದ' ಎಂಬ ಆದೇಶಗಳು ಜನಪದರಿಂದ ಅನಾವರಣಗೊಂಡಿವೆ.

ಟಿಪ್ಪುವನ್ನು ಕೊಲ್ಲುವ ಚಿತ್ರಣ ಈ ಲಾವಣಿಯಲ್ಲಿ ಮನಮುಟ್ಟುವಂತಿದೆ. ಕುದುರೆಯ ಮೇಲಿದ್ದ ಟಿಪ್ಪುವಿಗೆ ಗುಂಡೊಂದು ತಾಕಿ, ಸುಸ್ತಾಗಿ ಆತ ನೆಲಕ್ಕೆ ಕುಸಿಯುತ್ತಾನೆ. ಸತ್ತವನಂತೆ ಬಿದ್ದಿದ್ದ ಅವನ ನಡುವಿನಲ್ಲಿದ್ದ ವಜ್ರಖಚಿತ ಖಡ್ಗವನ್ನು ಹೊಂದಲು ಆಂಗ್ಲ ಸೈನಿಕನೊಬ್ಬ ಕೈ ಹಾಕುತ್ತಾನೆ. ಆಗ ಟಿಪ್ಪು –

*ನೇತ್ರವಬಿಟ್ಟು ರೌದ್ರಾಕಾರದಿ*
*ಕತ್ತರಿಸಿದ ಸೋಜರ್ ಕೈಗೆ*
*ಕಡಿದ ತಕ್ಷಣ ಕರವು ಬಿದ್ದಿತು*
*ಕುಣಿಯುತ್ತಿತ್ತು ಕೀಲುಗೊಂಬೆಯಂಗೆ*

ಎನ್ನುವ ಚಿತ್ರಣವಿದೆ. ಪ್ರತಿಸಿಟ್ಟಿನಿಂದ ಆ ಆಂಗ್ಲ ಸೈನಿಕ –

*ಮಡಿದಿಹನೆಂದು ಅರಿಯದೆ ಹೋದೆ ಕಡಿದನಲ್ಲಾ*
*ಯನ್ನ ಕೈಗಳಿಗೆ*
*ಕಡುಕೋಪಿಯನು ಬಿಡಲೂಬಾರದೆಂದು*
*ಹೊಡೆದನು ಗೋಲಿ ದೊರೆ ಮೈಯಿಗೆ ॥*

ಎನ್ನುವ ಸಾಲುಗಳು ಟಿಪ್ಪುವಿನ ಸಾವನ್ನು ಸಾರುತ್ತವೆ. ಹ್ಯಾರಿಸ್‌ನಿಗೆ ಟಿಪ್ಪುವಿನ ದೇಹ ದೊರೆಯದ ರೀತಿಯಲ್ಲಿ ಟಿಪ್ಪುವಿನ ದೇಹದ ಮೇಲೆ ಹೆಣಗಳನ್ನು ಸುರಿಯ ಲಾಗಿರುತ್ತದೆ. ಕೊನೆಗೆ ಅವನನ್ನು ಪತ್ತೆಹಚ್ಚಲು ಹ್ಯಾರಿಸ್

## ಸಾದರ ಸ್ವೀಕಾರ

**ಮುಜುಗರದ ಮಾತುಗಳು** (ಕವನ ಸಂಕಲನ)
ಮೋಹನದಾಸ್ ಧಾವಸ್ಕರ್
*ಪುಟ : ೨೬ ಬೆಲೆ : ರೂ. ೮೦*
**ಮೋಹನದಾಸ್ ಧಾವಸ್ಕರ್**, ನಂ. ೩೦, 'ಬೆಳಕು' ೪ನೇ ಮೈನ್, ಎನ್.ಆರ್. ಕಾಲೋನಿ, ಬೆಂಗಳೂರು - ೧೯

**ದ್ವಿತೀಯ ಮಹಾಯುದ್ಧ** ಡಾ॥ ಕೃಷ್ಣ ಕೊಲ್ಹಾರ್ ಕುಲಕರ್ಣಿ
*ಪುಟ : ೧೬೬ ಬೆಲೆ : ರೂ. ೯೦*
**ಭಾಗ್ಯಲಕ್ಷ್ಮೀ ಪ್ರಕಾಶನ**, ೮೩, ೩ನೇ ಕ್ರಾಸ್, ೪ನೇ ಬ್ಲಾಕ್ ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು-೮೫

**ಋಣ ಸಂದಾಯ** (ಕಥಾ ಸಂಕಲನ) ಎಂ. ಜೆ. ಪದ್ಮಿನಿ
*ಪುಟ : ೧೦೦ ಬೆಲೆ : ರೂ. ೪೫*

**ಹನಿ ಹನಿ ಸೂರ್ಯ** (ಹನಿಗವನಗಳು)
ಜಿ.ಎಸ್. ಉಬರಡ್ಕ
*ಪುಟ : ೬೨ ಬೆಲೆ : ರೂ. ೩೫*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಮೌಲ್ಯ ಪ್ರಕಾಶನ**, ನಲ್ಲೂರು - ೫೭೪ ೫೦೨, ಕಾರ್ಕಳ, ಉಡುಪಿ ಜಿಲ್ಲೆ

**ಶ್ರೀ ರಾಮಕೃಷ್ಣ ವಿವೇಕ ಶಾರದಾ** (ಲೇಖನಗಳು) ಸಿ. ಪಿ. ಕೆ.
*ಪುಟ : ೯೬ ಬೆಲೆ : ರೂ. ೫೦*

**ಮುಕ್ತಕ ಮನನ** (ಲೇಖನಗಳು) ಸಿ. ಪಿ. ಕೆ.
*ಪುಟ : ೮೮ ಬೆಲೆ : ರೂ. ೫೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಚೇತನ ಬುಕ್ ಹೌಸ್**, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು - [illegible]

**ಪಾಶ್ಚಾತ್ಯ ಕಾವ್ಯ ಚಿಂತನ** (ಅನುವಾದ) ಸಿ. ಪಿ. ಕೆ.
*ಪುಟ : ೩೨೮ ಬೆಲೆ : ರೂ. ೨೦೦*

**ಕನಕ : ಕೆಲವು ಮುಖ** (ಲೇಖನಗಳು) ಸಿ. ಪಿ. ಕೆ.
*ಪುಟ : ೪೮ ಬೆಲೆ : ರೂ. ೨೦*

**ಹರಿಹರ ಪರಿಭಾವನೆ** (ಲೇಖನಗಳು) ಸಿ. ಪಿ. ಕೆ.
*ಪುಟ : ೬೪ ಬೆಲೆ : ರೂ. ೨೫*

**ಗಾಂಧಿ ಮತ್ತು ಕಲೆ** (ಲೇಖನಗಳು) ಸಿ. ಪಿ. ಕೆ.
*ಪುಟ : ೪೮ ಬೆಲೆ : ರೂ. ೨೫*

**ಭಕ್ತಿ ಕವಿ ಬಸವಣ್ಣ** ಸಿ. ಪಿ. ಕೆ.
*ಪುಟ : ೫೬ ಬೆಲೆ : ರೂ. ೨೫*

**ನಾಗಚಂದ್ರ ಸಮೀಕ್ಷೆ** ಸಿ. ಪಿ. ಕೆ.
*ಪುಟ : ೭೨ ಬೆಲೆ : ರೂ. ೨೫*

**ಪಂಪ ಪರಿಶೀಲನ** ಸಿ. ಪಿ. ಕೆ.
*ಪುಟ : ೭೨ ಬೆಲೆ : ರೂ. ೪೦*

**ಕಾಳಿದಾಸ ಪ್ರಕಾಶ** ಸಿ. ಪಿ. ಕೆ.
*ಪುಟ : ೬೪ ಬೆಲೆ : ರೂ. ೨೫*

**ಛಂದಸ್ಸು : ಮೂರು ನೋಟ** ಸಿ. ಪಿ. ಕೆ.
*ಪುಟ : ೫೬ ಬೆಲೆ : ರೂ. ೨೫*
ಮೇಲಿನ ಒಂಬತ್ತು ಪುಸ್ತಕಗಳ ಪ್ರಕಾಶಕರು
**ಅಖಿಲಾ ಏಜೆನ್ಸೀಸ್**, ರೇಣುಕಾಚಾರ್ಯ ದೇವಸ್ಥಾನದ ರಸ್ತೆ, ಲಕ್ಷ್ಮೀ ಟಾಕೀಸ್ ಹಿಂಭಾಗ, ಮೈಸೂರು - ೨೪

**ಪ್ರವಾಸ ಸಂಪದ** ಜಯದೇವಪ್ಪ ಜೈನಕೇರಿ
*ಪುಟ : ೨೩೦ ಬೆಲೆ : ರೂ. ೧೨೦*
**ಶಾಂತಲಾ ಪ್ರಕಾಶನ**, ೮೭, ಶಾಂತಲಾ, ಕುವೆಂಪುರಸ್ತೆ, ಶಿವಮೊಗ್ಗ



# ಥಟ್ಟನೆ...

ಸುಜಾತ ಲಕ್ಷ್ಮೀಪುರ
ನಂ. ೧೭೧, ೭ನೇ ಕ್ರಾಸ್, ಲಕ್ಷ್ಮೀಪುರ
ಬೆಂಗಳೂರು - ೫೬೦ ೦೧೯

ಗಿರಿಜಾ ಬಸ್ ಹತ್ತಿದಾಗ ಆಗಲೇ ಎಂಟೂವರೆಯಾಗಿತ್ತು. ಇನ್ನರ್ಧ ಗಂಟೆಯಲ್ಲಿ ಕಾಲೇಜಿನಲ್ಲಿರ ಬೇಕಾಗಿತ್ತು. ಬಸ್ಸಿನಲ್ಲಿ ತುಂಬಾ ರಶ್. ನೂಕು-ನುಗ್ಗಲುಗಳ ನಡುವೆ ಭದ್ರವಾಗಿ ಕಂಬಿ ಹಿಡಿದು ನಿಂತಿದ್ದ ಗಿರಿಜಾಳಿಗೆ ಕೇಳಿಸಿದ್ದು...

''ಅಯ್ಯೋ ಪಾಪ! ಐದು ವರ್ಷದ ಮಗುವಂತೆ. ನೆನ್ನೆ ರಾತ್ರಿ ಕ್ರೈಂ ಸ್ಟೋರಿಯಲ್ಲಿ ತೋರಿಸಿದರಲ್ಲಾ, ಅಷ್ಟು ಚಿಕ್ಕ ಮಗುವಿನ ಮೇಲೆ ರೇಪ್ ಮಾಡಿ, ಕೊಲೆ ಮಾಡಿ, ಹಳ್ಳವೊಂದರಲ್ಲಿ ಬಿಸಾಕಿರುವ ಸುದ್ದಿಯನ್ನ!''

''ಹೌದು ರೀ... ನೆನ್ನೆ ಬೆಳಗ್ಗೆ ಪೇಪರ್‌ನಲ್ಲೂ ಬಂದಿತ್ತು ಇದೇ ಸುದ್ದಿ ಪಾಪ. ಅಷ್ಟು ಪುಟ್ಟ ಹುಡುಗಿಯ ಮೇಲೆ ಅತ್ಯಾಚಾರಾನಾ !''

''ಅಯ್ಯೋ ಶಿವನೇ, ಹೆಣ್ಣಾಗಿ ಹುಟ್ಟೋದೇ ತಪ್ಪಾ ನನ್‌ದೇವ್ರೇ'' – ಅಂತ ಮುದುಕಿಯೊಬ್ಬಳು ತಲೆ ಬಡಿದುಕೊಳ್ಳುತ್ತಾ ಬಸ್‌ನ ಟಾಪ್ ನೋಡಿ... ನೋಡಿ... ಗೋಳಾಡಿದಳು.

ಇದರ ಮಧ್ಯೆ ಗಂಡಸೊಬ್ಬ –

''ಅವನು ಸಿಕ್ಕಿಬಿದ್ದಿದ್ದಾನಂತೆ, ಇವತ್ತಿನ ಪೇಪರ್‌ನಲ್ಲಿ ಕೊಟ್ಟಿದ್ದಾರೆ ಅವನ ಫೋಟೋನ. ಖದೀಮ... ನೋಡೋಕೆ ಎಷ್ಟು ಚೆನ್ನಾಗಿದ್ದಾನೆ! ಡಿಗ್ರಿ ಬೇರೆ ತಗೊಂಡಿದ್ದಾನಂತೆ! ಪೊಲೀಸಿನೋರು ಸುಮ್ನೆ ಬಿಡ್ತಾರಾ ಅವನ್ನ. ಒದಿತಾರೆ ನನ್ಮಗನ್ನ!'' – ಅಂದ.

ನಡುವೆ ಕಂಡಕ್ಟರೂ ಬಾಯಿ ತೆರೆದ...

''ಕಾಲ ಕೆಟ್ಟೋಯ್ತು ಬಿಡ್ರಿ. ಯಾರೂ ಮಾನ-ಮರ್ಯಾದೆಯಿಂದ ಬದುಕೋಹಾಗಿಲ್ಲ. ನಮ್ಮ ಹೆಣ್ಣುಮಕ್ಕಳನ್ನ ಕಾಯ್ತಾ ಕೂತ್ಕೋಬೇಕು. ಎಂಥ ಕಾಲ ಬಂತಪ್ಪಾ!''

''ಎಂಥ ಸ್ಯಾಡಿಸ್ಟ್ ಇರಬೇಕಲ್ಲವೇ ಅವನು'' – ಕಾಲೇಜ್ ಹುಡುಗಿಯೊಬ್ಬಳು ಪಕ್ಕದಲ್ಲೇ ನಿಂತಿದ್ದ ತನ್ನ ಫ್ರೆಂಡ್‌ಗೆ ಹೇಳಿದ್ದು.

''ವಯಸ್ಸಿಗೆ ಬಂದ ಹೆಣ್ಣುಮಕ್ಕಳನ್ನು ಹೊರಗೆ ಕಳಿಸಲು ಹೆದರುತ್ತಿದ್ದೀ, ಈಗ ಚಿಕ್ಕ ಹುಡುಗಿಯರನ್ನೂ ಶಾಲೆಗೆ ಕಳಿಸಲು ಭಯವಾಗುತ್ತಲ್ಲಾ!'' – ಎಂದು ಹೆಂಗಸೊಬ್ಬಳು ನಿಟ್ಟುಸಿರುಬಿಟ್ಟಳು.

... ಎಲ್ಲರ ಮಾತುಗಳನ್ನೂ ಗಂಭೀರವಾಗಿ ಕೇಳುತ್ತಾ ನಿಂತಿದ್ದಳು ಗಿರಿಜಾ. ಹತ್ತು ವರ್ಷಗಳಿಂದ ಕಾಲೇಜಿನಲ್ಲಿ ಬುದ್ಧನ ಬಗ್ಗೆ, ಬಸವಣ್ಣನ ಬಗ್ಗೆ, ಮಾರ್ಕ್ಸ್‌ವಾದದ ಬಗ್ಗೆ, ಮಾನವೀಯತೆ, ಅಂತಃಕರಣ, ದಯೆಯ ಬಗ್ಗೆ ಪಾಠ ಮಾಡುತ್ತಲೇ ಬಂದಿದ್ದ ಗಿರಿಜಾ ಥಟ್ಟನೆ ಹೇಳಿದಳು –

''ಸದ್ಯ, ನನಗೆ ಹೆಣ್ಣುಮಕ್ಕಳಿಲ್ಲವಲ್ಲಾ!''

ಅವನ ಮಕ್ಕಳ ನೆರವನ್ನೇ ಪಡೆಯುತ್ತಾನೆ ಎನ್ನುವ ಲಾವಣಿ ಸಾಲುಗಳು ದಾಖಲೆ ಒದಗಿಸುತ್ತವೆ.

ಟಿಪ್ಪುವಿನ ದೇಹವನ್ನು ಹುಡುಕುವ, ಋಣ ತೀರಿಸಿಕೊಳ್ಳುವ ಹಿಂದೂ-ಮುಸಲ್ಮಾನರು, ಬಂಧುಗಳು, ಬಳೆಗಳನ್ನು ಒಡೆದು ರೋದಿಸುವ ಹೆಂಗಸರ ನೋವನ್ನು ಲಾವಣಿಕಾರ –

ಖಳೆಯೊಳು ಕಾಮನೇ ಬಲದೊಳು ಭೀಮನೇ
ಚಲುವನೇ ನಿನ್ನಂತೆ ಯಾರಿಹರು
ಭೋಗಾದಿ ಇಂದ್ರನೇ ತ್ಯಾಗದಿ ಕರ್ಣನೇ
ಏಳದೆ ಯಾಕಿದ್ದಿ ಎನ್ನುವರು

ಎಂಬ ಸಾಲುಗಳಲ್ಲಿ ಹಿಡಿದಿಟ್ಟಿದ್ದಾನೆ. ಈ ಸ್ಥಿತಿಗೆ ಕಾರಣವಾದ ಮೀರ್‌ಸಾದಕನನ್ನು ತದಕಿ ಸಾಯಿಸುವುದಷ್ಟೇ ಅಲ್ಲದೆ, ಮಣ್ಣಲ್ಲಿ ಹೂತ ದೇಹವನ್ನು ಹೊರತೆಗೆದು ಶಪಿಸಿ, ಅವಮಾನಿಸುವ ಜನರ ರೋದನೆಯನ್ನು ಲಾವಣಿ ಸಾಲುಗಳು ಧ್ವನಿಸುತ್ತವೆ.

ರಾಜೋಜಿಯ 'ಟೀಪು ಸುಲ್ತಾನ್' ಲಾವಣಿಯಲ್ಲಿ ಶತ್ರುಗಳ ಪಿತೂರಿಯ ವಿವರಗಳು ಭಿನ್ನಬಗೆಯ ಚರಿತ್ರೆಯನ್ನೇ ಕಟ್ಟಿಕೊಡುತ್ತವೆ. ಇದು ಬರಹರೂಪದ ದಾಖಲೆಗಳಲ್ಲಿನ ಅನುಮಾನಗಳಿಗೆ ಉತ್ತರವೂ ಹೌದು. ಟಿಪ್ಪು ಮರಣಾನಂತರ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳುವ ಆಂಗ್ಲರು ಅದನ್ನು ವಿಂಗಡಿಸಿದ್ದು ಹೀಗೆ –

ಕರ್ನಾಟಕ ದೇಶವ ಕಣ್ಣು ಬಾಯಿ ಬಿಡುವಂತೆ
ಮೂರು ಭಾಗ ಮಾಡಿದರ್ ಚೂರ
ಒಂದು ಭಾಗಕೆ ಮರಾಟ ರಾಜ್ಯ
ಒಂದು ಭಾಗಕೆ ನಿಜಾಮರ ರಾಜ್ಯ
ಮೂರರಲ್ಲಿ ಒಂದನೇ ಭಾಗಕೆ
ಆ ಪೂರ್ವ ರಾಜರ ಅಧಿಕಾರ

ಒಡೆದುಹೋದ ಮೈಸೂರು ಸಂಸ್ಥಾನ ಮತ್ತೆ ಒಂದುಗೂಡಿದ್ದು ೧೯೫೬ರಲ್ಲಿಯೇ. ಲಾವಣಿಗಳಲ್ಲಿನ ಅನೇಕ ಸಂಗತಿಗಳು ಲಿಖಿತ ದಾಖಲೆಗಳಲ್ಲಿ ಕಂಡುಬರುವ ಕೊರತೆಗಳನ್ನು ನೀಗಿಸುವಲ್ಲಿ ಸಹಕರಿಸಿವೆ. ವಸ್ತುನಿಷ್ಠತೆಯ ವಿಚಾರವನ್ನು ಮುಂದಿಟ್ಟುಕೊಂಡು ಸಂಪ್ರದಾಯವಾದಿ ಚರಿತ್ರಕಾರರು ಲಾವಣಿ, ಐತಿಹ್ಯಗಳ ವಿಚಾರದಲ್ಲಿ ಅಸಡ್ಡೆ ತೋರಿದ್ದುಂಟು. ಆದರೆ ಈ ಹೊತ್ತಿಗೂ ಹೊಸಪೀಳಿಗೆಯ ಚರಿತ್ರಕಾರರು ಸಹ ಅದನ್ನೇ ಮುಂದುವರೆಸುತ್ತಿದ್ದರೆ ಮೌಖಿಕ ಚರಿತ್ರೆಯ ಸಂರಚನೆಗೆ, ಚರಿತ್ರೆಯ ಪುನರ್ರಚನೆಯ ಮಾತುಗಳಿಗೆ ಅರ್ಥ ಬರುವುದಿಲ್ಲ. ಏಕೆಂದರೆ, ಲಾವಣಿ ಪ್ರಕಾರವನ್ನೇ ಉದ್ಧರಿಸುವುದಾದರೆ ಇದು ಶೂನ್ಯದಲ್ಲಿ ಅನಾವರಣಗೊಂಡಿದ್ದಲ್ಲ. ಬದಲಾಗಿ ಜನರಿಂದಲೇ, ಜನರಿಗಾಗಿ ಹುಟ್ಟಿಕೊಂಡ ಲಾವಣಿಗಳು ತಮ್ಮದೇ ಆದ ಶಿಸ್ತನ್ನು ಹೊಂದಿವೆ. ಜನಪದರು ಅಷ್ಟು ಸುಲಭವಾಗಿ ಯಾರನ್ನೂ ಒಪ್ಪಿಕೊಳ್ಳುವವರಲ್ಲ. ಅವರಿಗೆ ಆಯ್ಕೆಯ ಸ್ವಾತಂತ್ರ್ಯವಿದೆ. ಒಂದು ಘಟನೆ ಅಥವಾ 'ಕ್ರಿಯೆ'ಯಷ್ಟೇ ಮುಖ್ಯವಾದುದು 'ವಸ್ತು'ವೂ ಸಹ. ಜನಪದರು ವಸ್ತುವನ್ನು ಆಯ್ದುಕೊಳ್ಳುವುದು ತಮಗೆ ಆಪ್ತವಾದ ನೆಲೆಗಳಿಂದಲೇ. ಈ ದಿಸೆಯಲ್ಲಿ ಟಿಪ್ಪು ಸುಲ್ತಾನನ ಸಾವು ಜನಪದರನ್ನು ಕಾಡಿದ್ದು ವಿರಾಟ್ ಸ್ವರೂಪದಲ್ಲಿಯೇ ಎಂದರೆ ತಪ್ಪಾಗಲಾರದು.

ಡಾ|| ಸಿ. ಆರ್. ಗೋವಿಂದರಾಜು
[illegible]

# ಹೊಸ ವಿದೇಶ ವ್ಯಾಪಾರ ನೀತಿ ಮತ್ತು ಉದ್ಯೋಗ ಸೃಷ್ಟಿ

*೨೦೦೬-೦೭ರಲ್ಲಿ ಶೇಕಡ ೨೦ರಷ್ಟಿನ ವ್ಯಾಪಾರ ಸರಕುಗಳ ಹೆಚ್ಚಳದಿಂದ ೧೬ ಮಿಲಿಯ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಗುರಿ ಸರಕಾರಕ್ಕಿದೆ. ೨೦೦೮-೦೯ರ ವೇಳೆಗೆ ೧೩.೬ ಮಿಲಿಯ ಹೆಚ್ಚುವರಿ ಉದ್ಯೋಗಗಳನ್ನು ಸೃಷ್ಟಿಸುವುದು ಸಾಧ್ಯ. ಆದರೆ, ಇದು ಸಾಧ್ಯವಾಗ ಬೇಕಾದರೆ ಭಾರತದ ರಫ್ತುಗಳು ೧೫೦ ಶತ ಕೋಟಿ ಡಾಲರ್ ಮೀರಬೇಕು. ಹೊಸ ನೀತಿಯಲ್ಲಿ ರಫ್ತುಗಳ ಹೆಚ್ಚಳ ಸಾಧಿಸಲು ಉತ್ತೇಜಕ ಗಳನ್ನು ಅಳವಡಿಸಿಕೊಳ್ಳಲಾಗಿದೆ. ಮುತ್ತು , ರತ್ನ, ಮತ್ತು ಆಭರಣಗಳು, ವಾಹನಗಳ ಬಿಡಿಭಾಗಗಳು ಇತ್ಯಾದಿಗಳಿಗೆ ಮಹತ್ವ ನೀಡಲಾಗಿದೆ. ಹೆಚ್ಚು ಉದ್ಯೋಗಗಳ ಸೃಷ್ಟಿಗೆ ಕಾರಣವಾಗಬಲ್ಲ ಕ್ಷೇತ್ರ ಗಳೆಂದರೆ ಜವಳಿ ಮತ್ತು ಸಿದ್ಧ ಉಡುಪು ಉದ್ದಿಮೆ, ಚರ್ಮದ ಉದ್ದಿಮೆಗಳು ಇತ್ಯಾದಿ.*

**ಈ**ಚೆಗೆ ಕೇಂದ್ರ ವಾಣಿಜ್ಯ ಸಚಿವ ಶ್ರೀ ಕಮಲನಾಥ್ ಪ್ರಕಟಿಸಿರುವ ೨೦೦೪-೦೯ರ ವಿದೇಶ ವ್ಯಾಪಾರ ನೀತಿಯ ವಾರ್ಷಿಕ ಪುರವಣಿಯು ರಫ್ತುಗಳ ಏರಿಕೆಯೊಂದಿಗೆ ದೊಡ್ಡ ಪ್ರಮಾಣದ ವಿದೇಶಿ ನೇರ ಹೂಡಿಕೆಗಳನ್ನು ಆಕರ್ಷಿಸುವುದರ ಜತೆಗೆ ಉದ್ಯೋಗಾವಕಾಶಗಳ ಸೃಷ್ಟಿಗೂ ಒತ್ತುನೀಡಿದೆ. ವಾರ್ಷಿಕ ಪುರವಣಿಯು ರಫ್ತು ಕ್ಷೇತ್ರದಲ್ಲಿ ಮಹತ್ವಾಕಾಂಕ್ಷಿ ಗುರಿಗಳನ್ನು ಅಳವಡಿಸಿಕೊಂಡಿದೆ. ಕಳೆದ ವರ್ಷ ಭಾರತದ ರಫ್ತುಗಳು ೧೦೦ ಶತಕೋಟಿ ಡಾಲರುಗಳನ್ನು ಮೀರಿದ್ದು, ಈ ವರ್ಷದ ರಫ್ತು ಗುರಿ ೧೨೦ ಶತಕೋಟಿ ಡಾಲರ್‌ಗಳಾಗಿವೆ. ಕಳೆದ ಎರಡು ವರ್ಷಗಳಿಂದ ಭಾರತದ ರಫ್ತುಗಳು ವಾರ್ಷಿಕ ಶೇಕಡ ೨೦ರ ದರದಲ್ಲಿ ಹೆಚ್ಚುತ್ತಿರುವುದು ಸಂತೋಷದ ವಿಷಯ.

೨೦೦೪ರ ಆಗಸ್ಟ್ ೩೧ರಂದು ವಾಣಿಜ್ಯ ಸಚಿವ ಶ್ರೀ ಕಮಲನಾಥ್ ಅವರು ೨೦೦೪-೦೯ರ ಅವಧಿಯ ರಾಷ್ಟ್ರೀಯ ವಿದೇಶ ವ್ಯಾಪಾರ ನೀತಿಯನ್ನು ಪ್ರಕಟಿಸಿದ್ದರು. ಆ ತರುವಾಯ ಪ್ರತಿವರ್ಷ ಈ ನೀತಿಗೆ ಸಂಬಂಧಿಸಿದ ವಾರ್ಷಿಕ ಪುರವಣಿಯನ್ನು ಪ್ರಕಟಿಸುತ್ತಾ ಬಂದಿದ್ದಾರೆ. ಹಿಂದಿನ ವರ್ಷಗಳಲ್ಲಿ ವಿದೇಶಿ ವಿನಿಮಯ ಸಂಗ್ರಹವನ್ನು ಹೆಚ್ಚಿಸುವ ಪ್ರಕ್ರಿಯೆಗೆ ಬಹಳಷ್ಟು ಒತ್ತು ನೀಡಲಾಗುತ್ತಿತ್ತು. ಈಗಿನ ಹೊಸ ನೀತಿಯಲ್ಲಿ ಆರ್ಥಿಕ ಪ್ರಗತಿಯನ್ನು ಹೆಚ್ಚಿಸುವ ಪ್ರಕ್ರಿಯೆಗೆ ಒತ್ತು ಇದೆ. ಈಗ ಭಾರತ ೧೫೦ ಶತಕೋಟಿ ಡಾಲರ್ ವಿದೇಶಿ ವಿನಿಮಯ ಸಂಗ್ರಹ ಹೊಂದಿದ್ದು ವಿದೇಶಿ ವಿನಿಮಯ ಸಂಗ್ರಹ ಈಗ ಒತ್ತಿನ ವಿಷಯವಾಗಿಲ್ಲ. ಭಾರತದ ಆರ್ಥಿಕ ಪ್ರಗತಿಗೆ ವಿದೇಶ ವ್ಯಾಪಾರವೂ ಗಣನೀಯ ಕೊಡುಗೆ ನೀಡಬಲ್ಲುದು. ಇದನ್ನು ಗಮನಿಸಿಯೇ ವಾಣಿಜ್ಯ ಸಚಿವರು ವಿದೇಶ ವ್ಯಾಪಾರವನ್ನು ಒಂದು ಪ್ರಗತಿ ಪ್ರಚೋದಕ ಅಸ್ತ್ರವನ್ನಾಗಿ ರೂಪಿಸಲು ಮುಂದಾಗಿದ್ದಾರೆ ಎನ್ನಬಹುದು.

ವಾರ್ಷಿಕ ಪುರವಣಿಯಲ್ಲಿ ಎರಡು ರೀತಿಯ ಯೋಜನೆಗಳನ್ನು ಅಳವಡಿಸಿಕೊಳ್ಳಲಾಗಿದೆ.

೧. ಉತ್ಪನ್ನ ಕೇಂದ್ರೀಕೃತ ಯೋಜನೆ ಮತ್ತು ೨. ಮಾರುಕಟ್ಟೆ ಕೇಂದ್ರೀಕೃತ ಯೋಜನೆ

ಉತ್ಪನ್ನ ಕೇಂದ್ರೀಕೃತ ಯೋಜನೆಯನ್ವಯ ಕೆಲವು ಆಯ್ದ ಉತ್ಪನ್ನಗಳಿಗೆ ರಫ್ತುಗಳಲ್ಲಿ ವಿಶೇಷ ಪ್ರಾಧಾನ್ಯತೆ ಮತ್ತು ಪ್ರಾಶಸ್ತ್ಯ ನೀಡಲಾಗುವುದು. ಈ ಯೋಜನೆಯಂತೆ ಮೌಲ್ಯವರ್ಧಿತ ಮೀನು ಮತ್ತು ಚರ್ಮದ ಉತ್ಪನ್ನಗಳು, ಲೇಖನ ಸಾಮಗ್ರಿಗಳು, ಆಟೋಟ ವಸ್ತುಗಳು, ಕರಕುಶಲ ವಸ್ತುಗಳು ಇತ್ಯಾದಿಗಳಿಗೆ ಮಹತ್ವ ನೀಡಲಾಗುವುದು. ಮಾರುಕಟ್ಟೆ ಕೇಂದ್ರೀಕೃತ ಯೋಜನೆಯನ್ವಯ ಕೆಲವು ಆಯ್ದ ಮಾರುಕಟ್ಟೆಗಳಿಗೆ ಮಹತ್ವ ನೀಡಲಾಗುವುದು. ಈ ಯೋಜನೆಯಂತೆ ಆಫ್ರಿಕಾದ ದೇಶಗಳು ಲ್ಯಾಟಿನ್ ಅಮೆರಿಕಾ ಸೇರಿದಂತೆ ಕೆಲವು ಆಯ್ದ ದೇಶಗಳಿಗೆ ರಫ್ತುಗಳನ್ನು ಹೆಚ್ಚಿಸಲು ಶ್ರಮಿಸಲಾಗುವುದು.

೨೦೦೬-೦೭ರಲ್ಲಿ ಶೇಕಡ ೨೦ರಷ್ಟಿನ ವ್ಯಾಪಾರ ಸರಕುಗಳ ರಫ್ತು ಹೆಚ್ಚಳದಿಂದ ೧೬ ಮಿಲಿಯ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಗುರಿ ಸರಕಾರಕ್ಕಿದೆ. ೨೦೦೮-೦೯ರ ವೇಳೆಗೆ ೧೩.೬ ಮಿಲಿಯ ಹೆಚ್ಚುವರಿ ಉದ್ಯೋಗಗಳನ್ನು ಸೃಷ್ಟಿಸುವುದು ಸಾಧ್ಯ. ಆದರೆ, ಇದು ಸಾಧ್ಯವಾಗಬೇಕಾದರೆ ಭಾರತದ ರಫ್ತುಗಳು ೧೫೦ ಶತಕೋಟಿ ಡಾಲರ್ ಮೀರಬೇಕು. ಹೊಸ ನೀತಿಯಲ್ಲಿ ರಫ್ತುಗಳ ಹೆಚ್ಚಳ ಸಾಧಿಸಲು ಉತ್ತೇಜಕಗಳನ್ನು ಅಳವಡಿಸಿಕೊಳ್ಳಲಾಗಿದೆ. ಮುತ್ತು, ರತ್ನ ಮತ್ತು ಆಭರಣಗಳು, ವಾಹನಗಳ ಬಿಡಿಭಾಗಗಳು, ಇತ್ಯಾದಿಗಳಿಗೆ ಮಹತ್ವ ನೀಡಲಾಗಿದೆ. ಹೆಚ್ಚು ಉದ್ಯೋಗ ಸೃಷ್ಟಿಗೆ ಕಾರಣವಾಗಬಲ್ಲ ಕ್ಷೇತ್ರಗಳೆಂದರೆ, ಜವಳಿ ಮತ್ತು ಸಿದ್ಧ ಉಡುಪು ಉದ್ದಿಮೆ, ಚರ್ಮದ ಉತ್ಪನ್ನಗಳು, ಮುತ್ತು ಮತ್ತು ಆಭರಣ, ತೋಟಗಾರಿಕೆ ಉತ್ಪನ್ನಗಳು ಹೂವು ತರಕಾರಿ ಹಣ್ಣುಹಂಪಲು, ಹಾಲಿನ ಉತ್ಪನ್ನಗಳು, ಸಂಸ್ಕರಿಸಿದ ಆಹಾರ, ಗೊಂಬೆಗಳು, ಆಟೋಟ ಸಾಮಾನುಗಳು, ಔಷಧಗಳು ಇತ್ಯಾದಿ. ಹೆಚ್ಚು ದುಡಿಮೆ ಬಳಕೆಯ (labour intensive) ಉತ್ಪನ್ನಗಳು ಹೆಚ್ಚು ಉದ್ಯೋಗ ಸೃಷ್ಟಿಗೆ ಕಾರಣವಾಗುತ್ತವೆ. ರಫ್ತುಗಳಲ್ಲಿ ಹೆಚ್ಚು ದುಡಿಮೆ ಬಳಕೆಯ ಉತ್ಪನ್ನಗಳ ಪಾಲು ಈಚೆಗೆ ಶೇಕಡ ೧೮ರಷ್ಟು ಇಳಿದಿದೆ. ೨೦೦೩-೦೪ರಲ್ಲಿ ಅದರ ಪಾಲು ಶೇಕಡ ೫೮ಕ್ಕೆ ಇಳಿದಿದೆ. ೧೯೯೫-೯೬ರಲ್ಲಿ ಅದರ ಪಾಲು ಶೇಕಡ ೭೬ ಆಗಿತ್ತು. ಆದುದರಿಂದ ಹೆಚ್ಚು ದುಡಿಮೆ ಬಳಕೆಯ ಉತ್ಪನ್ನಗಳಿಗೆ ರಫ್ತುಗಳಲ್ಲಿ ಆದ್ಯತೆ ನೀಡಬೇಕು. ಅಂತಹ ಉತ್ಪನ್ನಗಳ ರಫ್ತುಗಳನ್ನು ಹೆಚ್ಚಿಸಿದರೆ ಉದ್ಯೋಗ ಸೃಷ್ಟಿಯೂ ಹೆಚ್ಚುತ್ತದೆ. ಆದುದರಿಂದ ಸರಕಾರ ಹೆಚ್ಚು ದುಡಿಮೆ ಬಳಕೆಯ ಉದ್ದಿಮೆಗಳಾದ ಜವುಳಿ, ಕರಕುಶಲ ಕೈಗಾರಿಕೆ, ಆಹಾರ ಸಂಸ್ಕರಣೆ ಇವುಗಳಿಗೆ ಹೆಚ್ಚು ಪ್ರೋತ್ಸಾಹ ಮತ್ತು ಆದ್ಯತೆ ನೀಡಬೇಕು. ಈ ಕ್ಷೇತ್ರಗಳು ತ್ವರಿತವಾಗಿ ಬೆಳೆಯಬೇಕಾದರೆ ಸರಕಾರ ಅವುಗಳ ಬೇಡಿಕೆಗಳಿಗೆ ಸರಿಯಾಗಿ ಮತ್ತು ತ್ವರಿತವಾಗಿ ಸ್ಪಂದಿಸಬೇಕು. ಈ ಕ್ಷೇತ್ರಗಳ ಒಂದು ಬೇಡಿಕೆ ನಮನೀಯತೆಯಿರುವ ಕಾರ್ಮಿಕ ಕಾಯಿದೆ. ಈ ಉದ್ದಿಮೆಗಳು ಕಾಯಂ ನೆಲೆಯಲ್ಲಿ ಹೆಚ್ಚು ನೌಕರರನ್ನು ಹೊಂದಲು ಬಯಸುವುದಿಲ್ಲ. ಅವಶ್ಯಕತೆಯಿದ್ದಾಗ ಗುತ್ತಿಗೆ ಆಧಾರದಲ್ಲಿ ಅವು ಜನರನ್ನು ಕೆಲಸಕ್ಕೆ ತೆಗೆದುಕೊಳ್ಳಬಯಸುತ್ತವೆ. ಕಾರ್ಮಿಕ ಕಾಯಿದೆಯ ಸುಧಾರಣೆ ಈ ಕ್ಷೇತ್ರಗಳ ಪ್ರಗತಿಗೆ ಅತ್ಯಗತ್ಯ. ಆದರೆ ಸರಕಾರ ಕಾರ್ಮಿಕ ಕಾಯಿದೆ-ಸುಧಾರಣೆಯನ್ನು ಕೃತಿಗಿಳಿಸುವುದು ಕಷ್ಟ. ಏಕೆಂದರೆ, ವಾಮಪಕ್ಷಗಳು ಅದನ್ನು ವಿರೋಧಿಸುತ್ತವೆ. ಸಣ್ಣ ಉದ್ದಿಮೆಗಳಿಗೆ ಕಡಿಮೆ ಬಡ್ಡಿಯ ಸಾಲದ ಅವಶ್ಯಕತೆಯೂ ಇದೆ. ಅದರೊಂದಿಗೆ ಮಾರುಕಟ್ಟೆ ಬೆಂಬಲವೂ ಅತ್ಯಗತ್ಯ. ಇದಕ್ಕೂ ಸರಕಾರ ಲಕ್ಷ್ಯ ನೀಡಬೇಕು.

ಜಾಗತಿಕ ರಫ್ತುಗಳಲ್ಲಿ ಭಾರತದ ಪಾಲು ೨೦೦೪ರಲ್ಲಿ ಶೇಕಡ ೦.೮ ಇದ್ದುದು ೨೦೦೫ರಲ್ಲಿ ಶೇಕಡ ೦.೯ಕ್ಕೆ ಏರಿದೆ. ವ್ಯಾಪಾರ ಸರಕುಗಳ ರಫ್ತುಗಾರ ದೇಶವಾಗಿ ಭಾರತದ ಸ್ಥಾನ ೩೦ರಿಂದ ೨೯ಕ್ಕೆ ವೃದ್ಧಿಸಿದೆ. ಭಾರತದ ಗಮನಾರ್ಹ ಸಾಧನೆ ತೋರಿಸಿರುವುದು ಸೇವೆಗಳ ರಫ್ತಿನಲ್ಲಿ. ಜಾಗತಿಕ ಸೇವೆಗಳ ರಫ್ತಿನಲ್ಲಿ ಭಾರತದ ಪಾಲು ೨೦೦೪ರಲ್ಲಿ ಶೇಕಡ ೧.೯ ಇತ್ತು. ೨೦೦೫ರಲ್ಲಿ ಅದು ಶೇಕಡ ೨.೩ಕ್ಕೆ ಏರಿದೆ. ಭಾರತದ ಒಟ್ಟು ವ್ಯಾಪಾರದಲ್ಲಿ ಸೇವೆಗಳ ಪಾಲು ೨೦೦೩-೦೪ರಲ್ಲಿ ೨೩.೫ ಶೇಕಡ ಇತ್ತು. ಅದು ೨೦೦೪-೦೫ರಲ್ಲಿ ಶೇಕಡ ೨೯.೧ಕ್ಕೆ ಮತ್ತು ೨೦೦೫-೦೬ರಲ್ಲಿ ಶೇಕಡ ೩೫ಕ್ಕೂ ಏರಿದೆ. ಸೇವೆಗಳ ರಫ್ತುದಾರ ದೇಶವಾಗಿ ಭಾರತದ ಸ್ಥಾನ ೨೦೦೪ರಲ್ಲಿ ೧೬ ಇದ್ದದ್ದು, ೨೦೦೫ರಲ್ಲಿ ೧೧ಕ್ಕೆ ವೃದ್ಧಿಸಿದೆ. ಇದು ಸಂತೋಷದ ವಿಷಯ. ಆದರೆ ಇದು ಸಾಲದು. ಭಾರತದ ಕೈಗಾರಿಕಾ ಉತ್ಪನ್ನಗಳ ರಫ್ತುಗಳು ಗಮನಾರ್ಹವಾಗಿ ಹೆಚ್ಚಬೇಕು. ಇದಕ್ಕಾಗಿ ಕೈಗಾರಿಕಾ ಉತ್ಪಾದನಾ ಕ್ಷೇತ್ರ ತ್ವರಿತವಾಗಿ ಅಭಿವೃದ್ಧಿ ಹೊಂದಬೇಕು. ಕೈಗಾರಿಕೆಗಳ ಪ್ರಗತಿಗೆ ಪ್ರತಿಕೂಲ ವಾತಾವರಣವನ್ನು ಸೃಷ್ಟಿಸುತ್ತಿರುವುದೇ ಮೂಲಸ್ಥಾವರ ಸೌಲಭ್ಯಗಳ ಕೊರತೆ. ಮೂಲಸ್ಥಾವರ ಸೌಲಭ್ಯಗಳ ತ್ವರಿತ ಅಭಿವೃದ್ಧಿ ಮತ್ತು ವಿಸ್ತರಣೆಯಾದರೆ ಅದರ ಫಲವಾಗಿ ಕೈಗಾರಿಕೆಗಳ ತ್ವರಿತ ಅಭಿವೃದ್ಧಿಗೆ ಬೆಂಬಲ ಹಾಗೂ ಪ್ರೋತ್ಸಾಹ ದೊರೆಯುತ್ತದೆ.

ಈಗ ರಫ್ತುಗಳಿಗೆ ವಿನಾಯಿತಿ ಉತ್ತೇಜಕಗಳ ರೂಪದಲ್ಲಿ ನೀಡಲಾಗುತ್ತಿರುವ ಬೆಂಬಲದ ಬದಲು ರಫ್ತುಗಳಿಗಾಗಿ ಉತ್ಪನ್ನಗಳನ್ನು ತಯಾರಿಸುವ ಕೈಗಾರಿಕೆಗಳಿಗೆ ನೆರವಾಗಲು ಮೂಲಸ್ಥಾವರ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಬೇಕು. ರಫ್ತು ಕ್ಷೇತ್ರದಲ್ಲಿ ವಿನಾಯಿತಿ ಉತ್ತೇಜಕಗಳ ರೂಪದಲ್ಲಿ ರೂ. ೩೫,೪೩೦ ಕೋಟಿ ಹಣವನ್ನು ೨೦೦೪-೦೫ರಲ್ಲಿ ವ್ಯಯಿಸಲಾಗಿತ್ತು. ಇಂತಹ ವಿನಾಯಿತಿ ಉತ್ತೇಜಕಗಳನ್ನು ರದ್ದುಗೊಳಿಸಿ ಆ ಹಣವನ್ನು ಮೂಲಸ್ಥಾವರ ಸೌಲಭ್ಯಗಳ ಅಭಿವೃದ್ಧಿಗೆ ಬಳಸುವುದು ಸೂಕ್ತ ಕ್ರಮ. ೨೦೦೫ರಲ್ಲಿ ವಿಶೇಷ ಆರ್ಥಿಕ ವಲಯ ಕಾಯಿದೆ ಅಂಗೀಕೃತವಾಗಿದ್ದು ೧೪೦ ವಿಶೇಷ ಆರ್ಥಿಕ ವಲಯಗಳ ಸ್ಥಾಪನೆಗೆ ಪ್ರಯತ್ನಿಸಲಾಗುತ್ತಿದೆ. ಈ ವಿಶೇಷ ಆರ್ಥಿಕ ವಲಯಗಳಿಗೆ ನೀಡಬೇಕಾದ ತೆರಿಗೆ ವಿನಾಯಿತಿ ಮತ್ತು ಉತ್ತೇಜಕಗಳಿಂದಾಗಿ ಸರಕಾರವು ೯೦,೦೦೦ ಕೋಟಿ ರೂಪಾಯಿಗಳ ವರಮಾನದಿಂದ ವಂಚಿತವಾಗಬಹುದು. ಆದುದರಿಂದ ವಿನಾಯಿತಿ ಉತ್ತೇಜಕಗಳ ಬದಲು ಮೂಲಸ್ಥಾವರ ಸೌಲಭ್ಯಗಳ ಅಭಿವೃದ್ಧಿ ಮತ್ತು ವಿಸ್ತರಣೆಗೆ ವಿಶೇಷ ಪ್ರಾಶಸ್ತ್ಯ ನೀಡಬೇಕು. ಭಾರತದ ಕೈಗಾರಿಕೆಗಳ ತ್ವರಿತ ಪ್ರಗತಿ, ಕೈಗಾರಿಕಾ ಉತ್ಪನ್ನಗಳ ಸ್ಪರ್ಧಾತ್ಮಕತೆ ಮತ್ತು ಉತ್ಪನ್ನಗಳ ಗುಣಮಟ್ಟ – ಇವುಗಳು ರಫ್ತು ಯತ್ನಗಳಿಗೆ ಚಾಲನೆ ನೀಡಬೇಕೇ ವಿನಾ ವಿನಾಯಿತಿ ಉತ್ತೇಜಕಗಳಿಗಲ್ಲ.

**ಡಾ|| ಕೆ. ಕೆ. ಅಮ್ಮಣ್ಣಾಯ**
'ಗಂಗಾ', ವಿ. ಪಿ. ನಗರ, ೪ನೇ ಮುಖ್ಯರಸ್ತೆ, ಉಡುಪಿ - ೨

# ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಮೊದಲ ಅಧ್ಯಕ್ಷ

# ಎಲ್. ಜಿ. ಹಾವನೂರು



**ಹಿಂ**ದುಳಿದ ವರ್ಗಗಳ ಆಯೋಗದ ಮಾಜಿ ಅಧ್ಯಕ್ಷರಾಗಿದ್ದ ಶ್ರೀಯುತ ಎಲ್. ಜಿ. ಹಾವನೂರು ಇದೇ ಸೆಪ್ಟೆಂಬರ್ ೧೫ರಂದು ನಿಧನರಾದರು. ಇವರ ನಿಧನದಿಂದ ಹಿಂದುಳಿದ ವರ್ಗಕ್ಕೆ ತುಂಬಲಾರದ ನಷ್ಟವಾಗಿದೆ. ಅವರ ವರದಿಯಲ್ಲಿ ಬರುವ ಮುಖ್ಯಾಂಶಗಳು ಇಂತಿವೆ :

ಈ ವರದಿಯು ಉಚ್ಚ ನ್ಯಾಯಾಲಯ ಮತ್ತು ಸರ್ವೋಚ್ಚ ನ್ಯಾಯಾಲಯಗಳು ನೀಡಿರುವ ವಿವಿಧ ತೀರ್ಪುಗಳನ್ನು ಆಧರಿಸಿದೆ. ಸಂವಿಧಾನದ ೩೪೦ನೇ ಅನುಚ್ಛೇದದ ಮೇರೆಗೆ ರಾಷ್ಟ್ರಪತಿಯವರು ೧೯೫೩ರಲ್ಲಿ ಕಾಕಾ ಕಾಲೇಲ್ಕರ್ ಅಧ್ಯಕ್ಷತೆಯಲ್ಲಿ ಹಿಂದುಳಿದ ವರ್ಗಗಳ ಆಯೋಗವನ್ನು ನೇಮಿಸಿದ್ದರು. ಈ ಆಯೋಗವು ಎಲ್ಲಾ ರಾಜ್ಯಗಳಿಗೂ ಕೇಂದ್ರಾಡಳಿತ ಪ್ರದೇಶಗಳಿಗೂ ಹಿಂದುಳಿದ ವರ್ಗಗಳ ಪಟ್ಟಿಯನ್ನು ತಯಾರಿಸಿತು. ಆಯೋಗದ ಶಿಫಾರಸ್ಸುಗಳು ಕೇಂದ್ರ ಸರ್ಕಾರಕ್ಕೆ ಒಪ್ಪಿಗೆಯಾಗಲಿಲ್ಲ. ಆಯಾ ರಾಜ್ಯ ಅಥವಾ ಕೇಂದ್ರಾಡಳಿತ ಪ್ರದೇಶಗಳು ತಯಾರಿಸಿದ ಸಂವಿಧಾನಪೂರ್ವದ ಹಿಂದುಳಿದ ವರ್ಗಗಳ ಪಟ್ಟಿಗಳೇ ಮುಂದುವರಿಯುವಂತೆ ಅನುಮತಿ ನೀಡಲಾಯಿತು.

೧೯೬೦ರಲ್ಲಿ ಮೈಸೂರು ಸರ್ಕಾರವು ಡಾ|| ಆರ್. ನಾಗಣ್ಣ ಗೌಡರ ಅಧ್ಯಕ್ಷತೆಯಲ್ಲಿ 'ಹಿಂದುಳಿದ ವರ್ಗಗಳ ಸಮಿತಿ' ನೇಮಿಸಿತು. ಈ ಸಮಿತಿ ಶಿಫಾರಸ್ಸುಗಳನ್ನು ಆಧರಿಸಿ ತಯಾರಿಸಿದ ಹಿಂದುಳಿದ ವರ್ಗಗಳ ಪಟ್ಟಿಗಳು ಅದರಲ್ಲಿ ಏರ್ಪಡಿಸಿದ್ದ ಮೀಸಲು ಸ್ಥಾನಗಳ ವ್ಯಾಪ್ತಿಯೂ ಸರ್ವೋಚ್ಚ ನ್ಯಾಯಾಲಯದಲ್ಲಿ ಆಕ್ಷೇಪಿಸಲ್ಪಟ್ಟು ಅವುಗಳನ್ನು ನ್ಯಾಯಾಲಯವು ತಳ್ಳಿಹಾಕಿತು. ೧೯೬೩ರಲ್ಲಿ ಮೈಸೂರು ಸರ್ಕಾರ ಒಂದು ಆದೇಶ ಹೊರಡಿಸಿ ಸಂವಿಧಾನದ ೧೫(೪) ಮತ್ತು ೧೬(೪) ಅನುಚ್ಛೇದಗಳ ಉದ್ದೇಶಗಳಿಗಾಗಿ ೧,೨೦೦/- ರೂ. ಗಳಿಗೆ ಮೀರದ ವಾರ್ಷಿಕ ವರಮಾನ ಇರುವವರನ್ನು 'ಹಿಂದುಳಿದವರೆಂದು' ವರ್ಗೀಕರಿಸಲಾಯಿತು. ೧೯೬೩ರಲ್ಲಿ ಮೈಸೂರು ಉಚ್ಚ ನ್ಯಾಯಾಲಯದಲ್ಲಿ ಇದರ ವಿರುದ್ಧದ ಅಭಿಪ್ರಾಯಗಳು ವ್ಯಕ್ತವಾದವು. ಈ ಯೋಜನೆಯಿಂದ ದೊರೆಯುವ ಪ್ರಯೋಜನಗಳನ್ನು ಹಿಂದುಳಿದ ವರ್ಗಗಳಿಗೆ ಸೇರಿರದ ವ್ಯಕ್ತಿಗಳೇ ಪಡೆದುಕೊಂಡರೆಂದೂ ಹಿಂದುಳಿದ ವರ್ಗಗಳಿಗೆ ಎಳ್ಳಷ್ಟೂ ಸೌಲಭ್ಯ ದೊರೆಯಲಿಲ್ಲವೆಂದೂ ಕಳೆದ ೯ ವರ್ಷಗಳ ಅವಧಿಯಲ್ಲಿ ತಮ್ಮೆದುರು ವಿಚಾರಣೆಗೆ ಬಂದ ಅನೇಕ ಪ್ರಕರಣಗಳನ್ನು ಪರಿಶೀಲಿಸಿದ ಮೈಸೂರು ಉಚ್ಚ ನ್ಯಾಯಾಲಯ ೧೯೭೨ರಲ್ಲಿ ಅದೇ ಬಗೆಯ ಅಭಿಪ್ರಾಯ ಪ್ರಕಟಿಸಿತು. ೧೯೫೦ರಿಂದ ಭಾರತದ ಸಂವಿಧಾನವು ಜಾರಿಗೆ ಬಂದಾಗಿನಿಂದ ನೈಜವಾದ ಹಿಂದುಳಿದ ವರ್ಗಗಳಿಗೆ ಯೋಜನೆಗಳು, ಪ್ರಯೋಜನಗಳು ದೊರೆಯದಿದ್ದರಿಂದ ಸರಕಾರ ಶ್ರೀ ಎಲ್. ಜಿ. ಹಾವನೂರು ಅವರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಆಯೋಗವೊಂದನ್ನು ರಚಿಸಿತು.

**ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ**

ಹಾವನೂರು ಅವರು ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರಾಗಿರುವುದನ್ನು ವಿರೋಧಿಸಿ ಈ ಸಾಕ್ಷ್ಯದ ಬಗ್ಗೆ ವಹಿಸಿದ್ದ ಲಕ್ಷ್ಯವನ್ನು ವಿಚಲಿತಗೊಳಿಸಲು ಯತ್ನಿಸಿದರು. ಆಯೋಗದಲ್ಲಿ ನನ್ನೊಡನೆ ಶ್ರಮಿಸಿದ ಕೆಲವು ಸಹೋದ್ಯೋಗಿಗಳೂ ಸೇರಿ ಅನೇಕ ಮಿತ್ರರ, ಹಿರಿಯರ ಪ್ರೋತ್ಸಾಹ, ಸದಾಶಯ, ಆಶೀರ್ವಾದಗಳ ರಕ್ಷೆಯಲ್ಲಿ ಈ ಕಾರ್ಯವನ್ನು ನೆರವೇರಿಸಿದ್ದೇನೆ ಎಂದು ಹಾವನೂರು ಹೇಳಿಕೊಂಡಿದ್ದಾರೆ.

ಕಾಲೇಲ್ಕರ್ ಆಯೋಗದ ವರದಿ ಮತ್ತು ಹಿಂದುಳಿದ ವರ್ಗಗಳ ಸಂಘಟನೆ ಎಂಬ ಶೀರ್ಷಿಕೆಯಲ್ಲಿ ಹಾವನೂರು ಈ ರೀತಿ ಹೇಳಿದ್ದಾರೆ :

ಕಾಲೇಲ್ಕರ್ ಆಯೋಗದ ವರದಿ ೧೯೫೬ರಲ್ಲಿ ಪ್ರಕಟವಾದಾಗ ವರದಿಯ ವೇಲು ಪತ್ರದಲ್ಲಿ ಮಹಿಳೆಯರು ಮತ್ತು ಗ್ರಾಮಸ್ಥರನ್ನು ಒಂದು ವರ್ಗವಾಗಿ ಹಿಂದುಳಿದ ವರ್ಗಕ್ಕೆ ಸೇರಿದವರೆಂಬುದಾಗಿ ಪರಿಗಣಿಸಬೇಕೆಂದು ಮಾಡಿದ ಸಲಹೆಗಳಿಂದ ಇಡೀ ಹಿಂದುಳಿದ ವರ್ಗಗಳಿಗೆ ಒದಗಬಹುದಾದ ಕೆಡುಕಿನ ವ್ಯಾಪ್ತಿಯನ್ನು ಮನಗಂಡ ಎಲ್. ಜಿ. ಹಾವನೂರರು ೧೯೫೬ ಮೇ ೨೨ರಂದು ರಾಣೆಬೆನ್ನೂರಿನಲ್ಲಿ ಹಿಂದುಳಿದ ವರ್ಗಗಳ ಅನುಸೂಚಿತ ಜಾತಿ, ಪಂಗಡಗಳ ಸಮ್ಮೇಳನವನ್ನು ಸಂಘಟಿಸಿದರು. ಅಂಥ ಸಮ್ಮೇಳನ ಜರುಗಿದ್ದು ಅದೇ ಮೊದಲಿಗೆ ಎಂದಿದ್ದಾರೆ. ಸಮ್ಮೇಳನಕ್ಕೆ ಹೊಸದಾಗಿ ನಿರ್ಮಾಣವಾಗಲಿದ್ದ ಕರ್ನಾಟಕ ರಾಜ್ಯದಲ್ಲಿ ಸೇರಿಕೊಳ್ಳಲಿದ್ದ ಮೈಸೂರು, ಮುಂಬಯಿ, ಹೈದರಾಬಾದ್, ಮದ್ರಾಸ್ ಮತ್ತು ಕೊಡಗು ಈ ಐದು ರಾಜ್ಯಗಳಿಂದಲೂ ನಾಯಕರನ್ನು ಆಹ್ವಾನಿಸಲಾಗಿತ್ತು. ಎ. ಭೀಮಪ್ಪ ನಾಯಕ್, ಸರೋಜಿನಿ ಮಹಿಷಿ, ಬಸವಲಿಂಗಪ್ಪ, ಗದ್ದೆಪ್ಪ ಹಳ್ಳಿಕೇರಿ, ಎಫ್. ಡಿ. ಘೋಡ್ಕೆ ಅವರು ಭಾಗವಹಿಸಿ ಅಧ್ಯಕ್ಷರಾಗಿದ್ದ ಕಾಲೇಲ್ಕರ್ ಅವರ ಶಿಫಾರಸ್ಸುಗಳಿಗೆ ವಿರುದ್ಧವಾಗಿ ಮಾತನಾಡಿದರು. ಆಯೋಗದ ವರದಿಯಲ್ಲಿನ ನ್ಯೂನತೆಗಳ ಬಗ್ಗೆ ಒಂದು ಸಾಮಾಜಿಕ ಆರ್ಥಿಕ ಸಮೀಕ್ಷೆ ನಡೆಸಬೇಕೆಂದು ತಿಳಿಸಿದರು.

೧೯೫೬, ನವೆಂಬರ್ ೧ರಂದು ಹೊಸತಾಗಿ ಕರ್ನಾಟಕ ರಾಜ್ಯವು ಅಸ್ತಿತ್ವಕ್ಕೆ ಬಂದಿತು. ೧೯೫೮ರಲ್ಲಿ ಮೈಸೂರು ಸರ್ಕಾರ ನೇಮಿಸಿದ್ದ ಹಿಂದುಳಿದ ವರ್ಗಗಳ ಏಕರೀತಿಯ ಪಟ್ಟಿಯನ್ನು ಮೈಸೂರಿನ ಉಚ್ಚ ನ್ಯಾಯಾಲಯವು ತಳ್ಳಿಹಾಕಿತು.

ಜಾತಿ ಮತ್ತು ಸಮುದಾಯಗಳನ್ನು ಗಣನೆಗೆ ತೆಗೆದುಕೊಳ್ಳಬಾರದು ಎಂದು ಮುಖ್ಯಮಂತ್ರಿ ನಿಜಲಿಂಗಪ್ಪನವರು ೧೯೬೩ ಅಕ್ಟೋಬರ್ ೩೧ರಂದು ಮಂಗಳೂರಿನಲ್ಲಿ ಬಹಿರಂಗವಾಗಿ ಘೋಷಿಸಿದರು. ಇದರಿಂದಾಗಿ ಉಚ್ಚ ನ್ಯಾಯಾಲಯದ ನಿರ್ದೇಶನವನ್ನು ಗೌರವಿಸಿದಂತಾಗಲಿಲ್ಲ

**ಆರ್. ರವೀಂದ್ರ ನಾಯಕ್**

ಎಲ್. ಜಿ. ಹಾವನೂರು ತಮ್ಮ ವರದಿಯಲ್ಲಿ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ಮಾಹಿತಿ, ಅಂಕಿ-ಅಂಶ, ಧ್ಯೇಯ-ಧೋರಣೆಗಳು ಅವರ ನರನಾಡಿಗಳಲ್ಲಿ ತುಂಬಿ ತುಳುಕಿದವು ಎಂದು ಹೇಳಿಕೊಂಡಿದ್ದಾರೆ. ಇವರನ್ನು ಹಿಂದುಳಿದ ವರ್ಗಗಳು ಸ್ಮರಿಸಬೇಕು. ಏಕೆಂದರೆ, ರಾಜ್ಯಾಂಗದ ೧೫(೪) ಮತ್ತು ೧೬(೪) ಅನುಚ್ಛೇದಗಳ ಮೇರೆಗೆ ಪ್ರಭಾವಿ ವರ್ಗಗಳ ಪಟ್ಟಿ ಅಡಿಯಲ್ಲಿ ಹಿಂದುಳಿದ ಸಮುದಾಯಗಳ ಗುಂಪಿಗೆ ೧೬ ಜಾತಿಗಳನ್ನೂ, ಹಿಂದುಳಿದ ಜಾತಿ ಪಟ್ಟಿಗೆ ೧೨೯ ಜಾತಿಗಳನ್ನೂ, ಹಾಗೂ ಹಿಂದುಳಿದ ಬುಡಕಟ್ಟು ಜನರ ಪಟ್ಟಿಗೆ ೬೨ ಜಾತಿಗಳನ್ನೂ ಸೇರಿಸಿದ್ದರಿಂದ ಇಂದು ಹಿಂದುಳಿದ ವರ್ಗಗಳು ಶೈಕ್ಷಣಿಕ, ಉದ್ಯೋಗ ಕ್ಷೇತ್ರದಲ್ಲಿ ತಲೆ ಎತ್ತಿ ನಿಲ್ಲುವಂತಾಗಿದೆ.

೧೯೬೯ರಲ್ಲಿ ಕಾಂಗ್ರೆಸ್ ಪಕ್ಷದಲ್ಲಿ ಒಡಕುಂಟಾಯಿತು. ರಾಷ್ಟ್ರಾಧ್ಯಕ್ಷರಾಗಿ ಚುನಾಯಿತರಾದ ವಿ. ವಿ. ಗಿರಿಯವರು ರಾಜಮಹಾರಾಜರುಗಳನ್ನು ಅಮಾನ್ಯಮಾಡಿ ಅವರ ವಿಶೇಷ ಅಧಿಕಾರವನ್ನು ರದ್ದುಗೊಳಿಸಿದ ಮೇಲೆ ಬೆಂಗಳೂರಿಗೆ ೧೯೭೦ ಸೆಪ್ಟೆಂಬರ್ ೧೩ರಂದು ಭೇಟಿಕೊಟ್ಟರು. ಆಗ್ಗ ಎನ್. ರಾಚಯ್ಯ, ಹಾವನೂರು, ರಂಗನಾಥ್, ಜಯಪ್ರಕಾಶ್ ನಾರಾಯಣ್, ಸಚ್ಚೇಂದ್ರನಾಥ್, ಶಿವೋತ್ತಮರಾವ್, ಮರಿಯಪ್ಪ, ಹನುಮಂತಯ್ಯ, ಸಿದ್ಧಪ್ಪ ಇವರು ಒಟ್ಟಾಗಿ ಗಿರಿ ಅವರಿಗೆ ಒಂದು ಮನವಿ ಪತ್ರ ಅರ್ಪಿಸಿ ಜಾತಿಗಳನ್ನು ಅಮಾನ್ಯ ಮಾಡಬೇಕೆಂದೂ, ಇಲ್ಲವೇ ಕಾಲೇಲ್ಕರ್ ಶಿಫಾರಸ್ಸುಗಳನ್ನೇ ಜಾರಿಗೆ ತರಬೇಕೆಂದೂ, ಇಲ್ಲವೇ ಹಿಂದುಳಿದ ವರ್ಗಗಳ ಆಯೋಗ ನೇಮಿಸಬೇಕೆಂದೂ ವಿಜ್ಞಾಪಿಸಿಕೊಂಡರು.

೧೯೭೦, ನವೆಂಬರ್ ೮ರಂದು ಎಲ್. ಜಿ. ಹಾವನೂರು ಅವರು ಅನುಸೂಚಿತ ಜಾತಿ, ಪಂಗಡಗಳು ಮತ್ತು ಹಿಂದುಳಿದ ವರ್ಗಗಳ ಒಂದು ಸಮ್ಮೇಳನ ಕರೆದರು. ಎನ್. ರಾಚಯ್ಯ, ಗೋವಿಂದ ರೆಡ್ಡಿ, ಮಲ್ಲಿಕಾರ್ಜುನ ಸ್ವಾಮಿ, ಬಸವಲಿಂಗಪ್ಪ, ರಂಗನಾಥ್, ಜಯಪ್ರಕಾಶ್ ನಾರಾಯಣ್, ಪಾರ್ಥಸಾರಥಿ, ಮರಿಯಪ್ಪ, ವೆಂಕಟಸ್ವಾಮಿ, ಶಿವೋತ್ತಮ ರಾವ್, ಕಲ್ಲಣ್ಣನವರ್ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಅಂದಿನ ಮೈಸೂರಿನ ಮುಖ್ಯಮಂತ್ರಿಗಳಾಗಿದ್ದ ವೀರೇಂದ್ರ ಪಾಟೀಲರು ಈ ವಿಷಯದ ಬಗ್ಗೆ ಮಾತನಾಡುತ್ತಾ ೧೯೭೦ ನವೆಂಬರ್ ೧೦ರಂದು ಅಣ್ಣಿಗೇರಿಯಲ್ಲಿ ಐಎಎಸ್, ಮತ್ತು ಐಪಿಎಸ್ ದರ್ಜೆಗಳಲ್ಲಿ ಅನುಸೂಚಿತ ಜಾತಿ, ಪಂಗಡಗಳಿಗೆ ಸ್ಥಾನಗಳನ್ನು ಮೀಸಲಿಡುವ ಪದ್ಧತಿಯನ್ನು ರದ್ದುಗೊಳಿಸಬೇಕೆಂದರು. ೧೯೭೨ ಜುಲೈನಲ್ಲಿ ಮುಖ್ಯಮಂತ್ರಿ ಡಿ. ದೇವರಾಜ ಅರಸ್ ಆಯೋಗವೊಂದನ್ನು ನೇಮಿಸುವ ತಮ್ಮ ನಿರ್ಧಾರವನ್ನು ವಿಧಾನ ಸಭೆಯಲ್ಲಿ ಪ್ರಕಟಿಸಿದರು. ವಿರೋಧಪಕ್ಷದ ನಾಯಕರುಗಳಾದ ದೇವೇಗೌಡ, ಕಾಗೋಡು ತಿಮ್ಮಪ್ಪ, ಬಂಗಾರಪ್ಪ, ಕೋಣಂದೂರು ಲಿಂಗಪ್ಪ ಮತ್ತು ಇತರ ಶಾಸಕರು ಆ ನಿರ್ಧಾರವನ್ನು ಸ್ವಾಗತಿಸಿದರು. ೧೯೭೨, ಜುಲೈ ೧೮ರಂದು ಮುಖ್ಯಮಂತ್ರಿ ಡಿ. ದೇವರಾಜ ಅರಸು ವಿಧಾನಸಭೆಯಲ್ಲಿ ಆಯೋಗವನ್ನು ನೇಮಕ ಮಾಡಿರುವುದಾಗಿ ತಿಳಿಸಿ ಅದರ ಸದಸ್ಯರ ವಿವರಗಳನ್ನು ಕೊಟ್ಟರು. ಹಿಂದುಳಿದ ವರ್ಗಗಳ ಉದ್ಧಾರದ ವಿಷಯದಲ್ಲಿ ಎಲ್ಲಾ ಜಾತಿಗಳ, ಸಮುದಾಯಗಳ ಮತ್ತು ಎಲ್ಲಾ ರಾಜಕೀಯ ಪಕ್ಷಗಳ ರಾಜಕಾರಣಿಗಳು ಹೇಗೆ ಅಶಕ್ತರಾಗಿದ್ದರು ಎಂಬುದನ್ನು ದುರ್ಬಲ ವರ್ಗಗಳ ಬಗ್ಗೆ ಮುಖ್ಯಮಂತ್ರಿ ದೇವರಾಜ ಅರಸು ಅವರಿಗಿದ್ದ ಗಾಢ ಆಸಕ್ತಿಯನ್ನು ಈ ಮೇಲಿನ ಸಂಕ್ಷಿಪ್ತ ವರದಿಯ ಮುಖ್ಯಾಂಶಗಳು ತೋರಿಸುತ್ತವೆ. ದೇವರಾಜ ಅರಸು ಅವರು ಇಲ್ಲದಿದ್ದರೆ ಈಗಿನ ಆಯೋಗವು ಅಸ್ತಿತ್ವಕ್ಕೆ ಬರುತ್ತಿರಲಿಲ್ಲ ಎನ್ನಬಹುದು.

ಎಲ್. ಜಿ. ಹಾವನೂರು ತಮ್ಮ ವರದಿಯಲ್ಲಿ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ಮಾಹಿತಿ, ಅಂಕಿ-ಅಂಶ, ಧ್ಯೇಯ-ಧೋರಣೆಗಳು ಅವರ ನರನಾಡಿಗಳಲ್ಲಿ ತುಂಬಿ ತುಳುಕಿದವು ಎಂದು ಹೇಳಿಕೊಂಡಿದ್ದಾರೆ. ಇವರನ್ನು ಹಿಂದುಳಿದ ವರ್ಗಗಳು ಸ್ಮರಿಸಬೇಕು. ಏಕೆಂದರೆ, ರಾಜ್ಯಾಂಗದ ೧೫(೪) ಮತ್ತು ೧೬(೪) ಅನುಚ್ಛೇದಗಳ ಮೇರೆಗೆ ಪ್ರಭಾವಿ ವರ್ಗಗಳ ಪಟ್ಟಿ ಅಡಿಯಲ್ಲಿ ಹಿಂದುಳಿದ ಸಮುದಾಯಗಳ ಗುಂಪಿಗೆ ೧೬ ಜಾತಿಗಳನ್ನು, ಹಿಂದುಳಿದ ಜಾತಿ ಪಟ್ಟಿಗೆ ೧೨೯ ಜಾತಿಗಳನ್ನು ಹಾಗೂ ಹಿಂದುಳಿದ ಬುಡಕಟ್ಟು ಜನರ ಪಟ್ಟಿಗೆ ೬೨ ಜಾತಿಗಳನ್ನು ಸೇರಿಸಿದ್ದರಿಂದ ಇಂದು ಹಿಂದುಳಿದ ವರ್ಗಗಳು ಶೈಕ್ಷಣಿಕ, ಉದ್ಯೋಗ ಕ್ಷೇತ್ರದಲ್ಲಿ ತಲೆ ಎತ್ತಿ ನಿಲ್ಲುವಂತಾಗಿದೆ.


**ಆರ್. ರವೀಂದ್ರ ನಾಯಕ್**

ವಕೀಲರು, ಆಫೀಸ್ : 'ಕೃಷ್ಣಾ', ೯ನೇ ಅಡ್ಡರಸ್ತೆ, ಎಸ್. ಎಸ್. ಪುರಂ, ತುಮಕೂರು - ೫೭೨ ೧೦೨




# ಬ.ಕ.

**(ಕಾದಂಬರಿಕಾರ ಬಸವರಾಜ ಕಟ್ಟೀಮನಿಯವರ ಕುರಿತು)**

- ೧ -

**ನೋ**ವಿನ ಯಂತ್ರದಲಿ
ಕನಸುಗಳ ಮಳೆಗಳ ಜೋಡಣೆ
ಸದಾ ಸಪ್ಪಳದ ಮುದ್ರಣದ ಬದುಕು.
ಈ ಒಡಲ ಹಾಳೆಯ ಮೇಲೆ
ಅಚ್ಚಾಗಿದ್ದೆಲ್ಲ ಹಸಿದ ಮೌನ.

ಮೊದಲೆಲ್ಲ ಕಣ್ಣೀರೆ ಅನ್ನ
ನೋವೇ ನೆಮ್ಮದಿ
ಆ ಸಂಕಟಗಳ ಗಡಿದಾಟಿ
ದುಡಿವ ಕೈಗಳಸಂಖ್ಯ ಕನಸುಗಳಲಿ
ಸಮತೆಯ ಹಾಡ ನುಡಿಸಿ
ಬಯಲುನಾಡಿನಲ್ಲಿ ಕ್ರಾಂತಿಯ
ಕವಾಯತ್ತು ನಡೆಸಿದ ಬ. ಕ.
ಅತ್ತ ಶಿವದಾರ –
ಇತ್ತ ಜನಿವಾರಗಳಿಗೆ
ಬಾಗದ ಗಟ್ಟಿಬೀಜ.

ಉಳ್ಳವರ ಕತ್ತಲೆದೆಯಲ್ಲಿ
ಶಬ್ದಗಳ ಬೆಂಕಿಬೀಜವ ಬಿತ್ತಿ
ಗೋಸುಂಬೆಗಳ ಕಣ್ಣ ಹಬ್ಬದಲಿ
ಮಾತುಗಳ ಜ್ವಾಲಾಮುಖಿಯ ಮೇಲೆ
ಪಡೆದದ್ದೆಲ್ಲ ರಣಜೀವನ.

ಎದೆಯೊಳಗೆ ಖಾನಾವಳಿ ನೀಲಾಳ
ಗೆಜ್ಜೆ ಸಪ್ಪಳ
ಮೋಹಕ್ಕೆ ಮುಗಿಬೀಳದೆ
ಬದುಕೇ ಒಂದು ಸಿನೇಮಾ
ಅದನ್ನೇ ನೋಡೋಣ ಬಾ ಗಿರಿಜಾ
ಎಂದ ಜರತಾರಿಗೆ ಈ ಬದುಕೂ
ಒಂದು ರಂಜನೆ.

ಮಲಾ ಮರಡಿ ಸೀಮೆಯ ಸಸ್ಯರಾಶಿಗೆಲ್ಲ
ಮಾಡಿ ಮಡಿದವರ ಮಣ್ಣ ಸುರಿದು
ನಿಂತಲ್ಲಿ ನಿಲ್ಲದೇ ಸದಾ ಅಲೆದ
ಈ ಅಲೆಮಾರಿಯ ಕಪ್ಪು ಕನ್ನಡಕಕ್ಕೆ
ಮೊನ್ನೆ ಮೊನ್ನೆಯಷ್ಟೇ ವಿಶ್ರಾಂತಿ.

- ೨ -

ಬ. ಕ.
ನನ್ನ ಬದುಕಿನ ಹೂಬಿಸಿಲಿನ
ಅಕ್ಷರಲೋಕದ ಬೆಳಕು
ಎದೆಯ ಕನಸಿನ
ಹೊಸ ಪ್ರಜ್ಞೆಯ ಬೀಜ.
ನನ್ನ ಎಳೆಯ ಹೆಗಲುಗಳಲ್ಲಿ
ವಿಶ್ವಾಸ ತುಂಬಿದ ಗೆಳೆಯ,
ಕೆಂಬಾವುಟದ ಹುಚ್ಚು
ಹಿಡಿಸಿದ ಗಾರುಡಿಗ,
ನನ್ನ ಮನದಂಗಳದ
ಮಾಸದ ಚಿತ್ತಾರ
ಈಗಲೂ ಬೀದಿಯಲ್ಲಿ,
ಕೆಂಪು ಘೋಷಣೆಗಳು
ಅಬ್ಬರ ಮಾಡುವಾಗ
ಈ ಕಪ್ಪು ಕನ್ನಡಕದ ಕಣ್ಣು
ನಸು ನಕ್ಕಂತೆ ಭಾಸ ನನಗೆ... !


**ಬಸವರಾಜ ಸೂಳಿಭಾವಿ**

೪೨, ಪ್ರಸಾದ ಲಾಜ್, ಗದಗ

# ಧರೆಗೆ ದೊಡ್ಡವರು

## ಚರಿತ್ರೆಯ ವಿಭಿನ್ನ ಅಧ್ಯಯನ

ಇಪ್ಪತ್ತನೇ ಶತಮಾನವು ಹಲವಾರು ಪ್ರಕಾರಗಳಿಂದ, ಹಲವಾರು ತಾತ್ವಿಕ ಸಂಗತಿಗಳಿಂದ ಚರಿತ್ರೆಯ ಮೂಲ ಬೇರುಗಳನ್ನು ಶೋಧಿಸುವಲ್ಲಿ ಯಶಸ್ವಿಯಾಗಿದೆ. ಪ್ರಾದೇಶಿಕ ಚರಿತ್ರೆ, ಜನಾಂಗೀಯ ಚರಿತ್ರೆ, ಸಂಸ್ಕೃತಿ ಚರಿತ್ರೆ, ಮೌಖಿಕ ಚರಿತ್ರೆ ಎಂಬ ಹೊಸ ಹೊಸ ರೂಪಗಳಲ್ಲಿ ಕಾಣುತ್ತಿರುವ ಶೋಧನೆಗಳು ಹಳೆಯ ಚರಿತ್ರೆಯನ್ನು ಛಿದ್ರಗೊಳಿಸುವಲ್ಲಿ, ಏಕಮುಖಿ ಭಾವವನ್ನು ಬಯಲುಗೊಳಿಸಿ ಬಹುಮುಖೀ ಭಾವವನ್ನು ತರುವಲ್ಲಿ ಸಹಕಾರಿಯಾಗಿವೆ.

ಜನಾಂಗದ ಮೂಲಕ ನೋಡುವುದಾದಲ್ಲಿ ಭಾರತೀಯ ಸಂಸ್ಕೃತಿಯ ಬಹುಭಾಗವು ಇನ್ನೂ ಬರವಣಿಗೆಯಾಗಿ ಬಂದಿಲ್ಲ. ಅದಿನ್ನೂ ಜೀವಂತ ಸಮುದಾಯದೊಳಗೇ ಅಳಿಯುತ್ತಾ-ಉಳಿಯುತ್ತಾ ಮುಟ್ಟಿದವರ ಮನದೊಳಗೆ ಮನೆ ಮಾಡಿಕೊಳ್ಳುತ್ತಾ ಹೊರಟಿದೆ. ಜನಸಮುದಾಯದೊಳಗಿನ ಹಾಡು, ಕಥೆ, ಆಚರಣೆ, ಕಲೆ, ಮಾಟ, ಮದ್ದುಗಳೆಲ್ಲಾ ಇನ್ನೂ ಎಷ್ಟೋ ಕಡೆ ಅಲಿಖಿತ ಅಲೆಯೊಳಗೇ ಹರಿಯುತ್ತಲಿವೆ. ಹೊಸ ಬಗೆಯ ಚರಿತ್ರೆಗಳು ಅಂತಹ ಅಲೆಗಳನ್ನ ಹಿಡಿದು ಕಟ್ಟಿದ್ದರಿಂದಲೇ ನಮಗಿಂದು ಭಾರತದಲ್ಲಿ ಒಂದು ಚರಿತ್ರೆ ಇಲ್ಲ, ಅನೇಕ ಚರಿತ್ರೆಗಳಿವೆ ಅನ್ನಿಸುವುದು; ಒಂದೇ ಭಾವ ಎನ್ನುವುದರ ಒಡಲೊಳಗೆ ಅನೇಕ ಭಾವಗಳಿರುವ ಸೂಕ್ಷ್ಮ ಎಳೆಗಳು ಕಾಣುತ್ತಿರುವುದು.

ಪ್ರಸ್ತುತ ಡಾ|| ಸುಭಾಷ್ ಭರಣಿಯವರ 'ಧರೆಗೆ ದೊಡ್ಡವರು' ಕೃತಿ ಹತ್ತು ಹಲವು ಸೂಕ್ಷ್ಮ ಎಳೆಗಳನ್ನು ತಾಳ್ಮೆಯಿಂದಲೇ ನಿರ್ಮಿಸಿಕೊಂಡಿದೆ. ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಿ.ಲಿಟ್. ಪದವಿಗಾಗಿ ಸಲ್ಲಿಸಿರುವ ಈ ಕೃತಿ ಮೈಸೂರು ಜಿಲ್ಲೆಯ ಆದಿಕರ್ನಾಟಕ ಜನವರ್ಗಕ್ಕೆ ಸೇರಿದ್ದು. ಚಲವಾದಿಗಳು, ಬಲಗೈಯವರು, ಹೊಲೆಯರು, ಬ್ಯಾಗ್ಯಾರು, ಮದ್ಲೇರು ಎಂದೆಲ್ಲಾ ಕರೆಸಿಕೊಳ್ಳುವ ಈ ಜನಾಂಗ ಹಿಂದಿನಿಂದಲೂ ಸೈನಿಕರಾಗಿ, ಮಂಗಳ ಕಾರ್ಯಗಳಲ್ಲಿ ಶಹನಾಯ್, ಕಣಿ, ಡುಮುಕಿ, ಸಮಾಳ, ಬುರುಗು ಹಿಡಿಯುವವರಾಗಿ, ರಣಕಹಳೆ ಊದುವವರಾಗಿ, ಮದ್ದಳೆ ಬಾರಿಸುವವರಾಗಿ, ಶಂಖ, ಜಾಗಟೆ ಹಿಡಿದ ದಾಸಯ್ಯ, ಜೋಗಮ್ಮರಾಗಿ, ಬ್ಯಾಂಡ್ ಬಾರಿಸುವವರಾಗಿ ನಾಡಿನಾದ್ಯಂತ ಹರಡಿಕೊಂಡಿದ್ದಾರೆ. ವಚನಕಾರ ಅಲ್ಲಮನಿಂದ ಹಿಡಿದು ತತ್ವಪದಕಾರ ಚಲವಾದಿ ಚಂದಪ್ಪನ ತನಕ ಸಾಹಿತ್ಯದೊಳಗೂ ಕಾಣಿಸಿಕೊಂಡ ಈ ಜನಾಂಗ ಹತ್ತು ಹಲವು ಸಾಧನೆಗಳಿದ್ದರೂ ಅಲಕ್ಷಿತವಾಗೇ ಉಳಿದುಕೊಂಡಿದೆ. ಹಾಗಾಗಿ ಈ ಜನಾಂಗದ ಒಂದು ಎಳೆ ಎನ್ನಬಹುದಾದ ಈ ಅಲಕ್ಷಿತ ಚರಿತ್ರೆಯನ್ನು ಶೋಧಿಸ ಹೊರಟ ಲೇಖಕರಿಗೆ ಇದು ಹೆಮ್ಮೆ ಪಡುವಂತಹದ್ದಾಗಿದೆ. ''ನನ್ನ ಜನರ ಬಗ್ಗೆ ಮಾತನಾಡುವುದೆಂದರೆ ಅದೆಂತಹ ನೋವಿನ ಅನುಭವವೆಂಬುದನ್ನು ನಾನು ವಿವರಿಸಬೇಕಿಲ್ಲ. ಆದರೂ ಅವರ ಎಂದೂ ಬತ್ತದ ಜೀವದ ಒರತೆಯನ್ನ ಕಂಡಾಗ, ಹಸಿವು-ಅವಮಾನಗಳ ನಂಜು ನುಂಗಿಯೂ ನಗುವ ಅವರ ಆತ್ಮವಿಶ್ವಾಸವನ್ನು ಕಂಡಾಗ ನನ್ನೊಳಗೇ ನಾನೇ ಹೆಮ್ಮೆ ಪಟ್ಟಿದ್ದೇನೆ. ಕೋಟ್ಯಂತರ ಜೀವ ಸೆಲೆಗಳಂತೆ, ಶತ ಶತಮಾನಗಳ ಕಾಲ ಅವರು ತುತ್ತಿನ್ನ ಬದುಕನ್ನರಸುತ್ತ ತಗ್ಗು ತಿರುವುಗಳಲ್ಲಿ ಹರಿಯುತ್ತಲೇ ಬಂದಿರುವ ಸೋಜಿಗವನ್ನು ಕಂಡು ಅಭಿಮಾನದ ಹುಚ್ಚು ಹೊಳೆ ನನ್ನೊಳಗೆ ತುಳುಕಾಡಿದೆ. ಶಾಂತಿ, ಸಹನೆಗಳ ಬಹುದೊಡ್ಡ ಸಂದೇಶವನ್ನವರು ಈ ಜಗತ್ತಿಗೆ ಬಳುವಳಿಯಾಗಿ ನೀಡಿದ್ದಾರೆ. ಅಂತಹ ನನ್ನ ಪೂರ್ವಿಕರಿಗೆ ನಮಸ್ಕಾರ.''

'ಧರೆಗೆ ದೊಡ್ಡವರು' ಎಂಬ ಭರಣಿಯವರ ಮಾತು ಹೊಲೆಯರಿಗೆ ಅನ್ವಯಿಸಿದರೂ ಪುಸ್ತಕ ಓದುತ್ತ ಹೊರಟಂತೆ ನಮಗೆ ಈ ಪದ ಸಾಂಕೇತಿಕವಾಗಿ ಈ ಜನಾಂಗದ ಶ್ರೇಯಸ್ಸಿಗಾಗಿ ದುಡಿದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ, ಹೈದರಾಲಿ, ಟಿಪ್ಪು ಸುಲ್ತಾನರಿಗೆ, ಧೀಮಂತ ನಾಯಕ ದೇವರಾಜ ಅರಸು ಅವರಿಗೂ ಅನ್ವಯಿಸಬಹುದೆನಿಸುತ್ತದೆ.

ದೇವಿಪ್ರಸಾದ ಚಟ್ಟೋಪಾಧ್ಯಾಯ, ಡಿ. ಡಿ. ಕೊಸಾಂಬಿ, ರೋಮಿಲಾ ಥಾಪರ್, ಎಸ್. ಎಸ್. ಹಿರೇಮಠರ ಚಿಂತನಾ ಕ್ರಮದಲ್ಲೇ ಹೊರಟ ಭರಣಿಯವರು ಈ ನೆಲದ ಮೂಲ ನಿವಾಸಿಗಳು ಹೊಲೆಯರೆಂದೇ ಹೇಳುತ್ತಾರೆ. ಹೊಲದೊಂದಿಗಿನ ಸಂಬಂಧವುಳ್ಳ ಈ ಕೃಷಿ ಸಂಬಂಧಿ ಬುಡಕಟ್ಟು ಜನಾಂಗವೇ ಮೊದಲು ನಗರ ನಿರ್ಮಿಸುವ, ನೆಲೆ ನಿಂತು ಬೇಸಾಯ ಮಾಡಿದವರೆನ್ನುತ್ತಾರೆ. ಇದಕ್ಕೆ ಪೂರಕವೆಂಬಂತೆ ಅವರು ದಕ್ಷಿಣದ ದಖಿನ್ ಪ್ರದೇಶದ ದ್ರಾವಿಡ ಬುಡಕಟ್ಟುಗಳ ನೆಲೆಯನ್ನು ಮಾನವಶಾಸ್ತ್ರೀಯ, ಸಮಾಜಶಾಸ್ತ್ರೀಯ ಜಾನಪದೀಯ ರಾಜಕೀಯ ಮತ್ತು ಆರ್ಥಿಕ ದೃಷ್ಟಿಕೋನಗಳಿಂದ ವಿವರಿಸುತ್ತಾರೆ.

**ಹೊಲೆಯರು - ಹೊಲದೊಡೆಯರು**

ಭರಣಿಯವರು ಥರ್‌ಸ್ಟನ್ ಸೂಚಿಸಿರುವ ನಿಷ್ಪತ್ತಿ ಹೊಲ-ಭೂಮಿ-ಮಣ್ಣು ಎಂಬ ಆಧಾರದಿಂದ ಮತ್ತು ಹಿರೇಮಠರು 'ದಲಿತ ಸಂಸ್ಕೃತಿ' ಎಂಬ ಪುಸ್ತಕದಲ್ಲಿ ಸೂಚಿಸಿರುವ ಹೊಲೆಯ – ಪೊಲಿ(ಲೆ) + ಅ = ಪೊಲಿ(ಲೆ)ಯ ಇದು ವೈದಿಕರ ವೇದಗಳಲ್ಲಿ ಬರುವ ಋತ ಕಲ್ಪನೆಯನ್ನು ಹೋಲುವ ದ್ರಾವಿಡ ಸಂಸ್ಕೃತಿಯ ಅದ್ಭುತ ಪದ 'ಪೊಲಿ' ಸಮೃದ್ಧಿಯನ್ನುಂಟುಮಾಡು (ಹುಲುಸು) ಎಂಬ ಆಧಾರ ನೀಡುತ್ತಾ ಮೊಟ್ಟಮೊದಲು ಬೇಸಾಯವನ್ನು ಆರಂಭಿಸಿದವರು ಹೊಲೆಯ ಮತ್ತು ಮಾದಿಗ ಮಹಿಳೆಯರು ಎನ್ನುತ್ತಾರೆ. ಕುರುಬರು, ಗೊಲ್ಲರು, ಬೇಡರು, ಕೊರಚರು, ಗೌಡರು ಮೊದಲಾದವರು ಪಶುಪಾಲಕ ಕುಲದ ಹಟ್ಟಿ ಸಂಸ್ಕೃತಿಯವರಾದರೆ ಹೊಲೆ ಮಾದಿಗರು ಹಳ್ಳಿ ಸಂಸ್ಕೃತಿ ಸೃಷ್ಟಿಸಿದವರು ಎನ್ನುತ್ತಾರೆ. ಹಾಗೇ ಈ ಕುಲಸಂಬಂಧೀ ಆಚಾರದ ಕೊಳು ಕೊಡೆಯ 'ಬೆಡಗು' ಎಂಬ ವಿವರಗಳಲ್ಲಿ ಬಹುತೇಕ ನಿಸರ್ಗಕ್ಕೆ ಹತ್ತಿರವಾದ ರೂಪಕಗಳಂತಿವೆ. ಉದಾಹರಣೆಗೆ, ಭೂಮಿಕುಲ.

ತಂತ್ರ ಪಂಥದ ಹೊಲೆ ಮಾದಿಗರನ್ನ ಎಡಗೈ, ಬಲಗೈ ವಿಂಗಡಣೆಗಳಿಂದೂ ಎಡಗೈನವರು ಮಾಟ, ಮಂತ್ರ, ಬಲಿ, ರಕ್ತ ನೈವೇದ್ಯ, ಮೈಥುನದಂತಹ ತೀವ್ರೋತ್ಕರ್ಷದ ಆಚರಣೆಗಳಿಂದ ಗುರುತಿಸಿಕೊಂಡರೆ, ಬಲಗೈಯವರು ಸೌಮ್ಯರೂಪದ ಆರಾಧನೆ, ಪೂಜೆ, ಗಾರುಡಿ, ಯಕ್ಷಿಣಿ, ಮೋಡಿಗಳಿಂದ ಗುರ್ತಿಸಿಕೊಂಡಿದ್ದಾರೆ. ''ಬಹುಶಃ ಶ್ರೇಷ್ಠ ಕನಿಷ್ಠಗಳು ಇಲ್ಲಿಂದಲೇ ಹುಟ್ಟಿರಬಹುದು'' ಎನ್ನುತ್ತಾರೆ.

**ಹೊಲೆಯರು - ಯೋಧರು**

ಬುಕನಾನ್ ಅವರ 'ಜರ್ನಿ ಥ್ರೂ ಮೈಸೂರು ಕೆನರಾ ಮಲಬಾರ್ (Journey through Mysore Canara Malabar)' ಕೃತಿ ಆಧರಿಸಿ ದಕ್ಷಿಣ ಕನ್ನಡದ ಆದಿಕರ್ನಾಟಕ ಜನವರ್ಗ ಹಿಂದೆಂದೋ ಯೋಧ ಕುಲವಾಗಿತ್ತೆಂಬ ಮಾತನ್ನು ಹೇಳಿ 'ರಣಾರ್' ಎಂಬ ಹೆಸರಿನ ದೊರೆಗಳಾಗಿದ್ದರೆಂಬ ಸೂಚನೆಯನ್ನೂ ನೀಡಿದ್ದಾರೆ. ಹಾಗೆ ''ಬಾಬಾ ಸಾಹೇಬ್ ಅಂಬೇಡ್ಕರ್ ಕೂಡ ಅಸ್ಪೃಶ್ಯ ಕುಲಗಳು ಯೋಧಕುಲಗಳಾಗಿದ್ದು ಸೋತದ್ದರಿಂದ ಗೆದ್ದ ಆಕ್ರಮಣಕಾರರ ತೊತ್ತುಗಳಾಗಿಯೋ ಮುಂದುವರಿದು ತದನಂತರದಲ್ಲೆಂದೋ ಬಹಿಷ್ಕೃತರಾಗಿ ಊರ ಹೊರಗೆ ಬದುಕಬೇಕಾಗಿಬಂತೆಂದು ಅಭಿಪ್ರಾಯಪಡುತ್ತಾರೆ.'' ಈ ವಿವರಗಳಿಂದ ಭರಣಿಯವರು ಮುಂದುವರಿದು ದಲಿತ ಪುರಾಣಗಳಲ್ಲಿ ಅವರ ಕಥನ ಮತ್ತು ಪದಗಳಲ್ಲಿ ಪ್ರಸ್ತಾಪವಾಗಿರುವ ಯುದ್ಧ ಸಂಬಂಧೀ ಮಾಹಿತಿಗಳು, ವಿಚಾರಗಳನ್ನ ನಿರುಕಿಸಿ ನೋಡುತ್ತ ದಲಿತರಿಗೂ ಯುದ್ಧಕ್ಕೂ ಅತೀ ಹತ್ತಿರದ ನಂಟನ್ನ ತೋರುತ್ತಾರೆ.

**ವಂಚನೆ-ವಾತ್ಸಲ್ಯಗಳ ನಡುವೆ ಹೊಲೆಯರು**

ಪರಂಪರಾಗತ ಚರಿತ್ರೆಯಿಂದ ಅಸ್ಪೃಶ್ಯರಿಗೆ ಮತ್ತು ಅಲ್ಪಸಂಖ್ಯಾತರಿಗೆ ಆದ ಅನ್ಯಾಯ ಇಂದಿಗೂ ಮುಂದುವರಿಯುತ್ತಲಿದೆ ಎಂಬ ಅಂಶವನ್ನ ಒತ್ತಿ ಹೇಳುತ್ತ ಜೀತಪದ್ಧತಿ, ಮಲಹೊರುವ ಪದ್ಧತಿಗಳ ಜೊತೆಗೆ ಅಲ್ಪಸಂಖ್ಯಾತರನ್ನ, ದಲಿತರನ್ನ ಹಾಡುಹಗಲೇ ಕೊಲೆಗೈವ ಈ ಜನ ಗಾಂಧೀಜಿಯನ್ನ ಕೊಂದ ಗೋಡ್ಸೆ ಜಾತಿ ಸಮುದಾಯದ ಬಗ್ಗೆ ಯಾಕೆ ಅಂತಹ ಭಾವಾವೇಶ ಪ್ರಕಟಿಸುವುದಿಲ್ಲ? ಎಂದು ಇಂದಿರಾ ಗಾಂಧಿ ಕೊಲೆ ಹಿನ್ನೆಲೆಯ ಸಿಖ್ ಸಮುದಾಯದ ಹತ್ಯೆಯನ್ನು ನೆನಪಿಗೆ ತರುತ್ತಾರೆ. ಚರಿತ್ರೆ ಇಣುಕಿದರೆ ಹಿಂದೂ ಉನ್ನತ ವರ್ಗಗಳಿಂದ ವಂಚನೆಗಳು ಕಾಣುವ ಪ್ರಮಾಣದಷ್ಟು ವಾತ್ಸಲ್ಯ




ಶಿವಕುಮಾರ್ ಕಂಪ್ಲಿ

ಗಳಿಲ್ಲ, ಎಂದು ತೋರಲು ಆದಿಶಂಕರಾಚಾರ್ಯರು ದ್ರಾವಿಡ ಸಂಸ್ಕೃತಿಯ ಉಗ್ರಶಾಕ್ತೇಯ ಕಂಚಿಯ ಕಾಳಿಯನ್ನ ಕಾಮಾಕ್ಷಿಯಾಗಿಸಿ ಆರ್ಯಕರಣಕ್ಕೆ ಅಡಿಗಲು ಹಾಕಿದ್ದನ್ನ, ''ಪುರಿ ಜಗನ್ನಾಥ ದೇವಾಲಯಕ್ಕೆ ವರ್ಷದಲ್ಲಿ ಒಮ್ಮೆ ಮಾತ್ರ ಮೂರು ದಿನಗಳವರೆಗೂ ಪ್ರವೇಶ ಕಲ್ಪಿಸುವ ಹಿನ್ನೆಲೆ ನೋಡಿದಾಗ ಜಗನ್ನಾಥನ ಮೂಲ ವಿಗ್ರಹದ ಆದಿ ಪೂಜಕರೇ ಈ ಅಸ್ಪೃಶ್ಯ ಕುಲದವರೆಂಬ ಅಚ್ಚರಿಯ ಸಂಗತಿ ಬೆಳಕಿಗೆ ತರುತ್ತಾರೆ.''

ಇದೇ ಮಾದರಿಯ ಥರ್‌ಸ್ಟನ್ ವಿವರವನ್ನು ನೀಡುವ ಭರಣಿಯವರು ರಾಮಾನುಜಾಚಾರ್ಯರು ದಲಿತರನ್ನ ಬಳಸಿಕೊಂಡು ಮುಸ್ಲಿಂ ದೊರೆಯ ಮಗಳ ಆಟಿಕೆಯಾಗಿದ್ದ ವಿಗ್ರಹವನ್ನು ಹೊತ್ತು ತಂದ ಸಾಹಸಕ್ಕೆ ಮೆಚ್ಚಿ ಅವರಿಗೆ 'ತಿರುಕುಲಂ' (ಪವಿತ್ರಜನಾಂಗ) ಎಂದು ಬೆನ್ನು ತಟ್ಟಿದ್ದರಂತೆ. ಆದರೆ ಈ ಸಾಹಸಕ್ಕೆ ಬರಲೊಪ್ಪದ ಬ್ರಾಹ್ಮಣರಿಗೆ ದಿವಾನ್ ಪೂರ್ಣಯ್ಯನವರ ಕಾಲಕ್ಕೆ ಈ ಅಸ್ಪೃಶ್ಯ ಕುಲಕ್ಕೆ ಆ ಗುಡಿಯ ಧ್ವಜಸ್ತಂಭದವರೆಗೆ ಮಾತ್ರ ಪ್ರವೇಶವಿತ್ತೇ ವಿನಾ ಒಳಹೋಗುವುದು ನಿಷೇಧವಾಯ್ತು, ತರಲು ಬಾರದ ಬ್ರಾಹ್ಮಣರಿಗೆ ಪೂಜಿಸುವ ಹಕ್ಕು ಶಾಶ್ವತವಾಯ್ತು ಎನ್ನುತ್ತಾರೆ.

ಮುಸ್ಲಿಂ ದೊರೆಗಳೆಂದರೆ ರಕ್ತಪಿಪಾಸುಗಳು, ಕಂಟಕರು, ದರೋಡೆಕೋರರು ಎಂದು ಹೇಳುವ ಚರಿತ್ರೆಯ ಎಳೆಯೊಳಗೆ ಮುಸ್ಲಿಂ ದೊರೆಗಳೆಂದರೆ ವಾತ್ಸಲ್ಯಮಯಿಗಳು, ಮೌಢ್ಯ ವಿರೋಧಿಗಳು ಎಂದು ಬರೆಯಬೇಕಾದ ಅನಿವಾರ್ಯತೆಯನ್ನು ಟಿಪ್ಪು ಮತ್ತು ಹೈದರಾಲಿಯ ವಿವರಗಳಿಂದ ತರುತ್ತಾರೆ. ಕೋಮುವಾದೀ ದಳ್ಳುರಿಗಳು ಏಳುತ್ತಿರುವ ಈ ದಿನಗಳಲ್ಲಿ ಇಂತಹ ಶೋಧನೆಗಳು ಅತ್ಯಂತ ಅಮೂಲ್ಯವೆಂದೇ ನನ್ನ ಭಾವನೆ.

''ಟಿಪ್ಪು ಸುಲ್ತಾನ್ ಇಂದೂ ಸಹ ಮುಂದುವರೆದಿರುವ ಊಳಿಗಮಾನ್ಯ ಶೋಷಣೆ ಹಾಗೂ ಸಾಮ್ರಾಜ್ಯಶಾಹಿ ದಾಸ್ಯದ ವಿರುದ್ಧ ಹೋರಾಡಿದ ದೇಶಪ್ರೇಮಿಯಾಗಿ ಮನು ವಿರೋಧಿ ಪ್ರಜಾತಂತ್ರ ಮೌಲ್ಯವನ್ನು ಎತ್ತಿಹಿಡಿದ ಮೇಧಾವಿ.'' ಬುಕನಾನ್ ಗುರ್ತಿಸುವಂತೆ ಟಿಪ್ಪು ಪಾಳೆಗಾರರನ್ನು ನಾಶಮಾಡಿ ೨೦೦ ಶೂದ್ರ ರೈತಾಪಿ ಜನಕ್ಕೆ ಭೂಮಿ ಹಂಚಿದ್ದನ್ನು ಹಣಕಾಸಿನ ವಿಷಯವನ್ನ ಪ್ರಧಾನಗೊಳಿಸಿ ನೋಡಬಾರದೆಂದು ಯುವಕರಲ್ಲಿ ಸನ್ನಡತೆಯನ್ನ ಬೆಳೆಸಬೇಕೆಂದು ಮೀರ್‌ಸಾದಿಕ್‌ಗೆ ಬರೆದ ಪತ್ರದಲ್ಲಿ ಅದನ್ನ ಕಟ್ಟುನಿಟ್ಟಾಗಿ ಜಾರಿಗೆ ತರಲು ಮದ್ಯಪಾನ ಸಂಪೂರ್ಣ ನಿಷೇಧ ಮಾಡಿದನು. ನಾಡಿನಾದ್ಯಂತ ಈಚಲು ಮರಗಳನ್ನ ಕಡಿಸಲು ಆಜ್ಞೆ ಮಾಡಿದನು. ಹಾಗೇ ವೇಶ್ಯಾವೃತ್ತಿ ತೊಡೆದುಹಾಕಿದ್ದು, ಬಹುಪತ್ನಿತ್ವ ನಿಷೇಧ, ಮೇಲುಡುಗೆ ಧರಿಸದ ಹೆಣ್ಣುಮಕ್ಕಳ ಕಂದಾಚಾರ ಪದ್ಧತಿಯನ್ನ ರದ್ದುಪಡಿಸಿದ್ದು, ಟಿಪ್ಪು ಸೇನೆಯಲ್ಲಿ ಅರ್ಧಕ್ಕೂ ಹೆಚ್ಚು ಮಂದಿ ದಲಿತರಿದ್ದರು. ಸಿಪಾಯಿ ಸೂರಪ್ಪನೆಂಬ ದಲಿತ ದಂಡನಾಯಕನಿದ್ದ.

ಬ್ರಿಟಿಷರು ಭಾರತಕ್ಕೆ ಬಂದದ್ದು ಕೆಲವರಿಗೆ ವರವಾದರೆ ಮತ್ತೆ ಕೆಲವರಿಗೆ ಶಾಪವೆಂಬಂತಾಯ್ತು. ನೊಂದ ಕಡೆಗಣಿಸಲ್ಪಟ್ಟ-ಅಲಕ್ಷಿತ ದಲಿತ ಚರಿತ್ರೆಯೊಳಗೆ ಕೆಲ ಮುಸ್ಲಿಂ ದೊರೆಗಳಂತೆ ಬ್ರಿಟಿಷರೂ ವಾತ್ಸಲ್ಯ ನೀಡಿದವರೇ. ಬ್ರಿಟಿಷರಿಂದಾದ ಸುಧಾರಣೆಗಳನ್ನ ಭರಣಿಯವರ ಪುಸ್ತಕ ಕಟ್ಟಿಕೊಡುತ್ತದೆ.

* ದಲಿತರಿಗೆ ಸುಧಾರಿತ ಸೈನಿಕ ಹುದ್ದೆಗಳು ದೊರೆತಿದ್ದು
* ವೆಲ್ಲೆಸ್ಲಿ, ಕಾರ್ನವಾಲೀಸ್ ಕಾಲದಲ್ಲಿ ಪೊಲೀಸ್ ಹುದ್ದೆಗಳ ಅವಕಾಶ
* ೧೮೩೩ ರೂಲ್ ಆಫ್ ಲಾ ದಿಂದ ಈ ಜನಸಮೂಹಕ್ಕೆ ನ್ಯಾಯ ದೊರೆವಂತಾಯ್ತು.
* ಶಿಕ್ಷಣ, ವಿದ್ಯಾರ್ಥಿನಿಲಯ, ವಿದ್ಯಾರ್ಥಿವೇತನಗಳ ಜಾರಿ
* ಅಂಬೇಡ್ಕರ್ ಹೋರಾಟದ ಫಲದಿಂದ ೧೯೩೫ರ ಶಾಸಕಾಂಗ ಕಾಯಿದೆಯಿಂದ ಪ್ರಜಾಪ್ರತಿನಿಧಿ ಸದಸ್ಯರಾಗಲು ಅನುವು ಮಾಡಿಕೊಡಲಾಯ್ತು.

**ಮರೆಯಲಾಗದ ಮೈಸೂರು ಒಡೆಯರು**

ದಲಿತರ ಪಾಲಿನ 'ರಾಜರ್ಷಿ' ಎಂಬ ಬಿರುದಾಂಕಿತ ನಾಲ್ವಡಿ ಕೃಷ್ಣದೇವರಾಜ ಒಡೆಯರ ಆಳ್ವಿಕೆಯ ಕಾಲ ಮೈಸೂರನ್ನ 'ಒಂದು ಮಾದರಿ ಸಂಸ್ಥಾನ' ಎಂಬ ಹೆಗ್ಗಳಿಕೆಗೆ ಪಾತ್ರವಾಗಿಸಿತು. ಅದೊಂದು ನಿರಂತರ ಪರಿವರ್ತನೆಯ ಕಾಲ. ಅವರ ನಿರ್ಧಾರಗಳಿಂದ ಅನೇಕ ಶೂದ್ರ ಜನಾಂಗಗಳು ದಲಿತವರ್ಗಗಳು ಚೈತನ್ಯ ಪಡಕೊಂಡವು. ಕರ್ನಾಟಕವಲ್ಲದೆ ಆಂಧ್ರ ಮತ್ತು ತಮಿಳುನಾಡಿನ ಬ್ರಾಹ್ಮಣರೇ ತುಂಬಿಕೊಂಡ ಆಸ್ಥಾನಕ್ಕೆ ಮೊದಲ ಬಾರಿ ಕನ್ನಡ ಶೂದ್ರ ಮತ್ತು ದಲಿತ ಸಮುದಾಯ ಪ್ರವೇಶಿಸುವಂತಾಯ್ತು. ಬ್ರಾಹ್ಮಣೇತರರನ್ನು ಸರ್ಕಾರಿ ಸೇವೆಗೆ ಸೇರಿಸಿಕೊಳ್ಳುವುದರಿಂದ, ''ಸಾಮರ್ಥ್ಯವನ್ನು ಕಡೆಗಣಿಸುತ್ತಿದ್ದೀರಿ'' ಎಂಬ ವಿಶ್ವೇಶ್ವರಯ್ಯನವರ ವಾದವನ್ನು ನಿರಾಕರಿಸಿ, ''ಒಂದು ವೇಳೆ ಬ್ರಾಹ್ಮಣೇತರರಲ್ಲಿ ದಕ್ಷತೆ ಮತ್ತು ಸಾಮರ್ಥ್ಯವಿಲ್ಲದಿದ್ದರೆ ನಾನು ಅವರಲ್ಲಿ ದಕ್ಷತೆ ಮತ್ತು ಸಾಮರ್ಥ್ಯವನ್ನು ಬೆಳೆಸುತ್ತೇನೆ'' ಎಂದು ಘೋಷಿಸಿದರು. ಹಿಂದುಳಿದವರ ಅಭಿವೃದ್ಧಿಗೆ ನೀವು ಅಡ್ಡಿಯಾಗಬಾರದು ಎಂಬ ಒಡೆಯರ ಹಿತವಚನ ನಿರಾಕರಿಸಿ ರಾಜಿನಾಮೆ ನೀಡಿದ ವಿಶ್ವೇಶ್ವರಯ್ಯನವರ ಜಾಗಕ್ಕೆ ಮೊದಲ ಬಾರಿಗೆ ಒಡೆಯರು ಹಿಂದುಳಿದ ಅಧಿಕಾರಿ ಸರ್ದಾರ್ ಕಾಂತರಾಜ್ ಅರಸ್ ಅವರನ್ನು ಆಯ್ಕೆ ಮಾಡಿದರು. ೧೯೩೬ರಲ್ಲಿ ಪ್ರಥಮ ಬಾರಿಗೆ ಪಂಚಮರಿಗೂ ಅರಮನೆ ಪ್ರವೇಶದ ಅವಕಾಶ ನೀಡಿದ ಒಡೆಯರಲ್ಲಿದ್ದದ್ದು ಸಾಮಾನ್ಯರ ಮೇಲಿನ ನಿರ್ಮಲ ಪ್ರೀತಿ. ಇದಕ್ಕೊಂದು ಅಪೂರ್ವ ಘಟನೆಯನ್ನ ಡಾ॥ ಭರಣಿಯವರು ಇಲ್ಲಿ ಉದಾಹರಿಸುತ್ತಾರೆ. ಒಮ್ಮೆ ಬೇಟೆಗೆ ಹೋಗಿದ್ದ ಒಡೆಯರು ಹೊಲೆಯರ ಗುಂಡ್ಲುಪೇಟೆ ಬಸಮ್ಮನ ರಂಗೋಲಿಗೆ ಮಾರುಹೋಗಿ ಅರಮನೆಗೆ ಕರೆಸಿ ಬಿರುದು ಬಾವಲಿಗಳನ್ನಿತ್ತು ಅರಮನೆಯೊಳಗೆ ರಂಗೋಲಿ ಹಾಕುವ ಕಾಯಕ ವಹಿಸಿದರು. ಸ್ವಾತಂತ್ರ್ಯ ಪೂರ್ವದಲ್ಲೇ ಇವರ ಕಲೆಗೆ ಸಿಕ್ಕ ಪ್ರೋತ್ಸಾಹಕ್ಕೆ ಇದೊಂದು ಉದಾಹರಣೆ ಎನ್ನಬಹುದಾದರೂ ಈ ಪಂಚಮರ ಪ್ರತಿಭೆಯನ್ನು ಸಮಾಜ ಪ್ರೀತಿಸುತ್ತಿರಲಿಲ್ಲ, ಬೆಂಬಲಿಸುತ್ತಿರಲಿಲ್ಲ ಎಂಬ ವಿವರಗಳೂ ಈ ಕೃತಿಯಲ್ಲಿವೆ. ಕುಸ್ತಿಪಟು ಮಾದಯ್ಯ ಹೊಲೆಯನೆಂಬ ಕಾರಣಕ್ಕೆ ಆ ಸವರ್ಣೀಯ ಸಮುದಾಯಗಳು ಆತನನ್ನು ಕಡೆಗಣಿಸಿದವು. ಅವರು ಆತನೊಂದಿಗೆ ಕುಸ್ತಿ ಆಡಲಿಲ್ಲ. ಆದರೆ ಆತನ ಪ್ರತಿಭೆಗೆ ಮಾರುಹೋಗಿ ಕಾಶ್ಮೀರದ ಮಹಬೂಬ್‌ಸಾಬ್ ಮತ್ತು ಬರೋಡಾದ ಗಾಮನನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು!

**ಹೊಲೆಯರ ಸಾಹಿತ್ಯ ಶ್ರೀಮಂತಿಕೆ**

ಈ ನಾಡಿನ ದಲಿತರು ತಮ್ಮ ಬಡತನ ಮತ್ತು ದಾರಿದ್ರ್ಯಗಳನ್ನ ಕಥೆ, ಪುರಾಣ, ಪದಗಳ ಶ್ರೀಮಂತಿಕೆಯಿಂದ ಸರಿದೂಗಿಸಿಕೊಂಡು ಸ್ವಯಂ ಸಾಂತ್ವನಿಸಿಕೊಳ್ಳುತ್ತಾರೆ. ಈ ಕುಲಗಳಲ್ಲೇ ಯಾಕೆ ಕಥೆ ಪುರಾಣಗಳಿವೆ ಎಂಬುದನ್ನು ಸಮರ್ಥಿಸುವಂತೆ ಇಲ್ಲೊಂದು ದಂತಕಥೆ ಇದೆ. ''ಹಿಂದೆ ಜನಗಳಿಗೆ ಹೇಳಿಕೊಳ್ಳಲು ಕಥೆಗಳಿರಲಿಲ್ಲ. ಪದಗಳೂ ಇರಲಿಲ್ಲ. ಇಲ್ಲಸಲ್ಲದ ಚಾಡಿ ಹೇಳಿಕೊಂಡು ಜನ ಜಗಳ ಮಾಡಿಕೊಳ್ಳುತ್ತಿದ್ದರು. ಇದರಿಂದ ಬೇಸತ್ತ ಜನ ದೇವರ ಬಳಿ ಹೋಗಿ ಕಷ್ಟ ಸುಖ ಹೇಳಿಕೊಂಡಾಗ ಗಂಗಮ್ಮ 'ಬಂಡಿ ತುಂಬಾ' ಕಥೆಗಳನ್ನ ಪದಗಳನ್ನ ತುಂಬಿ ಕಳಿಸಿದಳಂತೆ. ಜನ ಕಥೆಗಳನ್ನು ಹೇರಿಕೊಂಡು ಗಾಡಿ ಹೊಡಕೊಂಡು ಬರುವಾಗ ಊರ ಮುಂದಿನ ದಲಿತಕೇರಿಯ ಬಳಿ ಆ ಗಾಡಿಯ ಅಚ್ಚು ಮುರಿದುಹೋಯಿತಂತೆ. ಜನ ''ಕಥೆಗಳನ್ನೆಲ್ಲಾ ಯಾವನಪ್ಪ ಹೊತ್ತುಕೊಂಡು ಹೋಗೋದು'' ಅಂತ ಇಷ್ಟಿಷ್ಟೇ ತಗೊಂಡುಹೋದರಂತೆ, ಮಿಕ್ಕಿದ್ದನ್ನ ಅಲ್ಲೇ ಬಿಟ್ರಂತೆ. ದಲಿತರಿಗೆ ಅದನ್ನ ಕಂಡು ನಿಧಿಯೇ ಸಿಕ್ಕಂತಾಯ್ತು. ಅವರು ಕಥೆಗಳನ್ನು ಬಾಚಿಕೊಂಡು ಹೋಗಿ ಕಣಜ, ಗುಡಾಣ ತುಂಬಿಸಿದ್ದು ಸಾಲದೇ ಕೊನೆಗೆ ಒಲೆ ಮೇಲಿಟ್ಟಿದ್ದ ಎಸರಿನ ಮಡಕೆ ತುಂಬಾ ತುಂಬಿಸಿಕೊಂಡರಂತೆ. ಆದ್ದರಿಂದಲೇ ಅವತ್ತಿಂದ ಹೊಲೆ ಮಾದಿಗರ ಬಳಿ ಕಥೆ, ಪದ, ಜಾಸ್ತಿ ತುಂಬಿಸಿಕೊಂಡಿದ್ದರಿಂದ ಕಾಳು, ಕಡಿ, ಧನಕನಕ ಕಡಿಮೆಯಾಯ್ತಂತೆ.''

ಹೊಲೆ ಮಾದಿಗರ ಮಹಾಕಾವ್ಯಗಳು, ಪುರಾಣಗಳು, ಕಥೆ, ಕವನಗಳು, ವಿಮರ್ಶೆ, ಶೋಧನೆಗಳ ದೊಡ್ಡ ವಿವರವೂ ಇಲ್ಲಿ ಸಿಗುತ್ತದೆ. ಹೀಗಾಗಿ ಲೇಖಕರು ಈ ಶೋಧನೆಗೆ ಸಂತೋಷಪಡಲು ಕಾರಣ, ''ಈ ನಾಡನ್ನ ಚರಿತ್ರೆಯ ಉದ್ದಕ್ಕೂ ಕಟ್ಟುವ ಕೆಲಸವನ್ನ ಆದಿಕರ್ನಾಟಕ ವರ್ಗದವರು ಮಾಡುತ್ತಲೇ ಬಂದಿದ್ದಾರೆ. ಒನಕೆ ಓಬವ್ವನಂತಹ ವಿರೋಚಿತ ತ್ಯಾಗದ ಕಥೆಗಳು ನಮ್ಮ ಎದೆಯಲ್ಲಿವೆ. ಕೆರೆಗೆ ಹಾರವಾದ ಬಂದಮ್ಮಳಂತಹ ಬಲಿದಾನದ ಕಥೆಗಳೂ ಐತಿಹ್ಯಗಳಾಗಿ ಉಳಿದಿವೆ.'' ಹೀಗೆ ಹೇಳುವಾಗ ಲೇಖಕರನ್ನು ಅತೀಭಾವುಕತನ ಕಾಡಿಲ್ಲ, ಉತ್ಪ್ರೇಕ್ಷೆಗಳಿಂದ ಹೊರತಾಗಿ ತಲಸ್ಪರ್ಶಿ ಗುಣದಿಂದ ಇಲ್ಲಿನ ನಿರೂಪಣೆಗಳಿವೆ. ಆದರೆ ಚರಿತ್ರೆಯ ಈ ಒಂದು ಎಳೆಯೊಳಗೆ ಸಂಸ್ಕೃತಿ ಮತ್ತು ಕಲೆ ಸಾಹಿತ್ಯಕ್ಕೆ ನೀಡಿದಷ್ಟು ಈ ಜನ ವರ್ಗದ ವೈದ್ಯ ಪದ್ಧತಿಯ ವಿವರಗಳನ್ನ ನೀಡಿಲ್ಲ. ಮಂತ್ರಿಸುವ, ದೇವರು ಬರುವ, ಕೈ ಕಾಲು ಮುರಿತಕ್ಕೆ ಕಟ್ಟುಕಟ್ಟುವ, ಪ್ರಾಣಿಗಳಿಗೆ, ಮಾನವರಿಗೆ ಔಷಧಿ ನೀಡುವ ಜನರೂ ಈ ವರ್ಗದೊಳಗಿದ್ದಾರೆ. ಒಂದು ಜಿಲ್ಲೆಯ ವಿವರಕ್ಕೆ ಇಷ್ಟೊಂದು ವಿವರಗಳಿರುವಾಗ ಇನ್ನು ಅಲಕ್ಷಿತ ಸಮುದಾಯಗಳ ನಾನಾ ಜಗತ್ತು ಇಂತಹ ಶೋಧನೆಗೆ ತೆರೆದುಕೊಂಡಲ್ಲಿ ದೇವನೂರು ಮಹಾದೇವ ಅವರು ಹೇಳುವಂತೆ, ''ಅದರಿಂದ ಉಂಟಾಗುವ ಬದಲಾವಣೆಯು ಕಲ್ಪನೆಗೆ ಎಟುಕದಷ್ಟಾಗಬಹುದು.'' ಇಂತಹ ಚರಿತ್ರೆಗಳು ಗತಕಾಲವನ್ನು ಭಿನ್ನವಾಗಿ ನೋಡುವುದಕ್ಕೆ ಪ್ರೇರೇಪಿಸುತ್ತವೆ. ಹೆಮ್ಮೆಯನ್ನೇ ಹೊತ್ತು ಹೊರಟ ದಾರಿಗಳ ನಡುವೆ ಹೆಮ್ಮೆ ಇಲ್ಲದ್ದೂ ಇದ್ದವು ಎಂಬುದನ್ನು ಚುಚ್ಚಿ ತೋರಿಸುತ್ತವೆ. ಕಪಿಕಾಲದ ಒಡಲೊಳಗೂ ಹುದುಗಿರುವ ತಾಯಿ ಕರುಳಿನ ಸ್ಪರ್ಶವನ್ನ ಮಿಡಿದು ಹೇಳುತ್ತವೆ.

ಶಿವಕುಮಾರ್ ಕಂಪ್ಲಿ
ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ದೇವದುರ್ಗ, ರಾಯಚೂರು ಜಿಲ್ಲೆ



## ಭೀಮಸೇನ

ಮೂಲ : ವಸಂತ ಪೋತದಾರ

ಅನು : ಶುಭದಾ ಅಮಿನಭಾವಿ

**ಪುಟ : ೨೯೬** **ಬೆಲೆ : ರೂ. ೨೦೦**

**ಮನೋಹರ ಗ್ರಂಥಮಾಲಾ**, ಲಕ್ಷ್ಮೀ ಭವನ, ಸುಭಾಸ ರಸ್ತೆ, ಧಾರವಾಡ - ೫೮೦ ೦೦೧

ಸಾಧಕ ತನ್ನ ಸಾಧನೆಯ ಉತ್ತುಂಗದ ಹಾದಿಯಲ್ಲಿದ್ದಾಗ ಆತನ ಬಗ್ಗೆ ಅನೇಕ ಗ್ರಂಥಗಳು ರಚಿತವಾಗುತ್ತವೆ. ಆದರೆ ಕಾಲ ಕ್ರಮೇಣ ಆ ಸಾಧನೆ ಮತ್ತಷ್ಟು ವಿಸ್ತರಿಸಿ ಒಂದು ವಿಶಿಷ್ಟ ಛಾಪು ಮೂಡಿಸಿ ಯಶಸ್ವಿಯಾದಾಗ ಅದನ್ನು ಮತ್ತಷ್ಟು ವಿಶ್ಲೇಷಿಸಿ ಹಿಗ್ಗಿಸುವ ಕೆಲಸ ನಡೆಯಬೇಕಾಗುತ್ತದೆ. ಪಂಡಿತ ಭೀಮಸೇನ ಜೋಶಿಯವರ ವ್ಯಕ್ತಿತ್ವ ನಿರೂಪಣೆ ಇಲ್ಲಿ ಅನಾವರಣಗೊಂಡಿದೆ. ಮರಾಠಿ ಲೇಖಕ ವಸಂತ ಪೋತದಾರರು ಭೀಮಸೇನ ಜೋಶಿಯವರ ಬಗ್ಗೆ ಬರೆಯಲು ಸಾಕಷ್ಟು ಪೂರ್ವಸಿದ್ಧತೆ ನಡೆಸಿದ್ದಾರೆ. ದೇಶದ ಉದ್ದಗಲಕ್ಕೆ ಪ್ರವಾಸ ಮಾಡಿ ಭೀಮಸೇನ ಜೋಶಿಯವರ ಶಿಕ್ಷಣ, ಗಾಯನ, ಕಾರ್ಯಕ್ರಮ, ವೈಯಕ್ತಿಕ ಜೀವನ ಇವುಗಳಿಗೆ ಸಂಬಂಧಿಸಿದವರೆಲ್ಲರನ್ನು ಸಂಪರ್ಕಿಸಿ, ಸಂದರ್ಶಿಸಿ ಅಭಿಪ್ರಾಯ ಪಡೆದು ದಾಖಲಿಸಿದ್ದಾರೆ. ಶುಭದಾ ಅಮಿನಭಾವಿಯವರ ಕನ್ನಡಾನುವಾದ ತುಂಬ ಸೊಗಸಾಗಿದೆ.

## ತಾಯಿ

ಮೂಲ : ಮಕ್ಸಿಂ ಗೋರ್ಕಿ, ಅನು : ನಿರಂಜನ

**ಪುಟ : ೩೬೦** **ಬೆಲೆ : ರೂ. ೧೦೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -೧

ಪ್ರಖ್ಯಾತ ಕಥೆಗಾರ, ನಾಟಕಕಾರ, ಕಾದಂಬರಿಕಾರ ಮಕ್ಸಿಂ ಗೋರ್ಕಿಯವರ 'ತಾಯಿ' ಬಹುಚರ್ಚಿತ ಕಾದಂಬರಿ. ಜಗತ್ತಿನ ಬಹಳಷ್ಟು ಸಾಹಿತ್ಯಾಸಕ್ತರು ಓದಿ ಆನಂದಿಸಿರುವುದು ಈ ಕೃತಿ ದಕ್ಕಿಸಿಕೊಂಡಿರುವ ಯಶಸ್ಸಿಗೆ ಸಾಕ್ಷಿ. ೧೯೦೫-೧೯೦೭ರಲ್ಲಿ ನಡೆದ ಪ್ರಥಮ ರಷ್ಯಾ ಕ್ರಾಂತಿಯ ಸಮಯದಲ್ಲಿ ರಚಿತವಾದ ಈ ಕಾದಂಬರಿ ಜಗತ್ತಿನ ೧೨೭ಕ್ಕೂ ಹೆಚ್ಚು ಭಾಷೆಗಳಲ್ಲಿ ಅನುವಾದಗೊಂಡಿದೆ. ಅಲ್ಲದೆ ಈ ಕೃತಿ ನಾಟಕ ರೂಪದಲ್ಲಿ (ಬ್ರೆಕ್ಟನ 'ತಾಯಿ') ಸಿನಿಮಾ ರೂಪದಲ್ಲಿ ಮತ್ತು ಕಾವ್ಯವಾಗಿಯೂ ಮೂಡಿದೆ. ಈ ಕಾದಂಬರಿ ರಚಿತವಾಗಿ ನೂರರ ಸಂಭ್ರಮ ಆಚರಿಸಿಕೊಳ್ಳುತ್ತಿರುವಾಗ ನವಕರ್ನಾಟಕ ಪಬ್ಲಿಕೇಷನ್ಸ್‌ನವರು ಇದರ ಮೂರನೇ ಆವೃತ್ತಿಯನ್ನು ಪ್ರಕಟಿಸಿದ್ದಾರೆ. ನಿರಂಜನರ ಕನ್ನಡಾನುವಾದ ಬಹಳಷ್ಟು ಭಾಗಗಳಲ್ಲಿ ಚೆನ್ನಾಗಿದ್ದು ಕೆಲ ಕಡೆ ತೊಡಕಿನದು ಅನಿಸುತ್ತದೆ. ಓದುಗನಿಗೆ ಬೇರೆಯದೇ ಕಾಲಘಟ್ಟದ ಅಖಂಡ ಜೀವನಾನುಭವವನ್ನು ತುಂಬ ಪರಿಣಾಮಕಾರಿಯಾಗಿ ಕಟ್ಟಿಕೊಡುತ್ತದೆ.



## ಆಧುನಿಕ ಮರಾಠಿ ಕಥೆಗಳು

ಅನು : ಚಂದ್ರಕಾಂತ ಪೋಕಳೆ

**ಪುಟ : ೨೧೨** **ಬೆಲೆ : ರೂ. ೧೨೦**

**ಭಾಗ್ಯಲಕ್ಷ್ಮೀ ಪ್ರಕಾಶನ**, ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಹಂತ, ಬೆಂಗಳೂರು - ೮೫

ಮರಾಠಿ ನವ್ಯ ಕಥಾ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆ ನೀಡುತ್ತಿರುವ ಮರಾಠಿಯ ಬೇರೆಬೇರೆ ಕಥೆಗಾರರ ಒಟ್ಟು ಹದಿನೆಂಟು ಕಥೆಗಳು ಇಲ್ಲಿ ಕನ್ನಡಕ್ಕೆ ಅನುವಾದಗೊಂಡಿವೆ. ಈಗಾಗಲೇ ಮುಂಬೈ ನಗರದ ಜನಜೀವನ, ಮರಾಠಿಗರ ನೆಲದಗುಣ ಮುಂತಾದವುಗಳನ್ನು ಗೌರೀಶ ಕಾಯ್ಕಿಣಿ, ಜಯಂತ ಕಾಯ್ಕಿಣಿ, ವ್ಯಾಸರಾಯ ಬಲ್ಲಾಳ, ಯಶವಂತ ಚಿತ್ತಾಲ ಮತ್ತಿತರರ ಬರಹಗಳು ಸಶಕ್ತವಾಗಿ ಕಟ್ಟಿಕೊಟ್ಟಿರುವುದರಿಂದ ಇಲ್ಲಿನ ಕಥೆಗಳ ಜಗತ್ತು ಅಪರಿಚಿತವೆನಿಸುವುದಿಲ್ಲ. ಪ್ರತಿಯೊಂದು ಕಥೆಯೂ ಸಾಂದ್ರತೆ ದಕ್ಕಿಸಿಕೊಂಡಿದೆ. 'ಹಳೆಯ ಕತೆಗಳಿಗೆ ನಿರ್ದಿಷ್ಟ ಚೌಕಟ್ಟಿತ್ತು; ಬಾಹ್ಯ ಆವಿಷ್ಕಾರ ಕಡಿಮೆ' ಎಂದಿರುವ ಪೋಕಳೆಯವರು ನವ್ಯ ಕಥೆಗಾರರು 'ಮನುಷ್ಯ ಜೀವನವನ್ನು, ಮನಸ್ಸನ್ನು ಕುತೂಹಲದಿಂದ ನಿರೀಕ್ಷಿಸುವುದನ್ನು, ಕಲಿತರು' ಅಂದಿದ್ದಾರೆ. ಈ ಗುಣ ಇಲ್ಲಿನ ಕಥೆಗಳಲ್ಲಿ ಪ್ರತಿಫಲನಗೊಂಡಿದೆ. ಬದುಕಿನ ಬಗೆಗೆ ಮರಾಠಿಯ ಆಧುನಿಕ ಕಥೆಗಾರರ ದೃಷ್ಟಿಯೇನೆಂಬುದು ಇಲ್ಲಿ ಕಾಣಸಿಗುತ್ತದೆ.



## ಚಿಪ್ಪೊಡೆದ ಮೌನ (ಸ್ತ್ರೀವಾದಿ ವಿಮರ್ಶೆ)



ಡಾ|| ಚಂದ್ರಮತಿ ಸೋಂದಾ

**ಪುಟ : ೨೦೦** **ಬೆಲೆ : ರೂ. ೧೫೦**

**ಅಭಿರುಚಿ ಪ್ರಕಾಶನ**, ನಂ. ೩೮೬, ೧೪ನೇ ಮುಖ್ಯರಸ್ತೆ ೩ನೆಯ ಅಡ್ಡರಸ್ತೆ, ಸರಸ್ವತೀಪುರಂ, ಮೈಸೂರು - ೯

ಮಹಿಳಾ ಸಾಹಿತ್ಯವನ್ನು ಕುರಿತ ಒಂಬತ್ತು ಲೇಖನಗಳು ಇಲ್ಲಿ ಸಂಕಲಿತವಾಗಿವೆ. 'ಅರ್ಧ ಶತಮಾನದಲ್ಲಿ ಸಾಮಾಜಿಕ ಸಾಂಸ್ಕೃತಿಕ, ರಾಜಕೀಯ ಕ್ಷೇತ್ರದ ಆಗುಹೋಗುಗಳನ್ನು ಮಹಿಳೆಯರು ಹೇಗೆ ಗ್ರಹಿಸಿದ್ದಾರೆ, ಪ್ರಶ್ನಿಸಿದ್ದಾರೆ, ಪ್ರತಿಭಟಿಸಿದ್ದಾರೆ' ಎನ್ನುವುದನ್ನು ಪರಿಶೀಲಿಸುವ ಪ್ರಯತ್ನ ಮಾಡಿರುವುದಾಗಿ ಲೇಖಕಿ ಹೇಳಿಕೊಂಡಿದ್ದಾರೆ. ಮಹಿಳಾ ಸಾಹಿತ್ಯ ಪರಂಪರೆ, ಅರಿವಿನೆಡೆಗೆ, ಮನೆಯೊಳಗಿನ ಮಾತು, ವಿವಾಹ ಸಂಬಂಧೀ ಪ್ರಶ್ನೆಗಳು, ಗೋಡೆ ಅಡ್ಡ... ಹೀಗೆ ವಿಭಾಗಿಸಿಕೊಂಡಿದ್ದಾರೆ. ಮಹಿಳೆಯರ ಆರ್ಥಿಕ ಸ್ಥಿತಿಯನ್ನು ವಿವರಿಸಲು ವಿಶ್ವಸಂಸ್ಥೆಯ ವರದಿಯೊಂದನ್ನು ಮುಂದಿಡುತ್ತಾರೆ. ಪ್ರಪಂಚದ ಒಟ್ಟು ದುಡಿಮೆಯ ೨/೩ ಭಾಗದ ದುಡಿಮೆ ಮಹಿಳೆಯರದು. ೧/೧೦೦ ಭಾಗ ಆಸ್ತಿಯ ಒಡೆತನ ಆಕೆಯದಾದರೆ, ೧/೧೦ ಭಾಗ ಆರ್ಥಿಕ ಪ್ರತಿಫಲ ಅವಳ ಕೈಸೇರುತ್ತದೆ. ಹೀಗೆ ಇಂಥ ಅಂಕಿ-ಅಂಶಗಳಿಂದ ತಮ್ಮ ನಿಲುವನ್ನು ಮಂಡಿಸಿದ್ದಾರೆ.



## ಗೌರವಾನ್ವಿತ ದಗಾಕೋರರು

ಎಚ್. ಎಲ್. ಕೇಶವಮೂರ್ತಿ

**ಪುಟ : ೧೫೨** **ಬೆಲೆ : ರೂ. ೧೨೦**

**ಅಭಿರುಚಿ ಪ್ರಕಾಶನ**, ನಂ. ೩೮೬, ೧೪ನೇ ಮುಖ್ಯರಸ್ತೆ ೩ನೆಯ ಅಡ್ಡರಸ್ತೆ, ಸರಸ್ವತೀಪುರಂ, ಮೈಸೂರು - ೯

ಸಮಾಜದಲ್ಲಿನ ಖ್ಯಾತನಾಮರ ಒಳಡೋಂಗಿತನವನ್ನು ಇಲ್ಲಿನ ಬರಹಗಳು ಸಮರ್ಥವಾಗಿ ಬಿಂಬಿಸಿವೆ. ನಟ-ನಟಿಯರ, ರಾಜಕಾರಣಿಗಳ, ಪ್ರಭಾವೀ ವ್ಯಕ್ತಿಗಳ ಮಾತು-ಕತೆ, ನಡೆ ನುಡಿಯಲ್ಲಿರುವ ಕೃತಕತೆ, ಸಮಾಜದಲ್ಲಿನ ಅರಾಜಕತೆ, ಅವ್ಯವಸ್ಥೆ, ಅಧಿಕಾರಿಗಳ ಭ್ರಷ್ಟತೆ ಎಲ್ಲವನ್ನೂ ಲೇಖಕರು ತುಂಬ ಪರಿಣಾಮಕಾರಿಯಾಗಿ ಲೇವಡಿ ಮಾಡಿದ್ದಾರೆ. ಈ ಬರಹಗಳ ವೈಶಿಷ್ಟ್ಯ ಅಂದರೆ ಇಲ್ಲಿನ ಯಾವ ಲೇವಡಿಗಳೂ ಅತಿರೇಕ ಅನಿಸುವುದಿಲ್ಲ. ವಸ್ತುನಿಷ್ಠತೆಯಿಂದ ಬೆರಗು ಹುಟ್ಟಿಸುವುದಲ್ಲದೆ ಪ್ರಚಲಿತ ಘಟನಾವಳಿಗಳನ್ನು ಸೂಕ್ಷ್ಮವಾಗಿ ಮತ್ತು ನಿಷ್ಠುರವಾಗಿ ಹೇಗೆ ವಿಶ್ಲೇಷಿಸಿಕೊಳ್ಳಬೇಕೆಂಬುದನ್ನು ಕಲಿಸುತ್ತವೆ. ಲಂಕೇಶ್ ಪತ್ರಿಕೆಯಲ್ಲಿ ಪ್ರಕಟಗೊಂಡ ಅಂಕಣಗಳನ್ನು ಇಲ್ಲಿ ಒಂದೆಡೆ ಸಂಕಲಿಸಿದ್ದಾರೆ. ಕಠಿಣ ಮಾತುಗಳಿಂದ ನಿಂದಿಸಿ ಪ್ರಯೋಜನವಿಲ್ಲವೆಂದು ಕಂಡುಕೊಂಡಿರುವ ಲೇಖಕರು 'ಗೇಲಿಯ ಗುಂಡು ಸೂಜಿ' ಚುಚ್ಚಿದ್ದಾರೆ: ಇದು ಮದ್ದಾಗುತ್ತದೋ ಅಥವಾ ಗೌರವಾನ್ವಿತ ದಗಾಕೋರರು ಮದ್ದರಾಗುತ್ತಾರೋ ಕಾಲ ನಿರ್ಧರಿಸುತ್ತದೆ.

## ಸಾಹಿತ್ಯ ವಿಮರ್ಶೆ



ಡಾ|| ಬಸವರಾಜ ಸಬರದ

**ಪುಟ : ೧೦೮** **ಬೆಲೆ : ರೂ. ೪೫**

**ಪಲ್ಲವಿ ಪ್ರಕಾಶನ**, ಸರಸ್ವತೀಪುರ, ವಿಶ್ವವಿದ್ಯಾಲಯ ಅಂಚೆ, ಗುಲಬರ್ಗಾ - ೫೮೫ ೧೦೬

ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿರುವ ಬಸವರಾಜ ಸಬರದರವರು ವಿಮರ್ಶೆ ಕುರಿತಂತೆ ವಿದ್ಯಾರ್ಥಿಗಳಿಗೆ ಬೋಧಿಸುವಾಗ ಅನೇಕ ಪ್ರಶ್ನೆಗಳು ತಲೆದೋರಿ – ವಿಮರ್ಶೆಯ ಪ್ರಯೋಜನ, ವಿಮರ್ಶೆಯ ಭಾಷೆ, ಮೀಮಾಂಸೆ ವಿಮರ್ಶೆಗಿರುವ ಸಂಬಂಧ, ವಿಮರ್ಶೆಯ ಮೌಲ್ಯನಿರ್ಣಯ – ಇವುಗಳನ್ನು ಬೇರೆಬೇರೆ ಭಾಷೆಯ ಕೃತಿಗಳಿಂದ ಓದಿಕೊಂಡು ಎಲ್ಲವನ್ನೂ ಕನ್ನಡೀಕರಿಸಿ ದಾಖಲುಮಾಡಿದ್ದಾರೆ. ಅಂದರೆ ಕನ್ನಡದಲ್ಲಿ ವಿಮರ್ಶೆಗೆ ಸಂಬಂಧಿಸಿದ ಪುಸ್ತಕಗಳು ಇಲ್ಲವೆಂದಲ್ಲ. ಸಿ. ಎನ್. ರಾಮಚಂದ್ರನ್‌ರವರ 'ಸಾಹಿತ್ಯ ವಿಮರ್ಶೆ' ಇತ್ತು. ಆದರೆ ವಿಮರ್ಶೆಯನ್ನು ಪ್ರಾಥಮಿಕ ಹಂತದಲ್ಲಿ ಗ್ರಹಿಸಲು ಬೇಕಾಗುವ ಸಾಮಗ್ರಿಗಳು ಅಲ್ಲಿರಲಿಲ್ಲ. ಹಾಗಾಗಿ ಲೇಖಕರು ವಿದ್ಯಾರ್ಥಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಈ ಕೈಪಿಡಿಯನ್ನು ರೂಪಿಸಿ ಕೊಟ್ಟಿದ್ದಾರೆ.

– ಎನ್. ಸಿ ಮಹೇಶ್, ಸೇಂಟ್ ಆ್ಯನ್ಸ್ ವಿಮೆನ್ಸ್ ಪ್ರಥಮ ದರ್ಜೆ ಕಾಲೇಜು, ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮

# ಮಿಲಿಟರಿ ಶಕ್ತಿಯ ಇತಿಮಿತಿಗಳು

**ಕೆ. ಎಸ್. ಪಾರ್ಥಸಾರಥಿ**




ಉತ್ತರ ಕೊರಿಯ ಅಣುಬಾಂಬ್ ಸ್ಫೋಟಿಸಿದ್ದರಿಂದ ಆಗುವ ಹಲವು ಬೆಳವಣಿಗೆಗಳಲ್ಲಿ ಒಂದು, ಭಾರತ-ಅಮೆರಿಕಾ ನಡುವೆ ಚರ್ಚಿತವಾಗುತ್ತಿರುವ ಅಣು ಶಕ್ತಿ ಒಪ್ಪಂದ ಮುಂದುವರಿಯದೆ ಹೋಗಬಹುದು ಎಂಬ ಕೆಲವರ ಶಂಕೆ. ಅಮೆರಿಕಾದ ನೇತಾರರೇ ಭಾರತ-ಪಾಕಿಸ್ತಾನದೊಡನೆ ಉತ್ತರ ಕೊರಿಯವನ್ನು ಸಮೀಕರಿಸಲಾಗುವುದಿಲ್ಲ ಎಂದು ಹೇಳಿದ್ದಾರಾಗಿ ಈ ಶಂಕೆಗೆ ಅಷ್ಟೇನೂ ಆಧಾರವಿಲ್ಲ. ಆದರೂ ಈ ಒಪ್ಪಂದ ಆಗದೆ ಹೋಗಲು ಹಲವು ಇತರೇ ಬೆಳವಣಿಗೆಗಳೇ ಕಾರಣವಾಗಬಹುದು. ಬುಷ್ ಆಡಳಿತ ಈ ಒಪ್ಪಂದದ ಬಾಧ್ಯತೆಯಿಂದ ಹೊರಬರಲು ಅವಕಾಶವನ್ನು ಹುಡುಕುತ್ತಲೇ ಇರಬಹುದು. ನವೆಂಬರ್‌ನಲ್ಲಿ ಬರುವ ಕಾಂಗ್ರೆಸ್ ಮತ್ತು ಸೆನೆಟ್ ಚುನಾವಣೆಗಳಲ್ಲಿ ಅಲ್ಲಿನ ಆಳುವ ರಿಪಬ್ಲಿಕನ್ ಪಕ್ಷ ಬಹುಮತ ಕಳೆದುಕೊಳ್ಳುವುದು ಈಗ ಖಚಿತವಾಗುತ್ತಿದೆ. ಬುಷ್ ಆಡಳಿತ ಒಪ್ಪಂದಕ್ಕೆ ಕಟಿಬದ್ಧವಾಗಿದ್ದರೆ, ಈ ವೇಳೆಗಾಗಲೇ ಅವುಗಳ ಒಪ್ಪಿಗೆ ಪಡೆಯುವ ಪ್ರಕ್ರಿಯೆಯನ್ನು ಪೂರೈಸಬೇಕಾಗಿತ್ತು. ಒಪ್ಪಂದವಾಗಲಿ ಬಿಡಲಿ, ಅಮೆರಿಕಾ ಸಂಯುಕ್ತ ಸಂಸ್ಥಾನ (ಅ.ಸಂ.ಸಂ.) ಭಾರತವು ಇರಾನಿನ ವಿರುದ್ಧ ಓಟು ನೀಡುವಂತೆ ಒತ್ತಾಯಿಸಲು ಸಮರ್ಥವಾಯಿತು. ಈಗ ವೆನಿಜ಼ೂಲದ ವಿರುದ್ಧ ಭದ್ರತಾ ಸಮಿತಿಯ ಚುನಾವಣೆಯಲ್ಲಿ ಮತ ನೀಡಲು ಒತ್ತಾಯ ತಂದಿದೆ. ಅವರೊಡನೆ ಬೆಳೆಯುತ್ತಿರುವ ನಂಟಿನ ಮರ್ಜಿಯಿಂದಾಗ ಭಾರತ ಹವಾನಾದಲ್ಲಿ ನಡೆದ ಅಲಿಪ್ತ ಶೃಂಗಸಭೆಯಲ್ಲಿ ಮುಕ್ತವಾಗಿ ತನ್ನ ಸಾಂಪ್ರದಾಯಿಕ ಪಾತ್ರವಹಿಸಲು ಅಸಮರ್ಥವಾಯ್ತು. ಭಾರತದ ಮೂಗಿಗೆ ಅಣು ಶಕ್ತಿ ಒಪ್ಪಂದದ ತುಪ್ಪ ಸವರಿ, ಹೀಗೆಲ್ಲಾ ನಮ್ಮ ವಿದೇಶಾಂಗ ನೀತಿಯನ್ನು ವಿಕೃತಗೊಳಿಸಿದ ಲಾಭಗಳು ಅವರಿಗೆ ದೊರೆತಿವೆ. ವಿಶ್ವ ವ್ಯಾಪಾರ ಸಂಸ್ಥೆಯಲ್ಲಿ ಭಾರತ ಅಮೆರಿಕಾ ಸಂಯುಕ್ತ ಸಂಸ್ಥಾನ ಬಯಸಿದಂತೆ ದೋಹಾ ಮಾತುಕತೆಯನ್ನು ಪುನರಾರಂಭಿಸುವ ರಾಜಿ ಪ್ರಯತ್ನದಲ್ಲಿ ಈಗಾಗಲೇ ತೊಡಗಿದೆ.

ಕೊರಿಯಾ ನಡೆಸಿದ ನಿಕೃಷ್ಟ ಪ್ರಮಾಣದ ಅಣುಶಸ್ತ್ರ ಪರೀಕ್ಷೆ ಅಂತರರಾಷ್ಟ್ರೀಯವಾಗಿ ಅಂಥ ಭಯಂಕರ ಬೆಳವಣಿಗೆಯೇನೂ ಅಲ್ಲ. ಅದೂ ಸೇರಿದಂತೆ ಜಗತ್ತಿನ ಸುಮಾರು ನಲವತ್ತು ರಾಷ್ಟ್ರಗಳು ಈ ಸಾಮರ್ಥ್ಯವನ್ನು ಪಡೆದಿವೆ. ಈಗ ಪ್ರಾಯೋಗಿಕವಾಗಿ ಆಸ್ಫೋಟ ಮಾಡದೆಯೂ ಅಣ್ವಸ್ತ್ರಗಳನ್ನು ತಯಾರಿಸುವುದು ಸಾಧ್ಯ. ವಾಜಪೇಯಿ ಸರ್ಕಾರ ಅನಾವಶ್ಯಕವಾಗಿ ಈ ಶಸ್ತ್ರಪರೀಕ್ಷೆ ಮಾಡಿ, ತನ್ಮೂಲಕ ಪಾಕಿಸ್ತಾನಕ್ಕೂ ಹಾಗೆ ಮಾಡಲು ಪ್ರಚೋದನೆ ನೀಡಿ, ಈ ಕ್ರಮದಿಂದ ನಮಗೆ ಯಾವುದೇ ರಕ್ಷಣಾ ಕ್ಷೇತ್ರದ ಲಾಭವೂ ಆಗಲಿಲ್ಲ ಎಂಬುದು ಈಗ ಸ್ಪಷ್ಟವಾಗಿದೆ. ಕ್ಲಿಂಟನ್ ಸರ್ಕಾರ ಉತ್ತರ ಕೊರಿಯಾದೊಡನೆ ಮಾಡಿಕೊಂಡಿದ್ದ ಸಮಾಧಾನಕರ ರಾಜಿ ಒಪ್ಪಂದವನ್ನು ಮುರಿದು ಬುಷ್ ಸರ್ಕಾರ ಉತ್ತರ ಕೊರಿಯಾಕ್ಕೆ ಈ ರೀತಿ ಪ್ರತಿಭಟಿಸುವುದನ್ನು ಅನಿವಾರ್ಯವಾಗಿಸಿತು. ಒಂದು ಸರ್ಕಾರ ಮಾಡಿದ ಒಪ್ಪಂದವನ್ನು ನಂತರ ಅಧಿಕಾರಕ್ಕೆ ಬಂದವರು ಮುರಿಯುವುದಾದರೆ ಅಂಥವರೊಡನೆ ಒಪ್ಪಂದಕ್ಕೆ ಏಕೆ ಮುಂದಾಗಬೇಕು ನಾವು ? ಈ ಹಿಂದೆ ಇಸ್ರೇಲ್‌ಗೆ ಮಧ್ಯ ಪ್ರಾಚ್ಯವನ್ನು ನಿಯಂತ್ರಿಸುವ ಉದ್ದೇಶದಿಂದ, ಗುಟ್ಟುಗುಟ್ಟಾಗಿ ಅಣ್ವಸ್ತ್ರ ತಂತ್ರಜ್ಞಾನವನ್ನು ಸರಬರಾಜು ಮಾಡಿದ ಅ.ಸಂ.ಸಂ. ಈಗ ಉತ್ತರ ಕೊರಿಯಾ ವಿರುದ್ಧ ಆತ್ಮರಕ್ಷಣೆಯ ನೆವ ಒಡ್ಡಿ, ದಕ್ಷಿಣ ಕೊರಿಯಾದಲ್ಲಿ ಅಣ್ವಸ್ತ್ರ ನೆಲೆ ಸ್ಥಾಪಿಸಿದರೆ ಆಶ್ಚರ್ಯವೇನಿಲ್ಲ. ಈಗಾಗಲೇ ಜಪಾನೀಯರಿಗೆ ನೀಡಿರುವ ಅಣ್ವಸ್ತ್ರಕೊಡೆಯನ್ನು ಮತ್ತಷ್ಟು ವಿಸ್ತರಿಸಬಹುದು. ಈ ಮೂಲಕ ಪೂರ್ವದಲ್ಲಿ ಚೀನಾ ಮತ್ತು ರಷ್ಯಾವನ್ನು ಸುತ್ತುವರಿಯಬೇಕೆಂಬ ಅ.ಸಂ.ಸಂ.ನ ಹಂಬಲ ಪೂರೈಸಬಹುದು. ಟೋಜೋ ಸರ್ಕಾರದಲ್ಲಿ ಮಂತ್ರಿಯಾಗಿದ್ದವನ ಮೊಮ್ಮಗ ಈಗ ಜಪಾನೀ ಪ್ರಧಾನಿ. ಈತ ಜಪಾನನ್ನು ಆತ್ಮರಕ್ಷಣೆಯ ನೆಪದಲ್ಲಿ ಪುನಶ್ಶಸ್ತ್ರೀಕರಣ ಮಾಡಬಹುದು. ಇದಕ್ಕೆ ಅ.ಸಂ.ಸಂ. ಒಪ್ಪಬಹುದು. ಇವೆಲ್ಲಾ ಕೊರಿಯಾ ಅಣು ಪ್ರಯೋಗದಿಂದ ಆಗಬಹುದಾದ ಕಳವಳಕಾರಿ ಬೆಳವಣಿಗೆಗಳು. ಇರಾನ್ ಈಗಾಗಲೇ ಪ್ರತಿಕ್ರಿಯಿಸಿರುವಂತೆ, ರಕ್ಷಣೆಗೆ ನಿರುಪಯೋಗವಾಗಿರುವ ಅಣ್ವಸ್ತ್ರ ಸಮಸ್ಯೆಗೆ ಜಾಗತಿಕ ನಿಶ್ಶಸ್ತ್ರೀಕರಣವೇ ಪರಿಹಾರ. ಇಂದಿನ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಇದು ಸದ್ಯದಲ್ಲೇ ಆಗುವಂಥದಲ್ಲ. ಒಂದು ರೀತಿಯ ಶೀತಲಯುದ್ಧ ಹಲವು ಬಹಿರಂಗ ಮತ್ತು ಪ್ರಚ್ಛನ್ನ ರೂಪಗಳಲ್ಲಿ ವಿಶ್ವವಾಣಿಜ್ಯ ಚರ್ಚೆಯಲ್ಲಿ ವ್ಯಕ್ತವಾಗುತ್ತಲೇ ಇದೆ. ಭಾರತವೂ ಇದರಲ್ಲಿ ಭಾಗವಹಿಸುವುದು ಅನಿವಾರ್ಯವಾಗಿ, ಏನಿದ್ದರೂ ಯಾರ ಪರ ನಾವು ಇರಬೇಕು ಎಂಬುದು ಮುಖ್ಯ ಪ್ರಶ್ನೆಯಾಗಿರುತ್ತದೆ. ಸದ್ಯಕ್ಕೇನೋ ಉತ್ತರ ಕೊರಿಯದ ಪ್ರಶ್ನೆ ಧುತ್ತನೆ ತಲೆಯೆತ್ತಿ ಇರಾನಿನ ಮೇಲೆ ಎರಗಬೇಕೆಂದಿದ್ದವರ ಕೈಕಟ್ಟಿದಂತಾಗಿದೆ. ಅ.ಸಂ.ಸಂ. ಏಕೈಕ ಜಾಗತಿಕ ಶಕ್ತಿಯಾಗಿ ಮೆರೆಯುವ ಹಂಬಲಕ್ಕೆ ಈಗ ಕೊನೆಗಾಲ ಹತ್ತಿರವಾಗುತ್ತಿದೆ. ಇರಾಕ್ ವಿರುದ್ಧದ ಒಂದು ಸಣ್ಣ ಯುದ್ಧವನ್ನೂ ನಿರ್ಣಾಯಕವಾಗಿ ನಿರ್ವಹಿಸಲಾಗಿಲ್ಲ ಈ ಜಗತ್ ಸಾರ್ವಭೌಮ ಶಕ್ತಿಗೆ! ಸಿರಿಯ, ಇರಾನ್ ಮತ್ತು ಉತ್ತರ ಕೊರಿಯಗಳನ್ನು ದುಷ್ಟ ಶಕ್ತಿಗಳೆಂದು ಕರೆದ ಡಿಕ್ ಚೇನಿ ತನ್ನ ಪ್ರಭಾವ ಕಳೆದುಕೊಂಡಿದ್ದಾನೆ. ಇರಾಕ್‌ನಿಂದ ತಮ್ಮ ಸೇನೆಗಳನ್ನು ಮರ್ಯಾದೆಯಾಗಿ ಹಿಂಪಡೆಯುವುದು ಹೇಗೆ ಎಂದು ಬ್ರಿಟನ್ ಮತ್ತು ಅ.ಸಂ.ಸಂ. ಚಿಂತಿಸುತ್ತಿವೆ. ಇರಾನ್ ಮತ್ತು ಉತ್ತರ ಕೊರಿಯ ಷರತ್ತಿಲ್ಲದೆ ರಾಜಿ ಮಾತುಕತೆ ನಡೆಸಲು ಪ್ರಯತ್ನಿಸಿದ್ದುವು. ಇತ್ತೀಚೆಗೂ ಇಸ್ರೇಲ್ ಸಿರಿಯಾದೊಡನೆ ಮಾತುಕತೆ ನಡೆಸಲು ಪ್ರಯತ್ನಿಸಿತು. ಅಮೆರಿಕಾ ಸಂಯುಕ್ತ ಸಂಸ್ಥಾನದಿಂದ ಅದಕ್ಕೆ ಉತ್ತೇಜನ ಸಿಗಲಿಲ್ಲ. ಈಗ ದಕ್ಷಿಣ ಅಮೆರಿಕಾದಲ್ಲಿ ಬೆಳೆಯುತ್ತಿರುವ, ಅ.ಸಂ.ಸಂ. ತನ್ನ ವಿರುದ್ಧವೆಂದು ಪರಿಗಣಿಸುವ, ಪ್ರಜಾಪ್ರಭುತ್ವಾತ್ಮಕ ಪ್ರಗತಿಪರ ಬೆಳವಣಿಗೆಗಳ ತಲೆನೋವು ಬೇರೆ. ಹೀಗಾಗಿ, ಮುಖಭಂಗವಾಗದೆ ರಾಜಿ ಆಗುವುದು ಹೇಗೆ ಎಂದು ಬುಷ್ ಸರ್ಕಾರದ ತೆರೆಮರೆಯ ವಿದೇಶಾಂಗ ನೀತಿ ನಿರ್ವಹಣೆಯ ಜವಾಬ್ದಾರಿ ಹೊತ್ತವರು ಪ್ರಯತ್ನಿಸುತ್ತಿದ್ದಾರೆ. ವಿಯೆಟ್ನಾಂ ಸಂದರ್ಭದಲ್ಲಿ ಕೊನೆಗಾಲದಲ್ಲಿ ಅ.ಸಂ.ಸಂ. ಅಸಹಾಯಕವಾದಂಥ ಪರಿಸ್ಥಿತಿ ಇದು. ಈ ಪ್ರಕ್ರಿಯೆಯಲ್ಲಿ ಅಧ್ಯಕ್ಷ ಬುಷ್ ನಗಣ್ಯವಾಗುತ್ತಿದ್ದಾನೆ. ರೊನಾಲ್ಡ್ ರೀಗನ್ ಕಾಲದಿಂದಲೂ ಒಂದಲ್ಲ ಒಂದು ವಿದೇಶಾಂಗ ನೀತಿ ನಿರ್ವಹಣೆಯ ಅಧಿಕಾರಿಯಾಗಿದ್ದು, ಹಿರಿಯ ಬುಷ್ ಕಾಲದಲ್ಲಿ ವಿದೇಶಾಂಗ ಕಾರ್ಯದರ್ಶಿಯೂ ಆಗಿದ್ದ ನಿಷ್ಣಾತ ರಾಯಭಾರಿ ಜೇಮ್ಸ್ ಬೇಕರ್ ಈಗ 'ಇರಾಕ್ ಸ್ಟಡಿ ಗ್ರೂಪ್' ಎಂಬ ಕಾಂಗ್ರೆಸ್ ನಿಯಮಿತ ಕಮಿಟಿಯ ಅಧ್ಯಕ್ಷನಾಗಿ ಒಂದು ಮಾತನಾಡಿದ್ದಾನೆ: ''ನಮ್ಮ ಶತ್ರುಗಳೊಡನೆಯೂ ಮಾತುಕತೆ ನಡೆಸಬೇಕು. ಅದು ಅವರನ್ನು ಅನವಶ್ಯಕವಾಗಿ ಒಲೈಸಿದಂತೆ ಎಂದು ಅರ್ಥವಲ್ಲ'' ಎಂದು. ತನ್ಮೂಲಕ ಯಾರೊಡನೆಯೂ ಮಾತಿಲ್ಲ ಎಂದ ಬುಷ್ ಮತ್ತು ಅವನನ್ನು ಆಡಿಸುವ ದುಷ್ಟಕೂಟವನ್ನು ಬಹಿರಂಗವಾಗಿಯೇ ಕಟುವಾಗಿ ವಿಮರ್ಶಿಸಿದಂತಾಗಿದೆ. ಬುಷ್‌ನ ಅಧಿಕಾರದ ಅವಧಿ ಮುಗಿಯುವ ವೇಳೆಗೆ ಅವನ ಸರ್ಕಾರದ ವಿದೇಶಾಂಗನೀತಿ ಮುಖ್ಯ ನೆಲೆಯಲ್ಲಿ ಬದಲಾಗುವ ಸೂಚನೆಗಳಿವೆ. ಈಗಾಗಲೇ ಸುನ್ನಿ ಸಿರಿಯಾ ಮತ್ತು ಷಿಯಾ ಇರಾಕಿನ ನೆರವು ಕೋರಿ ಇರಾಕಿನ ಅಂತರ್ಯುದ್ಧ ಪರಿಸ್ಥಿತಿಯನ್ನು ತಿಳಿಗೊಳಿಸುವ ಸೂಚನೆಗಳು ಬಂದಿವೆ. ಮುಳುಗುತ್ತಿರುವ ದೋಣಿಯ ಬುಷ್‌ನೊಡನೆ ಇಂಥ ಸಂದರ್ಭದಲ್ಲಿ ಆಲಿಂಗನ ಮಾಡಿಕೊಳ್ಳಲು ತವಕಿಸುವ ನಮ್ಮ ಪ್ರಧಾನಿ ಮತ್ತು ಅವರ ಸಲಹಾಧಿಕಾರಿಗಳಿಗೆ ಏನೆನ್ನಬೇಕು !

ಈ ಎಲ್ಲ ಬದಲಾವಣೆಗಳ ಸೂಚನೆಗಳ ಹಿನ್ನೆಲೆಯಲ್ಲಿ ಮುಂದುವರಿಯುವ ಸಮಸ್ಯೆ ''ಭಯೋತ್ಪಾದನೆ''ಯದು. ಭಯೋತ್ಪಾದನೆ ಎಂದರೇನು, ಎಂದು ಬ್ಲೇರ್ ಲೇಬರ್ ಪಕ್ಷವು ತನ್ನ ಕೊನೆಗಾಲದ ಭಾಷಣದಲ್ಲಿ ಮತ್ತೊಮ್ಮೆ ಅಪ್ಪಣೆ ಕೊಡಿಸಿದ್ದಾನೆ. ''ಭಯೋತ್ಪಾದನೆ ನಮ್ಮ ಜೀವನಶೈಲಿ ಮತ್ತು ಮೌಲ್ಯಗಳಿಗೆ ವಿರುದ್ಧವಾದುದು. ಇರಾಕ್‌ನಲ್ಲಿ, ಆಫಘಾನಿಸ್ಥಾನದಲ್ಲಿ ನಾವು ಹೋರಾಡುತ್ತಿರುವುದು ಈ ಭಯೋತ್ಪಾದನೆಯ ವಿರುದ್ಧ. ಅದು ಒಂದು ಐಡಿಯಾಲಜಿಯೇ ಅಲ್ಲ. ಅದು ಯಾರದೋ ಯುದ್ಧವಲ್ಲ. ಅದು ನಮ್ಮ ಆತ್ಮರಕ್ಷಣೆಯ ಹೋರಾಟ'' ಎನ್ನುತ್ತಾನೆ. ಇರಾಕ್‌ನಲ್ಲಿರುವ ಬ್ರಿಟಿಷ್ ಸೇನೆಯ ದಂಡನಾಯಕ ಸೇನೆಯೊಂದಿಗೆ ಬೇಗ ಮನೆಗೆ ಹಿಂದಿರುಗುವುದು ಒಳ್ಳೆಯದು ಎಂದಿದ್ದಕ್ಕೆ ಇದು ಬ್ಲೆಯರ್ ನೀಡಿದ ಪ್ರತಿಕ್ರಿಯೆ. ಭಯವನ್ನು ಯಾರಲ್ಲೋ ಉದ್ದೇಶಪೂರ್ವಕವಾಗಿ ಉತ್ಪಾದಿಸಿದರೆ ಅದು ಭಯೋತ್ಪಾದನೆ. ಅದರ ಬಿಸಿ ತಟ್ಟಿದವರು ಪ್ರತಿಕ್ರಿಯಿಸಿದರೆ ಅವರು ಭಯೋತ್ಪಾದಕರಾಗುತ್ತಾರೋ ಅಥವಾ ಅದು ಅವರದೇ ಸ್ವಂತ ಜೀವನ ಶೈಲಿ, ಮತಧರ್ಮ ಮೌಲ್ಯಗಳನ್ನು ರಕ್ಷಿಸಿಕೊಳ್ಳುವ ಹೋರಾಟವೆನಿಸಿಕೊಳ್ಳುತ್ತದೆಯೋ ? ೬,೫೫,೦೦೦ ಇರಾಕಿಗಳು ಈ ಪ್ರಸ್ತುತ ಯುದ್ಧದಲ್ಲಿ ಮತ್ತು ಅದು ಸೃಷ್ಟಿಸಿದ ಕೋಮು ದ್ವೇಷದ ಅಂತರ್ಯುದ್ಧದಲ್ಲಿ ಸತ್ತಿದ್ದಾರೆ. ರಾಷ್ಟ್ರದ ಐಕ್ಯತೆಯನ್ನು ಕಾಪಾಡಿಕೊಳ್ಳುತ್ತಾ, ಧರ್ಮ ನಿರಪೇಕ್ಷೆಯ ಪ್ರಜಾಪ್ರಭುತ್ವ ಮಾದರಿಯೊಂದನ್ನು, ಹಿಂದುಳಿದ, ಗುಡ್ಡಗಾಡುಜನ, ಮತಾಂಧತೆ ತುಂಬಿದ ಪ್ರಾಚೀನ ರಾಷ್ಟ್ರವೊಂದರಲ್ಲಿ ಸ್ಥಾಪಿಸಲು ಸರ್ವಾಧಿಕಾರಿಯೊಬ್ಬ ಹೆಣಗಾಡಿದಾಗ ಘಟಿಸಿದ ಖಂಡನಾರ್ಹ ಸ್ವಜನ ಹತ್ಯೆಯ ಪ್ರಮಾಣ-ಪ್ರಮಾದವನ್ನು ಮೀರುವ ಈ ನರಹತ್ಯೆಗೆ, ಜಗತ್ತಿನ

# ಮುಂಬಯಿಯ ಒಂದು ಕಾಲದ ಅಚ್ಚರಿ 'ತಾಯಿನುಡಿ' ಮಾಸ ಪತ್ರಿಕೆ

ತೊಂಭತ್ತರ ದಶಕದ ತನಕ ಮುಂಬಯಿ ಮಹಾನಗರದಲ್ಲಿ ಪ್ರಗತಿಪರ ಧೋರಣೆಯಿಂದ ಹೊರತರುತ್ತಿದ್ದ ಏಕಮೇವ ಸ್ವತಂತ್ರ ಪತ್ರಿಕೆ 'ತಾಯಿನುಡಿ'ಯ ಸಂಪಾದಕ ಡಿ. ಕೆ. ಮೆಂಡನ್‌ರಿಗೆ ಕಳೆದ ದಿನಗಳನ್ನು ಇದೀಗ ಮನೆಯಲ್ಲೇ ಕೂತು ಮೆಲುಕುಹಾಕುವ ಸ್ಥಿತಿ. ಹೊರಗೆ ಹೆಚ್ಚು ತಿರುಗಾಡಲಾಗದ ಅಸಹಾಯಕತೆ. ಇತ್ತೀಚೆಗೆ ಮೆಂಡನ್‌ರನ್ನು ಕಂಡು 'ಹೊಸತು'ಗಾಗಿ ಮಾತನಾಡಿಸಲಾಯಿತು. ಅನಕೃ-ನಿರಂಜನರ ಅಭಿಮಾನಿಯಾಗಿರುವ ಮೆಂಡನ್ ನವಕರ್ನಾಟಕದ ಜೊತೆ ಆರಂಭದಿಂದಲೂ ನಂಟು ಇರಿಸಿದವರೇ ಆಗಿದ್ದಾರೆ.

ಶ್ರೀನಿವಾಸ ಜೋಕಟ್ಟೆ

**ಹೊ**ರನಾಡ ಕನ್ನಡಿಗರ ಪ್ರೀತಿಯ ಪತ್ರಿಕೆ 'ತಾಯಿನುಡಿ' ತೊಂಭತ್ತರ ದಶಕದ ತನಕ ಕರ್ನಾಟಕ ರಾಜ್ಯದ ರಾಯಭಾರಿಯಾಗಿ ಕೆಲಸ ಮಾಡುತ್ತಾ ಮುಂಬಯಿಯಲ್ಲಿ ಮಾತ್ರವಲ್ಲ, ಕರ್ನಾಟಕದಲ್ಲೂ ತನ್ನ ವಿದ್ವತ್ಪೂರ್ಣ ಲೇಖನಗಳಿಗಾಗಿ ಖ್ಯಾತಿ ಪಡೆದಿತ್ತು. ೩೧-೫-೧೯೫೬ರಂದು ಮುಂಬಯಿಯಲ್ಲಿ ಹುಟ್ಟಿದ ಈ 'ತಾಯಿನುಡಿ' ಪತ್ರಿಕೆ ನಾಲ್ಕು ದಶಕಗಳ ಕಾಲ ವಿಜೃಂಭಿಸುತ್ತಾ ಕನ್ನಡ ನಾಡು ನುಡಿ-ಸಂಸ್ಕೃತಿ-ಸಾಹಿತ್ಯಕ್ಕೆ ಮುಂಬಯಿಯಿಂದ ಬಹಳಷ್ಟು ಕೊಡುಗೆ ನೀಡಿದ್ದನ್ನು ಯಾರೂ ಮರೆಯುವಂತಿಲ್ಲ. ಪಾಟೀಲ ಪುಟ್ಟಪ್ಪನವರ ಮಾತಲ್ಲಿ ಇದು 'ಎಂಟನೆಯ ಅದ್ಭುತ.'


ಡಿ. ಕೆ. ಮೆಂಡನ್

ಒಂದು ಕಾಲಕ್ಕೆ 'ನುಡಿ' ವಾರಪತ್ರಿಕೆ ಮುಂಬಯಿಯಲ್ಲಿ ವಿಜೃಂಭಿಸಿದ್ದರೂ ಅದು ಹೆಚ್ಚು ಕಾಲ ಬಾಳಲಿಲ್ಲ. 'ನುಡಿ' ನಿಂತ ನಂತರ 'ತಾಯಿನುಡಿ' ಹೊರಬಂತು. ಅದನ್ನು ಹುಟ್ಟುಹಾಕಿ ನಾಲ್ಕು ದಶಕಗಳ ಕಾಲ ಮುನ್ನಡೆಸಿದ ಕೀರ್ತಿ ದತ್ತಾತ್ರೇಯ ಕೆ. ಮೆಂಡನ್ ಅವರಿಗೆ ಸಲ್ಲುತ್ತದೆ. ಇಂದು ಅವರಿಗೆ ೭೭ರ ಪ್ರಾಯ. ಅನಾರೋಗ್ಯದಿಂದಾಗಿ ಹೆಚ್ಚಿನ ಕಾರ್ಯಕ್ರಮಗಳಿಗೆ ಅವರಿಗೆ ಹಾಜರಾಗಲು ಕಷ್ಟವಾಗುತ್ತಿದೆ. ಆದರೂ 'ತಾಯಿನುಡಿ' ಕುರಿತಂತೆ ಮಾತನಾಡಿದರೆ ರೋಮಾಂಚನಗೊಳ್ಳುತ್ತಾರೆ. 'ತಾಯಿನುಡಿ'ಯ ದೀಪಾವಳಿ ಸಂಚಿಕೆ ಅಂದರೆ ಆ ಸಮಯದಲ್ಲಿ ಲೇಖಕರಿಗೆ ತಮ್ಮ ಬರಹ ಪ್ರಕಟವಾಗುವುದೇ ಅತ್ಯಂತ ಅಭಿಮಾನದ ಸಂಗತಿಯಾಗಿತ್ತು. ಪ್ರತೀ ದೀಪಾವಳಿ ಸಂದರ್ಭದಲ್ಲೂ ಮೆಂಡನ್ ಅದನ್ನು ಸ್ಮರಿಸುತ್ತಾರೆ. ಇಂದು ಮುಂಬಯಿಯಲ್ಲಿ ಯಾವ ದೀಪಾವಳಿ ಸಂಚಿಕೆಯೂ ಕನ್ನಡದಲ್ಲಿ ಹೊರ ಬರುತ್ತಿಲ್ಲ. 'ತಾಯಿನುಡಿ' ತಡವಾಗಿ ಬರುತ್ತಿದ್ದರೂ ಆ ದೀಪಾವಳಿ ಸಂಚಿಕೆಯಲ್ಲಿ ನಾಡಿನ ಖ್ಯಾತರೆಲ್ಲ ಸೇರುತ್ತಿದ್ದರು.

ಮುಂಬಯಿಯಲ್ಲಿ ಕನ್ನಡಿಗರ ಅನೇಕ ಸಂಘ ಸಂಸ್ಥೆಗಳಿವೆ, ಜಾತಿ ಸಂಘಗಳಿವೆ. ಇಲ್ಲಿ ಡಜನ್ನಿಗೂ ಹೆಚ್ಚಿನ ಕನ್ನಡ ಮಾಸಿಕಗಳು ಹೊರಬರುತ್ತವೆ. ಹೆಚ್ಚಿನವುಗಳನ್ನು ಜಾತಿ ಸಂಘಗಳೇ ತರುತ್ತಿವೆ. (ಆದರೂ ಅವರ ಕನ್ನಡಾಭಿಮಾನವನ್ನು ಪ್ರಶ್ನಿಸುವಂತಿಲ್ಲ.) ಇಂತಹ ಸಮಯದಲ್ಲಿ ಐವತ್ತು-ಅರವತ್ತರ ದಶಕದಲ್ಲೇ ಸ್ವತಂತ್ರವಾದ ಪತ್ರಿಕೆಯೊಂದನ್ನು ತಂದು ಪ್ರಗತಿಪರ ಆಶಯಗಳಿಗೆ ಒತ್ತುನೀಡುವ ಸಾಹಸಕ್ಕೆ ಇಳಿದಿದ್ದ ಡಿ. ಕೆ. ಮೆಂಡನ್‌ರು ನಿಜಕ್ಕೂ ಪ್ರಶಂಸಾರ್ಹರು.

ಮುಂಬಯಿ ವಿಶ್ವವಿದ್ಯಾಲಯದಲ್ಲಿ ೨೫ ಲಕ್ಷ ಡಿಪಾಸಿಟ್ ಇಟ್ಟು 'ತುಳುಪೀಠ' ರಚನೆಗೆ ಎಂಭತ್ತರ ದಶಕದಲ್ಲಿ ಕೆಲವರು ಸಿದ್ಧತೆ ನಡೆಸಿದಾಗ 'ತಾಯಿನುಡಿ' ಮಾತ್ರ ದಿಟ್ಟವಾಗಿ ಮುಂಬಯಿಯಲ್ಲಿ ತುಳುಪೀಠದ ಅಗತ್ಯವಿಲ್ಲ, ಅದು ಮುಂದೊಂದು ದಿನ ವಿಶ್ವವಿದ್ಯಾಲಯದ ಕನ್ನಡ ಪೀಠಕ್ಕೆ ಧಕ್ಕೆ ತರಬಹುದು ಎಂದು ದಿಟ್ಟವಾಗಿ ಬರೆದು ಅನೇಕರ ಸಿಟ್ಟಿಗೆ ಕಾರಣರಾದರು, ಕನ್ನಡ ಪ್ರೇಮಿ ಮೆಂಡನ್. ಆ ದಿನಗಳಲ್ಲಿ 'ತುಳುಪೀಠ' ರಚನೆಯನ್ನು ವಿರೋಧಿಸಿದ್ದರಿಂದ ಅವರ ಕಾಲರ್‌ಪಟ್ಟಿ ಕೂಡ ಹಿಡಿದದ್ದಿದೆ, ಆದರೆ ಮೆಂಡನ್ ಹಿಂದೆ ಸರಿಯಲಿಲ್ಲ. ಅಂತೂ 'ತುಳುಪೀಠ'ಕ್ಕೆ ಮುಂದಾದವರು ಆ ಯೋಜನೆಯನ್ನು ಕೈಬಿಟ್ಟರು.

ಟೈಮ್ಸ್ ಆಫ್ ಇಂಡಿಯಾ ಗ್ರೂಪಿನ ಅಂದಿನ ಜನರಲ್ ಮ್ಯಾನೇಜರ್ ಜೆ. ಸಿ. ಜೈನ್ ಅವರನ್ನು ಡಿ. ಕೆ. ಮೆಂಡನ್ ಐವತ್ತರ ದಶಕದಲ್ಲಿ ಭೇಟಿಯಾಗಿ ಮುಂಬಯಿಯಿಂದ 'ಕರ್ನಾಟಕ ಟೈಮ್ಸ್' ಕನ್ನಡ ದಿನಪತ್ರಿಕೆ ಹೊರತರುವ ಕುರಿತು ಚರ್ಚಿಸಿದರು. ಆದರೆ ಜೈನ್ ಆ ಕುರಿತು ಉದಾಸೀನ ತೋರಿದರು. ಕೊನೆಗೆ ಮೆಂಡನ್ ಅವರು ಆತ್ಮವಿಶ್ವಾಸ ದಿಂದಲೇ ತಾನೇ 'ತಾಯಿನುಡಿ' ಎನ್ನುವ ಪತ್ರಿಕೆ ಹೊರತಂದು ಅದನ್ನು ನಾಲ್ಕು ದಶಕಗಳ ಕಾಲ ನಡೆಸಿದರು.

ರಾತ್ರಿಶಾಲೆಯಲ್ಲಿ ಓದಿ ಮೆಟ್ರಿಕ್ ಮುಗಿಸಿದ ಮೆಂಡನ್‌ರು ಹಿಂದಿ ಭಾಷೆ ಕುರಿತು ಆಸಕ್ತರಾದರು, 'ಸಾಹಿತ್ಯರತ್ನ' ಪದವಿ ಗಳಿಸಿದರು. ಇಪ್ಪತ್ತಮೂರು ವರ್ಷ ಸಿದ್ಧಾರ್ಥ ಕಾಲೇಜಿನಲ್ಲಿ ಹಿಂದಿ ಅಧ್ಯಾಪಕರೂ ಆಗಿದ್ದರು.

ಮೆಂಡನ್ ವಿದ್ಯಾರ್ಥಿಯಾಗಿದ್ದ ದಿನಗಳು... ಅಂದು ನೆಹರೂ ಯೆರವಾಡ ಜೈಲಿನಿಂದ ಮುಂಬಯಿಯ ವಿ. ಟಿ. ರೈಲ್ವೆ ಸ್ಟೇಷನ್‌ಗೆ ಬಂದು ಭಾಷಣ ಮಾಡುವವರಿದ್ದರು. ಜೊತೆಗೆ ಸಾರ್ವಜನಿಕ ಸನ್ಮಾನ. ಮೆಂಡನ್ ನೆಹರೂರ ಕಾಲು ಹಿಡಿಯಲು ಹೋದಾಗ 'ನೀಚೆ ಮತ್ ದೇಖೋ, ಊಪರ್ ದೇಖೋ' ಎಂದರು. ಹುಡುಗ ಮತ್ತೆಂದೂ ಕೆಳನೋಡಲಿಲ್ಲ.

ಹಿಂದಿ ಅಧ್ಯಾಪಕರಾಗಿದ್ದ ಮೆಂಡನ್‌ರು ಮೊದಲು 'ವಿಶ್ವಾಮಿತ್ರ', ನಂತರ 'ವಿಕಾಸ'ದಲ್ಲಿ (ಹಿಂದಿ) ಸೇರಿದರು. ಆಮೇಲೆ ಕೆ. ಎ. ಅಬ್ಬಾಸರ 'ಸರ್ಗಮ್' ಹಿಂದಿ ಮಾಸಿಕಕ್ಕೆ ಪ್ರವೇಶ. ಮುಲ್ಕ್‌ರಾಜ್ ಆನಂದ್, ಕಿಶನ್ ಚಂದರ್, ಎಂ. ಜೆ. ಜೋಗ್... ಇವರೆಲ್ಲರ ಭೇಟಿ. ಆವಾಗಿನ ಶ್ರೇಷ್ಠ ಪತ್ರಿಕೆಗಳಾದ 'ನವಭಾರತ ಟೈಮ್ಸ್' ಮತ್ತು 'ಧರ್ಮ್‌ಯುಗ್' ಎಂಬ ಹಿಂದಿ ಪತ್ರಿಕೆಗಳಲ್ಲಿ ಕನ್ನಡ ಸಾಹಿತ್ಯದ ಪರಿಚಯ ಮಾಡಿದರು. ಅನಂತರ 'ಮೋನಿಟರ್' ವೀಕ್ಲಿಯಲ್ಲಿ ಪೇಜ್ ಲೇಔಟ್‌ಗೆ ಸಂಪಾದಕರಾದ ವಿನೋದ್‌ರಾವ್‌ಗೆ ಸಹಾಯಕರಾದರು. 'ಬಾಂಬೆ ಯೂನಿಯನ್ ಆಫ್ ಜರ್ನಲಿಸ್ಟ್'ನ ಸಂಸ್ಥಾಪಕ ಹಾಗೂ 'ಟೈಡ್' ಎಂಬ ಇಂಗ್ಲಿಷ್ ವಾರಪತ್ರಿಕೆಯ ಮತ್ತು 'ಫೌಂಡೇಶನ್' ಸಂಪಾದಕರಾಗಿದ್ದ ಕನ್ನಡಿಗ ಶ್ರೀ ಯು. ಜಿ. ಅವರ ಗರಡಿಯಲ್ಲಿ ಹತ್ತು ಹಲವು ಅನುಭವಗಳನ್ನು ಪಡೆದ ಕೀರ್ತಿ ಕೂಡ ಇವರದ್ದಾಗಿದೆ.

ಕನ್ನಡ ಸಾಹಿತ್ಯವನ್ನು ಈ ರೀತಿ ಇತರ ಭಾಷೆಗೆ ಪರಿಚಯಿಸುತ್ತಾ ಹೋದಂತೆ ಮತ್ತೆ ಕನ್ನಡದಲ್ಲೇ ಉಳಿಯಬೇಕು, ಬೆಳೆಯಬೇಕು ಎನ್ನುವ ಆಸೆ ಪ್ರಬಲವಾಯಿತು. ಮೆಂಡನ್ ಕನ್ನಡದತ್ತ ಬಂದರು. ಸರಿ, 'ತಾಯಿನುಡಿ' ಪತ್ರಿಕೆ ಬಂದೇಬಿಟ್ಟಿತು. ಆರಂಭದ ಎರಡು ಮೂರು ವರ್ಷಗಳು ವಾರಪತ್ರಿಕೆಯಾಗಿ ಬಂದರೂ, ನಂತರದ ದಿನಗಳಲ್ಲಿ 'ತಾಯಿನುಡಿ' ಮಾಸಿಕವಾಗಿ ರೂಪುಗೊಂಡಿತು.

ಆಚಾರ್ಯ ಅತ್ರೆಯವರ ಮರಾಠಿ ಕ್ರಾಂತಿಕಾರಿ ನಾಟಕ 'ಗುಮಾಸ್ತೆ'ಯನ್ನು ಮೆಂಡನ್ ಹಿಂದಿಗೆ ರೂಪಾಂತರಿಸಿದರು. ಮಹಾರಾಷ್ಟ್ರ ರಾಜ್ಯಮಟ್ಟದ ನಾಟಕ ಸ್ಪರ್ಧೆಯಲ್ಲಿ ಮೆಂಡನ್ ತಂಡ ಈ ನಾಟಕವನ್ನು ಆಡಿತ್ತು. ಆದರೆ 'ಕ್ರಾಂತಿಕಾರಿ' ಎಂಬ ನಿಟ್ಟಿನಲ್ಲಿ ಇದಕ್ಕೆ ಬಹುಮಾನ ಸಿಗಲಿಲ್ಲ. ಕೊನೆಗೆ ಮೆಂಡನ್‌ರು ನಾಟಕ ಸ್ಪರ್ಧೆಯ ನಿಯಮಗಳನ್ನೇ ಬದಲಾಯಿಸಿಬಿಡುವಲ್ಲಿ ಯಶಸ್ಸು ಪಡೆದರು. ತನ್ನ ತಂಡದಿಂದ ಈ ನಾಟಕವನ್ನು ಸುಮಾರು ಇಪ್ಪತ್ತೈದಕ್ಕೂ ಹೆಚ್ಚುಬಾರಿ ಪ್ರದರ್ಶಿಸಿದ್ದರು.

ಎರಡು ಬಾರಿ ಮುಂಬಯಿ ಕನ್ನಡಿಗರ ಸ್ನೇಹ ಸಮ್ಮೇಳನವನ್ನು ಅದ್ದೂರಿಯಾಗಿ ನೆರವೇರಿಸಿದ ಕೀರ್ತಿ ಡಿ. ಕೆ. ಮೆಂಡನ್‌ರದ್ದು. ೧೯೬೨ರಲ್ಲಿ ನಡೆಸಿದ ಮುಂಬಯಿ ಕನ್ನಡಿಗರ ಸ್ನೇಹ ಸಮ್ಮೇಳನ ಇಲ್ಲಿಯ ಇತಿಹಾಸದಲ್ಲೇ ಅಭೂತಪೂರ್ವವಾದುದು.



*'ತಾಯಿನುಡಿ' ಸಂಪಾದಕ ಡಿ. ಕೆ. ಮೆಂಡನ್, ಹಾ.ಮಾ.ನಾಯಕ ಮತ್ತಿತರರು*

ಆಗಸ್ಟ್ ೨೩, ೧೯೮೧ರಂದು ಆಗಿನ ಪ್ರಮುಖ ವಾರಪತ್ರಿಕೆ 'ಪ್ರಜಾಮತ'ದಲ್ಲಿ ಡಾ|| ಹಾ. ಮಾ. ನಾಯಕರು ತಮ್ಮ ಅಂಕಣದಲ್ಲಿ 'ಮುಂಬಯಿ : ತಾಯಿನುಡಿ' ಬಗ್ಗೆ ಬರೆಯುತ್ತಾ, ''ಕನ್ನಡದಲ್ಲಿ ಒಂದು ನಿಯತಕಾಲಿಕ ಇಪ್ಪತ್ತೈದು ವರ್ಷ (೧೯೮೧ರಲ್ಲಿ ಅದು ಬೆಳ್ಳಿಹಬ್ಬ ಆಚರಿಸಿತ್ತು) ನಡೆದುಕೊಂಡು ಬಂದಿದೆ ಎಂದರೆ ಅದು ದೊಡ್ಡ ಸಾಹಸವೇ ಸರಿ. ಅದರಲ್ಲೂ ಮುಂಬಯಿಯಿಂದ ಆ ಪ್ರಕಟಣೆ ಹೊರಡುತ್ತದೆಂದರೆ ಆಶ್ಚರ್ಯವೆನಿಸ ಬಹುದು. ಧ್ಯೇಯ ಸಾಧನೆಗಾಗಿ ನಿಂತವರು ಹೇಗೆ ಕೆಲಸ ಮಾಡ ಬಹುದು ಎನ್ನುವುದಕ್ಕೆ 'ತಾಯಿನುಡಿ' ಬಳಗದವರ ಕಾಲು ಶತಮಾನದ ದುಡಿಮೆಯೇ ಸಾಕ್ಷಿ. ಅವರನ್ನು ಕನ್ನಡಿಗರೆಲ್ಲ ಈ ಹೊತ್ತು ಅಭಿನಂದಿಸಬೇಕು, ಬೆಂಬಲಿಸಬೇಕು'' ಎಂದು ಪ್ರೀತಿಯಿಂದ ಬರೆದಿದ್ದರು.

ಡಿ. ಕೆ. ಮೆಂಡನ್‌ರು ಅ. ನ. ಕೃ. ಮತ್ತು ನಿರಂಜನರ ತೀವ್ರ ಅಭಿಮಾನಿಗಳು. ಪ್ರಗತಿಶೀಲ ಪಂಥದ ಸಾಹಿತಿಗಳೆಂದರೆ ಮೆಂಡನ್‌ರಿಗೆ ಅಚ್ಚುಮೆಚ್ಚು.

ತಾಯಿನುಡಿಗೆ ಇಪ್ಪತ್ತೈದು ವರ್ಷಗಳು ಪೂರ್ಣಗೊಂಡಾಗ (೧೯೮೧) ಮೆಂಡನ್‌ರ ಸಂಪಾದಕೀಯ ಹೀಗಿತ್ತು – ''ತಾಯಿನುಡಿಗೆ ೨೫ ವರ್ಷಗಳು ಪೂರ್ಣ ವಾದುವು. ಇದು ಇಪ್ಪತ್ತಾರನೇ ವರ್ಷದ ಮೊದಲ ಸಂಚಿಕೆ. ಸಾಮಾನ್ಯವಾಗಿ, ಈ ಸಂಚಿಕೆ ಒಂದು ವಾರ್ಷಿಕ ವಿಶೇಷ ಸಂಚಿಕೆಯಾಗಿ ಪ್ರಕಟವಾಗಬೇಕಾಗಿತ್ತು. ವಿಶೇಷ ಸಂಚಿಕೆಯಿರಲಿ, ಸಾಧಾರಣ ಸಂಚಿಕೆ ಯಾದರೂ ಪ್ರಕಟವಾಗಬಹುದೋ ಎಂಬ ಸಂಶಯದೊಂದಿಗೆ ಕಡೆಗೂ ಹೊರಬರುತ್ತಿದೆ...''

ಇಷ್ಟೇ ಅಲ್ಲ, ಮೆಂಡನ್ ಮುಂದುವರೆದು ಬರೆಯುತ್ತಾರೆ – ''ನಾವೇನೂ ನಿರಾಶಾ ವಾದಿಗಳಲ್ಲ, ಆದರೆ ಯಾವೊಂದೂ ಆಸೆಗೆ ಆಸ್ಪದವಿಲ್ಲದಾಗ ಇದು ನಮ್ಮ ಇಪ್ಪತ್ತೈದು ವರ್ಷಗಳ ಅನುಭವವಾಗಿ ಈ ಹುಚ್ಚು ನಮ್ಮನ್ನು ಬಹುದಿನ ಬದುಕಿಸುವಂತಿಲ್ಲ ಎಂಬುದನ್ನು ನಾವು ಮುಚ್ಚಿಡಲಾಗುವುದಿಲ್ಲ...''

''ಮೆಂಡನ್ ಕುಟುಂಬ ಬೊಂಬಾಯಿಗೆ ಹೋಗಿಬರುವ ಸಾಹಿತ್ಯ ಬಂಧುಗಳಿಗೆ ಒಂದು ಸ್ವಾಗತ ಸಮಿತಿ ಇದ್ದಹಾಗೆ'' ಎಂದು ಲೇಖಕ ಅಂಶುಮಾಲಿ ಹೇಳಿದ್ದು ಸರಿಯಾಗಿಯೇ ಇದೆ. ಆ ದಿನಗಳಲ್ಲಿ ಮುಂಬಯಿಗೆ ಯಾರೇ ಕನ್ನಡಿಗ ಭೇಟಿ ನೀಡಿದ್ದರೂ ಮೆಂಡನ್‌ರನ್ನು ಕಾಣದೆ ವಾಪಸು ಹೋಗುತ್ತಿರಲಿಲ್ಲ.

ಶೀಲ, ಸತ್ವ ಪ್ರತಿಪಾದಿಸಲು ಪ್ರಯತ್ನಿಸುತ್ತಾ ಬಂದಿರುವ 'ತಾಯಿನುಡಿ'ಗೆ ಅಲ್ಲಲ್ಲಿ ಹಿತ ಶತ್ರುಗಳು. ಆದರೂ ಮೆಂಡನ್ ಎದೆಗುಂದದೆ ಪತ್ರಿಕೆಯನ್ನು ಮುನ್ನಡೆಸಿದ್ದರು. ವ್ಯಾಸರಾಯ ಬಲ್ಲಾಳ, ರಾಮಚಂದ್ರ ಉಚ್ಚಿಲ, ಹಾ. ಮಾ. ನಾಯಕ, ಹಂ. ಪ. ನಾ., ಗೌರೀಶ ಕಾಯ್ಕಿಣಿ... ಹೀಗೆ ಬಹುದೊಡ್ಡ ಸಾಹಿತಿಗಳ ಬಳಗವೇ 'ತಾಯಿನುಡಿ'ಗೆ ಬರೆಯುತ್ತಿತ್ತು.

೧೯೯೧ರ ಸುಮಾರಿಗೆ ಮೆಂಡನ್‌ರು ವರ್ಲಿಯಲ್ಲಿದ್ದ ತಮ್ಮ ಪ್ರೆಸ್ಸನ್ನು ಮಾರಿದರು. ಅನಂತರ ಗೋರೆಗಾಂವ್‌ನತ್ತ ಬಂದರು. ಅಲ್ಲಿ ಕೆಲವು ಸಮಯ 'ತಾಯಿನುಡಿ'ಯನ್ನು ಮತ್ತೆ ಜೀವಂತ ಇರಿಸಲು ಪ್ರಯತ್ನಿಸಿದರು. ೧೯೯೨ರಲ್ಲಿ ದೀಪಾವಳಿ ಸಂಚಿಕೆಯನ್ನು ತಂದರು. ಆದರೆ ಕ್ರಮೇಣ ಅವರಿಗೆ ಪತ್ರಿಕೆ ನಡೆಸಲು ಕಷ್ಟವಾಯಿತು. ಸಂಚಿಕೆಗಳು ಹೊರಬರುವುದು ಕಡಿಮೆಯಾಯಿತು. ಈ ಹೋರಾಟದಲ್ಲಿ ಮೆಂಡನ್‌ರಿಗೆ ನೆರವಾದವರು ಅವರ ಸಹೋದರರಾದ ದಿ|| ರಘುನಾಥ ಕೆ. ಮೆಂಡನ್ ಮತ್ತು ಸೋಮನಾಥ್ ಕೆ. ಮೆಂಡನ್.

ಎಂಭತ್ತರ ದಶಕದಿಂದ 'ತಾಯಿನುಡಿ' ನನಗೆ ಚಿರಪರಿಚಿತ. ಆವಾಗ ನಾನಿನ್ನೂ ಹುಡುಗನಾಗಿದ್ದೆ. ವರ್ಲಿಯ 'ತಾಯಿನುಡಿ' ಆಫೀಸ್‌ಗೆ ಹೋಗಿ ಅದೆಷ್ಟೋ ಸಲ ಮೆಂಡನ್ ಜೊತೆ ಊಟಮಾಡುತ್ತಿದ್ದೆ, ಪತ್ರಿಕೆಗೆ ಲೇಖನಗಳ ಚರ್ಚೆ ಮಾಡುತ್ತಿದ್ದೆ. ಬೇರೆ ಬೇರೆ ಕಾವ್ಯನಾಮಗಳಲ್ಲಿ ವಿವಾದಾತ್ಮಕ ಬರಹಗಳನ್ನು ಬರೆಯುತ್ತಿದ್ದೆ. ಅದು ಮೆಂಡನ್‌ರಿಗಲ್ಲದೆ ಇನ್ಯಾರಿಗೂ ತಿಳಿಯುತ್ತಿರಲಿಲ್ಲ. ಪ್ರಗತಿಪರರು, ಕಮ್ಯುನಿಸ್ಟರು, ಸೋಶಿಯಲಿಸ್ಟರು, ಸುಧಾರಣಾ ವಾದಿಗಳು... ಮೆಂಡನ್‌ರಲ್ಲಿ ಇವರೆಲ್ಲರ ಸಮ್ಮಿಲನವನ್ನು ನಾನು ಗಮನಿಸಿದ್ದೇನೆ. ಅವರ ಗರಡಿಯಲ್ಲಿ ಪಳಗಿದ ಹೆಮ್ಮೆ ನನಗಿದೆ. ಕನ್ನಡ ಪತ್ರಿಕೋದ್ಯಮದ ೧೪೫ನೇ ವರ್ಷಾಚರಣೆಯ ಕೊನೆಗೆ (೧೯೯೧) ಪತ್ರಿಕಾ ಅಕಾಡೆಮಿಯು ಬೆಂಗಳೂರಿನಲ್ಲಿ ನಡೆಸಿದ ವಿಚಾರ ಸಂಕಿರಣದಲ್ಲಿ ೨೫ ವರ್ಷ ತುಂಬಿದ ಕನ್ನಡ ಪತ್ರಿಕೆಗಳಿಗೆ ಸನ್ಮಾನಿಸುವ ಯೋಜನೆ ಹಾಕಿಕೊಂಡಾಗ 'ತಾಯಿನುಡಿ' ಪರವಾಗಿ ಸನ್ಮಾನ ಸ್ವೀಕರಿಸಲು ಮೆಂಡನ್ ನನ್ನನ್ನೇ ಬೆಂಗಳೂರಿಗೆ ಕಳುಹಿಸಿದ್ದರು ಎನ್ನುವುದನ್ನು ನೆನೆಯುವಾಗಲೆಲ್ಲ ನಾನು ಪುಳಕಗೊಳ್ಳುವುದಿದೆ.

ಇಂದು ಮೆಂಡನ್ ಮತ್ತು ಅವರ ಪತ್ನಿ ಇಬ್ಬರೇ ಅಂಧೇರಿಯ ತಮ್ಮ ಮನೆಯಲ್ಲಿದ್ದಾರೆ. ಹೋದಾಗಲೆಲ್ಲ ನವಕರ್ನಾಟಕದ ಕುರಿತು ಅಭಿಮಾನದಿಂದ ಕೇಳುತ್ತಾರೆ. 'ಹೊಸತು'ಗಾಗಿ ಲೇಖನ ಬರೆಯಬೇಕು ಎಂದಾಗ ಹಿಗ್ಗಿ ಹಿಂದಿನದೆಲ್ಲಾ ಸ್ಮರಿಸುತ್ತಾ ಮೆಂಡನ್ ಭಾವಪರವಶರಾಗುತ್ತಾರೆ.


**ಶ್ರೀನಿವಾಸ ಜೋಕಟ್ಟೆ**

ಪತ್ರಕರ್ತರು, ಗೋರೈ ಸುಯೋಗ್, ಫ್ಲಾಟ್ ನಂ. ೨೦೧, ಪ್ಲಾಟ್ ನಂ. ೯೧, ಗೋರೈ ಸೆಕೆಂಡ್ ಆಫ್ ಗೋರೈ ಲಿಂಕ್ ರೋಡ್, ಬೊರಿವಿಲಿ (ಪಶ್ಚಿಮ), ಮುಂಬಯಿ - ೪೦೦ ೦೯೨


---

*೨೩ನೇ ಪುಟದಿಂದ (ವಿಶ್ವವೀಕ್ಷಣೆ)*

ಪ್ರಜಾಪ್ರಭುತ್ವವನ್ನು ಗುತ್ತಿಗೆ ತೆಗೆದುಕೊಂಡ, ಅತಿ ನಾಗರಿಕರೆಂದು ಬೀಗುವ ರಾಷ್ಟ್ರಗಳ ದುಷ್ಟಕೂಟ, ಅಲ್ಲಿ ಈಗ ಬೆಳೆಯುತ್ತಿರುವ ಅಂತರ್ಯುದ್ಧಕ್ಕೆ, ರಾಷ್ಟ್ರವಿಭಜನೆಗೆ, ಕೋಮುದ್ವೇಷಕ್ಕೆ ಹೊಣೆ ಹೊರಬೇಕು. ಇಂಗ್ಲೆಂಡಿನಲ್ಲಿ ಬ್ಲೇಯರ್ ಸಮೇತ ಎಲ್ಲ ಬಿಳಿಯ ನಾಯಕರೂ ಅಲ್ಲಿಯ ಮುಸ್ಲಿಂ ಮಹಿಳೆ ಬುರಖಾ ಧರಿಸುವುದನ್ನು ಖಂಡಿಸುತ್ತಾ, ಏಕರೂಪ ಸಂಸ್ಕೃತಿಯ ಬಗ್ಗೆ ಒತ್ತಾಯಿಸುತ್ತಿದ್ದಾರೆ. ಅಲ್ಲಿನ ಅಲ್ಪಸಂಖ್ಯಾತರಲ್ಲಿ ಭಯೋತ್ಪಾದನೆ ಮಾಡುತ್ತಿದ್ದಾರೆ. ಆಂತರಿಕವಾಗಿ ಇದೇ ಸಮಸ್ಯೆಯನ್ನು ಎದುರಿಸುತ್ತಿರುವ ನಾವೂ ಆಂತರಿಕವಾಗಿ ಎಲ್ಲ ವಿಧದ ಭಯೋತ್ಪಾದನೆಯ ಬಗೆಗೂ ಗಂಭೀರವಾಗಿ ಚಿಂತಿಸಬೇಕು.

ಭಾರತದ ಶಶಿ ತರೂರ್ ದಕ್ಷಿಣ ಕೊರಿಯದ ಮತ್ತೊಬ್ಬ ಶಶಿಯ ವಿರುದ್ಧ (ಬಾನ್ ಕೀ-ಮೂನ್) ವಿಶ್ವ ಸಂಸ್ಥೆಯ ಮಹಾಕಾರ್ಯದರ್ಶಿಯ ಸ್ಥಾನಕ್ಕೆ ಭಾರತದ ಪರವಾಗಿ ಸ್ಪರ್ಧಿಸಿ ಸೋತದ್ದು ಅಂಥದ್ದೇನೂ ಮಹತ್ವದ ವಿಷಯವಲ್ಲ. ಅವರು ಒಬ್ಬ ಇಂಗ್ಲಿಷ್ ಲೇಖಕರೆಂದು ಮಾತ್ರ ಇಂಗ್ಲಿಷ್ ಸಾಹಿತ್ಯಪ್ರಿಯರಿಗೆ ತಿಳಿದಿದ್ದವರು. ವಿಶ್ವ ಸಂಸ್ಥೆಯ ಅಧೀನ ಕಾರ್ಯದರ್ಶಿಯಾಗಿಯೂ ಅವರೇನೂ ಅಂತಹ ರಾಯಭಾರಿ ಅನುಭವವನ್ನು ಪಡೆದವರಾಗಿರಲಿಲ್ಲ. ಅವರು ಸ್ವಂತ ಜವಾಬ್ದಾರಿಯಿಂದ ಸ್ಪರ್ಧಿಸಿದ್ದು, ತೀರ ತಡವಾಗಿ ಭಾರತ ಸರ್ಕಾರ ಅವರ ಬೆಂಬಲಕ್ಕೆ ನಿಂತಿದ್ದು. ಆದರೆ ನಮಗೆ ಮುಖ್ಯವಾದದ್ದೆಂದರೆ ಈ ಬಾರಿಯೂ ಮತ್ತೊಬ್ಬ ಅ.ಸಂ.ಸಂ. ಬಾಲಬಡುಕ ರಾಷ್ಟ್ರದವರೇ ಮಹಾ ಕಾರ್ಯದರ್ಶಿಯಾಗಿ ಆಯ್ಕೆಯಾದದ್ದು. ಅ.ಸಂ.ಸಂ. ನಮಗೆ ಬೆಂಬಲ ನೀಡಿಲ್ಲವೆಂದು ಕೊರಗಿ ಪ್ರಯೋಜನ ವಿಲ್ಲ. ಆದರೆ ಆ ರಾಷ್ಟ್ರದ ಬೆಂಬಲವಿಲ್ಲದೆ ಯಾರೂ ಮಹಾಕಾರ್ಯದರ್ಶಿಯಾಗಲಾರ ಎಂಬುದೇ ವಿಶ್ವ ಸಂಸ್ಥೆಯ ದುರಂತ. ಈತ ಅಧಿಕಾರ ವಹಿಸಿಕೊಳ್ಳು ತ್ತಿರುವ ಕಾಲ ಬಹಳ ಬಿಕ್ಕಟ್ಟಿನದು. ವಿಶ್ವಸಂಸ್ಥೆಯ ಆಣತಿ ಇಲ್ಲದೆ ಇರಾಕಿನ ವಿರುದ್ಧ ಯುದ್ಧಕ್ಕೆ ಮುಂದಾದವರು. ವಿಶ್ವ ಸಂಸ್ಥೆಯ ಸಹಾಯವನ್ನು ಈಗ ಮರ್ಯಾದೆಯಿಂದ ಇರಾಕಿನಿಂದ ಹೊರಬರಲು ಬಯಸುತ್ತಾರೆ. ಇರಾನ್, ಸಿರಿಯಾ, ಉತ್ತರ ಕೊರಿಯಾ ವಿರುದ್ಧ ವಿಶ್ವಸಂಸ್ಥೆಯನ್ನು ಉಪಯೋಗಿಸಿಕೊಂಡು ಆಕ್ರಮಣಕ್ಕೂ ಮುಂದಾಗಬಹುದು. ತನ್ನ ಸ್ವದೇಶವಾದ ದಕ್ಷಿಣ ಕೊರಿಯಾದ ಹಿತಾಸಕ್ತಿಯನ್ನೇ ಮುಂದಾಗಿಟ್ಟುಕೊಳ್ಳದೆ, ಪಕ್ಷಪಾತವಿಲ್ಲದೆ ಕೊರಿಯಾ ಪರ್ಯಾಯ ದ್ವೀಪದ ಸಮಸ್ಯೆಯ ಬಗ್ಗೆ ಈ ಹೊಸ ಮಹಾಕಾರ್ಯದರ್ಶಿ ನಡೆದುಕೊಳ್ಳಬಲ್ಲರೇ ಎಂಬುದೇ ಸವಾಲು. ದಕ್ಷಿಣ ಕೊರಿಯವೇ ಉತ್ತರ ಕೊರಿಯದ ಬಗ್ಗೆ ಭ್ರಾತೃತ್ವ ಬಾಂಧವ್ಯ ಹೊಂದಿ ಮೃದುತ್ವ ತಳೆದಿದೆ. ಹೀಗಾಗಿ ವಿಶ್ವಸಂಸ್ಥೆಯ ಹೊಸ ಕಾರ್ಯದರ್ಶಿ ಹೇಗೆ ಕಾರ್ಯನಿರ್ವಹಣೆ ಮಾಡುತ್ತಾರೆಂದು ಕುತೂಹಲದಿಂದ ನಿರೀಕ್ಷಿಸಬಹುದು.

೨೧.೧೦.೨೦೦೬


ಕೆ. ಎಸ್. ಪಾರ್ಥಸಾರಥಿ

'ರಕ್ಷಿತಾ', ೬೦/೨, ೧೭ನೇ ಕ್ರಾಸ್, ಮಲ್ಲೇಶ್ವರಂ

ಬೆಂಗಳೂರು

# ಅರುಣನ ಗೊಂದಲ

*ಅರುಣ್‌ಗೆ ಬೇರೆ ಊರಿಗೆ ವರ್ಗವಾಗಿದೆ. ಮಿಲಿಯೂ ವರ್ಗ ಮಾಡಿಸಿಕೊಂಡು ಹೊರಡುವುದರಲ್ಲಿದ್ದಾಳೆ. ಇನ್ನೆರಡು ದಿನದಲ್ಲಿ ಅವರು ಹೊರಡಲಿದ್ದಾರೆ. ಇಂತಹ ಸನ್ನಿವೇಶದಲ್ಲಿ ಒಂದು ದಿನ ಬೆಳಿಗ್ಗೆ ಅರುಣನ ಆಫೀಸಿಗೆ ಒಂದು ಫೋನು ಬರುತ್ತದೆ. ಅದು ರೇಖಾಳದು. ''ಅರುಣ್, ನಾನು ರೇಖಾ ಮಾತಾಡ್ತಿದೀನಿ. ಇವತ್ತು ಸಾಯಂಕಾಲ ನಾಕು ಗಂಟೆಗೆ ನಿಮ್ಮ ಆಫೀಸಿನ ಹತ್ತಿರದ ಕಾಮತ್ ಹೋಟೆಲಿನಲ್ಲಿ ಸಿಕ್ತೀರಾ ? ಸ್ವಲ್ಪ ಮಾತಾಡ್ಬೇಕು.'' ಅರುಣ್‌ಗೆ ಆಶ್ಚರ್ಯ ! ಇದೇನು ? ಎದುರು ಮನೆಯಲ್ಲೇ ಇರುವವಳು ಎಂದೂ ಇಲ್ಲದೆ ಆಫೀಸಿನ ಹತ್ತಿರ ಯಾಕೆ ಭೇಟಿ ಮಾಡುತ್ತಿದ್ದಾಳೆ ? ನೋಡೋಣ, ಸಿಕ್ಕಿದಾಗ ಗೊತ್ತಾಗುತ್ತದಲ್ಲ ಅನ್ನಿಸಿ ''ಆಯ್ತು, ಬನ್ನಿ ರೇಖಾ, ಸಿಗ್ತೀನಿ'' ಅನ್ನುತ್ತಾನೆ. ಮಿಲಿಗೆ ಒಳ್ಳೆಯ ಸ್ನೇಹಿತೆಯಾದರೂ ತನ್ನ ಹತ್ತಿರ ಸೌಜನ್ಯದ, ಅತಿಥಿ ಸತ್ಕಾರದ ಮಾತುಗಳನ್ನು ಬಿಟ್ಟು ಬೇರೆ ಯಾವ ಮಾತನ್ನೂ ಆಡದ ರೇಖಾ ಇದ್ದಕ್ಕಿದ್ದಂತೆ ತನ್ನನ್ನು ಒಂಟಿಯಾಗಿ ಭೇಟಿ ಮಾಡುವ ಕಾರಣವೇನಿರಬಹುದು ಎಂಬ ಕುತೂಹಲ ಅರುಣನನ್ನು ತುಂಬಿಕೊಳ್ಳುತ್ತದೆ.*

''ಅರೂ...ಣ್... ಬಾ ಇಲ್ಲಿ, ನಂಗೆ ಈ ಬಕೆಟ್ ಎತ್ತೋಕಾಗ್ತಿಲ್ಲ... ಅರೂ...ಣ್... ಬಾ ಇಲ್ಲಿ, ಹರ್ಷನ್ನ ವಾಪಸ್ ಕರ್ಕೊಂಡ್ ಬಾ... ಅರೂ...ಣ್... ನಂಗೆ ಮಸಾಲೆ ದೋಸೆ ತಿನ್ಬೇಕೂ ಅನ್ನಿಸ್ತಿದೆ, ಕರ್ಕೊಂಡ್ ಹೋಗ್ತಿಯಾ...'' ಮಿಲಿ ತನ್ನ ಗಂಡ ಅರುಣನನ್ನು ಮಾತಾಡಿಸುವುದು ಇದೇ ತರಹ! ನಿಮಿಷಕ್ಕೊಮ್ಮೆ ಅರೂ...ಣ್... ಅರೂ...ಣ್... ಅನ್ನುತ್ತಿರುತ್ತಾಳೆ. ದೊಡ್ಡ ದನಿಯ ಅವಳು ತನ್ನ ಗಂಡನನ್ನು ಹೀಗೆ ಕರೆಯುತ್ತಿದ್ದರೆ ಬೀದಿಗೆಲ್ಲ ಕೇಳಿಸುತ್ತಿರುತ್ತದೆ. ಅರುಣನೂ ಅಷ್ಟೆ. ಅವಳು ಕರೆದಿದ್ದೇ ತಡ ಎಂಬಂತೆ ಓಡಿ ಬಂದು ಅವಳಿಗೆ ಸಹಾಯ ಮಾಡುತ್ತಾನೆ. ನಗುಮೊಗದಿಂದ ಅವಳ ಮಾತುಗಳನ್ನು ಕೇಳಿಸಿಕೊಳ್ಳುತ್ತಾನೆ.

ಅರುಣ್, ಮಿಲಿ ಗಂಡಹೆಂಡತಿಯರು ಅನ್ನುವುದಕ್ಕಿಂತ ಪ್ರಣಯಪಕ್ಷಿಗಳು ಅನ್ನುವುದೇ ಸರಿಯಾದ ಮಾತು. ಪ್ರಪಂಚದಲ್ಲಿ ತಾವಿಬ್ಬರೇ ಇರುವುದೇನೋ ಎಂಬಂತೆ, ಜೋಡಿಜೀವಗಳ ತರಹ ಬದುಕುತ್ತಾರೆ. ಬೀದಿಯಲ್ಲಿ ಅವನ ಮೂಗಿಗೇನಾದರೂ ಕಚ್ಚಿತು ಅಂದರೆ ಇವಳು ಎಲ್ಲರ ಮುಂದೆ ಅವನ ಮೂಗು ಸವರಿ ''ಏನಾಯ್ತು ಪುಟ್ಟಾ, ಜಾಸ್ತಿ ನೋವಾಗಿಲ್ಲ ತಾನೇ'' ಅನ್ನುತ್ತಾಳೆ. ಅವನ ನಗೆಚಾಟಿಕೆ ಮಾತಿಗೆ ಅವನಿಗೊಂದು ತಮಾಷೆಯ ಏಟು ಹೊಡೆಯುತ್ತಾಳೆ. ಎಲ್ಲರಿರುವಂತೆಯೇ ಅವನು ಅವಳ ಸೊಂಟ ಬಳಸುತ್ತಾನೆ, ಹೆಗಲು ತಬ್ಬುತ್ತಾನೆ. ಅವರಿಬ್ಬರ ನಡುವೆ ಕಾಳಜಿಯ ನದಿಯೊಂದು ಅಡೆತಡೆಯಿಲ್ಲದೆ ಹರಿಯುತ್ತಿದೆ ಎಂದು ಯಾರಿಗಾದರೂ ಗೊತ್ತಾಗುತ್ತದೆ. ಅವರ ಮಗು ಹರ್ಷನ ಹುಟ್ಟು ಸಹ ಅವರ ಸಲ್ಲಾಪಕ್ಕೆ ಯಾವುದೇ ರೀತಿಯ ಅಡ್ಡಿ ತಂದಂತಿಲ್ಲ. ಅದರ ಕೆಲಸಗಳನ್ನೂ ಜೊತೆಯಾಗಿ ಮಾಡುತ್ತಾ ನಗುನಗುತ್ತಿರುತ್ತಾರೆ.

ಈ ಪ್ರಣಯಪಕ್ಷಿಗಳನ್ನು ಎದುರು ಮನೆಯ ರೇಖಾ ಗಮನಿಸುತ್ತಿರುತ್ತಾಳೆ. ಪದವೀಧರೆಯಾಗಿ ಆಫೀಸೊಂದರಲ್ಲಿ ಗುಮಾಸ್ತೆಯಾಗಿ ಕೆಲಸ ಮಾಡುವ ರೇಖಾಗೆ ಎರಡು ಮಕ್ಕಳು. ಹತ್ತು ವರ್ಷದ ಮಗಳು, ನಾಲ್ಕು ವರ್ಷದ ಮಗ. ಮನೆಯಲ್ಲಿರುವುದು ಅವಳು, ಅವಳ ಗಂಡ ಶೇಖರ ಮತ್ತು ಮಕ್ಕಳು. ಅವಳಿಗಿಂತ ಮೂರು-ನಾಲ್ಕು ವರ್ಷಕ್ಕೆ ಚಿಕ್ಕವಳಾಗಿರಬಹುದಾದ ಮಿಲಿ ಮತ್ತು ಅವಳ ಗಂಡ ಅರುಣ, ತಮ್ಮ ಒಂದು ವರ್ಷದ ಮಗು ಹರ್ಷನೊಂದಿಗೆ, ರೇಖಾಳ ಎದುರು ಮನೆಗೆ ಬಾಡಿಗೆಗೆ ಬಂದು ಕೆಲವು ತಿಂಗಳಾಗಿವೆ. ಖಾಸಗಿ ಆಫೀಸುಗಳಲ್ಲಿ ಕೆಲಸ ಮಾಡುತ್ತಾ ಕೈತುಂಬ ಸಂಪಾದಿಸುವ ಅರುಣ, ಮಿಲಿಯರ ಬದುಕು ಒಂದು ದೀರ್ಘ ಮಧುಚಂದ್ರದಂತೆ ರೇಖಾಗೆ ಕಾಣಿಸುತ್ತಿದೆ. ಅವರ ಪ್ರಣಯಲೋಕ ಅವಳ ಅನುಭವಕ್ಕೆ ಅಪರಿಚಿತವಾದದ್ದು. ಏಕೆಂದರೆ, ಅವಳ ಜೀವನದಲ್ಲಿ ಅದಿಲ್ಲ. ಅವಳ ಗಂಡ ಶೇಖರ ಸಿಟ್ಟಿನ ಪ್ರತಿಮೂರ್ತಿ. ಮಾತೆತ್ತಿದರೆ ಸಿಡುಕುತ್ತಾನೆ. ಅವನನ್ನು ನೋಡಿದರೆ ಮೈಯೆಲ್ಲ ಮದ್ದು ತುಂಬಿಕೊಂಡ ಪಟಾಕಿಯನ್ನು ನೋಡಿದಂತಾಗುತ್ತದೆ. ಅವನಿಗೆಲ್ಲಿ ಕೋಪ ಬಂದುಬಿಡುತ್ತದೋ ಎಂದು ರೇಖಾ




ಹೆದರಿ, ಹೆದರಿ ಸಾಯುತ್ತಾಳೆ. ತನ್ನ ಮತ್ತು ಎರಡು ಮಕ್ಕಳ ಮೇಲೆ ರೇಗದಿದ್ದರೆ ಸಾಕಪ್ಪ ಎಂದು ಹುಷಾರಾಗಿ ಕೆಲಸ ಮಾಡುತ್ತಾಳೆ. ಶೇಖರ ಮಾತು ಮಾತಿಗೂ ಮಕ್ಕಳ ಮೇಲೆ ರೇಗುವುದು, ಅವು 'ಅಪ್ಪ ಬೈಯ್ತ್ರಾ...' ಎಂದು ಅಳುವುದು, ತಾನು ಅವರನ್ನು ಸಮಾಧಾನ ಪಡಿಸುವುದು ಇದೇ ರೇಖಾಳ ಕೆಲಸವಾಗಿ ಬಿಡುತ್ತದೆ. ತನ್ನನ್ನು ನೋಡಿ ಗಂಡ ಮುಗುಳ್ನಗು ನಕ್ಕಿದ್ದು ಯಾವಾಗ ಅಂತ ಅವಳಿಗೆ ಮರೆತುಹೋಗಿದೆ. ಸದಾ ಕೆಲಸ ಮಾಡುವ, ಗಂಡನಿಂದ ಒಂದು ಪ್ರೀತಿಯ ಮಾತನ್ನೂ ನಿರೀಕ್ಷಿಸಲಾಗದ ಸ್ಥಿತಿಯಲ್ಲಿರುವ ರೇಖಾಳದು ಒಂದು ರೀತಿಯಲ್ಲಿ ಶೋಚನೀಯ ಅಸ್ತಿತ್ವ. ಹೀಗಿರುವಾಗ ಈಗ ಒಂದು ವರ್ಷದ ಹಿಂದೆ ಎದುರು ಮನೆಗೆ ಹೊಸದಾಗಿ ಬಾಡಿಗೆಗೆ ಬಂದಿರುವ ಯುವದಂಪತಿಗಳಾದ ಅರುಣ್, ಮಿಲಿಯ ಇರಿಸರಿಕೆ ಅವಳಿಗೆ ಆಶ್ಚರ್ಯವನ್ನುಂಟುಮಾಡಿದೆ.

ಪ್ರತಿದಿನ ಬೆಳಿಗ್ಗೆ ಒಂಟಿಯಾಗಿ ಅಡಿಗೆ

ಮಾಡುವಾಗ, ಏನು ಸಾರು, ಏನು ತಿಂಡಿ ಎಂದು ತಲೆ ಕೆಡಿಸಿಕೊಳ್ಳುವಾಗ, ಮುಗಿಯುವುದೇ ಇಲ್ಲ ಅನ್ನಿಸುವ ಗೋಧಿಹಿಟ್ಟಿನ ಬೆಟ್ಟವನ್ನು ಚಪಾತಿಯಾಗಿ ಪರಿವರ್ತಿಸುವಾಗ, ಯಾವಾಗಲೂ ಗಲೀಜಾಗಲು ಹಾತೊರೆಯುವ ಅಡಿಗೆಮನೆಯನ್ನು ಶುಚಿ ಮಾಡುವಾಗ ರೇಖಾ ಗಂಡನ ಜೊತೆಗಾಗಿ ಹಂಬಲಿಸುತ್ತಾಳೆ. ಅವನೂ ಜೊತೆಗಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಮಾತಾಡುತ್ತಾ ಕೆಲಸ ಮಾಡುತ್ತಿದ್ದರೆ ಕೆಲಸ ಮಾಡಿದ ಕಷ್ಟವೇ ತಿಳಿಯುವುದಿಲ್ಲ. ಆದರೆ ರೇಖಾಗೆ ಅಡಿಗೆ ಮಾಡುವಾಗ ಗಂಡನ ಒಡನಾಟ ಸಿಗುವುದಿಲ್ಲ. ಅವನಿಗೆ ಅಡಿಗೆ ಬರುವುದೂ ಇಲ್ಲ, ಅವನು ಅದನ್ನು ಕಲಿಯುವ ಪ್ರಯತ್ನ ಮಾಡಿಯೂ ಇಲ್ಲ. ಹೋಗಲಿ ಜೊತೆಗಿದ್ದು ಸಹಾಯವನ್ನೂ ಮಾಡುವುದಿಲ್ಲ. ಮದುವೆ ಆದಾಗಿನಿಂದ ಅಂದರೆ ಕಳೆದ ಹದಿನಾಲ್ಕು ವರ್ಷಗಳಿಂದ ರೇಖಾಳ ಬೆಳಿಗ್ಗೆಗಳು ಅಡಿಗೆಮನೆಯಲ್ಲಿ ಒಂಟಿಯಾಗಿ ಕಳೆಯುತ್ತಿವೆ. ಆ ಸಮಯದಲ್ಲಿ ಶೇಖರ ನಿದ್ದೆ ಮಾಡುತ್ತಲೋ ಪೇಪರೋದುತ್ತಲೋ ಇರುತ್ತಾನೆ. ಸದ್ಯ ಅವನು ಬೆಳಿಗ್ಗೆ ಯಾರ ಮೇಲೂ ರೇಗದೆ ಆಫೀಸಿಗೆ ಹೋದರೆ ಸಾಕು ಎಂದು ರೇಖಾ ಹಾರೈಸುತ್ತಾಳೆ. ಮನೆಯಲ್ಲಿ ರೇಗಿಕೊಂಡು ಮಾತನಾಡುವುದು ಶೇಖರನಿಗೆ ರೂಢಿಯೇ ಆಗಿಬಿಟ್ಟಿದೆ. ಆಫೀಸಿನ ಸಹೋದ್ಯೋಗಿಗಳ ಹತ್ತಿರ, ಗೆಳೆಯರ ಹತ್ತಿರ ಅವನು ಚೆನ್ನಾಗಿಯೇ ಮಾತನಾಡುತ್ತಾನೆ. ಮನೆಯವರ ಹತ್ತಿರ ಹೇಗಿದ್ದರೂ ನಡೆಯುತ್ತೆ ಅಂತ ಅವನು ಭಾವಿಸಿರಬೇಕು. ಯಾವಾಗಲೂ ಮನೆಯ ಜವಾಬ್ದಾರಿಯೆಂಬುದು ರೇಖಾಳ ಹೆಗಲ ಮೇಲೆ ಭಾರವಾಗಿ ಕೂತಿರುತ್ತದೆ. ಅಡಿಗೆ, ತಿಂಡಿ, ಮಕ್ಕಳ ಹೋಂ ವರ್ಕ್, ಮನೆ ಸಾಮಾನು, ಎಂದು ಇಡೀ ದಿನ ತಲೆಕೆಡಿಸಿಕೊಳ್ಳಬೇಕಾಗುತ್ತದೆ. ಇದನ್ನೆಲ್ಲ ಯೋಚಿಸುತ್ತಾ ರೇಖಾ ಬೆಳಿಗ್ಗೆ ಅಡಿಗೆ ಮಾಡುತ್ತಾಳೆ. ಆಗ ಮಿಲಿ ತನ್ನ ಮನೆ ಅಡಿಗೆಯ ವಿಚಾರ, ಗಂಡನ ವಿಚಾರ ಹೇಳಿದ್ದು ನೆನಪಾಗುತ್ತದೆ.

ಅರುಣ್‌ಗೆ ಅಡಿಗೆ ಬರುತ್ತದಂತೆ. ಬೆಳಿಗ್ಗೆ ಮಿಲಿ ಏಳುವುದು ತಡವಾದರೆ, ಅವತ್ತಿನ ಅಡಿಗೆ ಅರುಣನದು. ಇಬ್ಬರೂ ಆಫೀಸಿಗೆ ಹೋಗಿ ಬಂದಿದ್ದರೂ, ಮಿಲಿ ಸ್ವಲ್ಪ ಸುಸ್ತಾಯಿತು ಅಂದರೆ, ಅರುಣ ತಾನೇ ಅಡಿಗೆ ಮಾಡುತ್ತಾನೆ. ತಾನು ಆಫೀಸ್-ಟೂರಿಗೆ ಹೋದರೆ, ಕೆಲಸದವಳಿಗೆ ಖುದ್ದಾಗಿ ಹೇಳುತ್ತಾನೆ, ''ನೋಡೂ, ಮಿಲಿಗೆ ತುಂಬ ಕಷ್ಟ ಆಗುತ್ತೆ, ನೀನು ತಪ್ಪಿಸದೆ ಬರಬೇಕು.'' ಶಾಪಿಂಗ್, ಡಾಕ್ಟರ್ ಶಾಪ್, ಪಾರ್ಕು... ಎಲ್ಲಿಗಾದರೂ ಗಂಡ ಹೆಂಡತಿ ಒಟ್ಟಿಗೆ ಹೋಗಿ ಬರುತ್ತಾರೆ. ರಜೆ ಇದ್ದರೆ ಸಂಜೆ ಬ್ಯಾಡ್‌ಮಿಂಟನ್ ಆಡುತ್ತಾರೆ. ಒಬ್ಬರಿಗೆ ಹುಷಾರಿಲ್ಲದಿದ್ದರೆ ಇಬ್ಬರೂ ರಜೆ ಹಾಕುತ್ತಾರೆ. ಭಾನುವಾರ ಬಂದರೆ ಇಬ್ಬರೂ ಕೂಡಿ ಮನೆಗೆಲಸ ಮಾಡುತ್ತಾರೆ, ಮಧ್ಯಾಹ್ನ ಗಡದ್ದಾಗಿ ಮಲಗುತ್ತಾರೆ. ಅರುಣ ಊರಲ್ಲಿಲ್ಲದಿದ್ದರೆ, ''ಅಯ್ಯೋ ಅವನಿಲ್ಲದೆ ಬೇಜಾರು ಕಣ್ರೀ ರೇಖಾ'' ಅಂತ ಮಿಲಿ ರಾಗ ಎಳೆಯುತ್ತಾಳೆ. ಒಟ್ಟಿನಲ್ಲಿ ಇಬ್ಬರೂ ಪರಸ್ಪರ ಸಾಂಗತ್ಯವನ್ನು ತುಂಬ ಸವಿಯುತ್ತಾರೆ ಅನ್ನುವುದರಲ್ಲಿ ಅನುಮಾನವೇ ಇಲ್ಲ.

ಈ 'ಒಟ್ಟಿಗೆ' ಎಂಬ ಪದವೇ ಎಷ್ಟು ಆಕರ್ಷಕ ಎಂದು ರೇಖಾ ಯೋಚಿಸುತ್ತಾಳೆ. ಗಂಡ-ಹೆಂಡತಿ ಬರಿ ದೇಹದ ಮೂಲಕ ಬೆರೆತರೆ ಸಾಲದು. ಮನಸ್ಸಿನಲ್ಲಿ, ಮನೆಗೆಲಸದಲ್ಲಿ, ಮಕ್ಕಳನ್ನು ನೋಡಿಕೊಳ್ಳುವುದರಲ್ಲಿ, ಜೀವನದ ಎಲ್ಲ ಎಡರುತೊಡರುಗಳಲ್ಲಿ ಅವರು ಒಂದಾಗಬೇಕು. ಈ ಜೊತೆಯಿಂದ, ಒಡನಾಟದಿಂದ ಬದುಕಿನ ಎಲ್ಲ ಭಾರಗಳು ಹಗುರಾಗಬೇಕು ಎಂದು ರೇಖಾ ಆಸೆ ಪಡುತ್ತಾಳೆ, ಕನಸು ಕಾಣುತ್ತಾಳೆ. ಆದರೆ ಅವಳ ಕನಸು ಕನಸಾಗಿಯೇ ಉಳಿದಿದೆ. ಏಕೆಂದರೆ, ಈ ಕನಸನ್ನು ಅವಳ ಗಂಡ ಶೇಖರ ಹಂಚಿಕೊಳ್ಳುವುದಿಲ್ಲ. ಕುಡಿಯದ, ಹೆಂಡತಿ ಮಕ್ಕಳನ್ನು ಹೊಡೆಯದ, ಸರಿಯಾಗಿ ಸಂಬಳ ತಂದು ಕೊಡುವ ತಾನು ಅತ್ಯುತ್ತಮ ಗಂಡ ಎಂದೇ ಅವನು ಭಾವಿಸಿದ್ದಾನೆ. ಪ್ರತಿಯೊಂದಕ್ಕೂ ಹೆಂಡತಿಯ ಜೊತೆಗಿರುವ ಪರಿಕಲ್ಪನೆಯೇ ಅವನಿಗೆ ಗೊತ್ತಿಲ್ಲ. ಈ ಕಲ್ಪನೆ ನಮ್ಮ ಸಮಾಜಕ್ಕೆ ಹೊಸದೋ ಏನೋ. ಒಟ್ಟು ಕುಟುಂಬಗಳಲ್ಲಿ ಗಂಡಸರ ಲೋಕ, ಹೆಂಗಸರ ಲೋಕ, ಮಕ್ಕಳ ಲೋಕ ಎಂದು ಬೇರೆ, ಬೇರೆ ಇದ್ದು ಅವು ಸ್ವಸಂಪೂರ್ಣವಾಗಿದ್ದಾಗ ಹೆಂಡತಿಯರಿಗೆ ಗಂಡನ ಸಾಂಗತ್ಯದ ಅಗತ್ಯ ಅಷ್ಟಾಗಿರಲಿಲ್ಲವೇನೋ. ಬಹುಶಃ ಶೇಖರನ ಮನಃಸ್ಥಿತಿ ಈ ಒಟ್ಟು ಕುಟುಂಬಗಳ ಗಂಡಂದಿರ ಮನಃಸ್ಥಿತಿಯೇ ಇರಬಹುದು. ಆದರೆ ತಮ್ಮದು ಒಟ್ಟು ಕುಟುಂಬವಲ್ಲವಲ್ಲ, ಒಂಟಿ ಕುಟುಂಬ ಎಂದು ರೇಖಾ ಯೋಚಿಸುತ್ತಾಳೆ. ರೇಖಾಳಿಗೆ ಗಂಡ ಅಂದರೆ ನೆನಪಾಗುವ ಚಿತ್ರ ಅಂದರೆ, ಕೈಯಲ್ಲಿ ಮೊಬೈಲು ಹಿಡಿದು ಅವನು, ''ಹಾಂ, ಈಗ ಬಂದೆ, ಇನ್ನೊಂದು ಹತ್ತು ನಿಮಿಷದಲ್ಲಿ ಅಲ್ಲಿರ್ತೀನಿ'' ಅನ್ನುವುದು, ಅವಸರವಸರವಾಗಿ ಹೊರಗೆ ಹೋಗುವ ಬಟ್ಟೆ ಧರಿಸಿ, ''ಏ ರೇಖಾ, ಇಲ್ಲೇ ಹೋಗ್ಬರ್ತೀನಿ'' ಎಂದು ಬೈಕು ಸ್ಟಾರ್ಟ್ ಮಾಡಿ ಭರ್ರನೆ ಹೋಗುವುದು. ಭಾನುವಾರವಾದರೂ ಇದೇ ಕತೆ. ಆಫೀಸಿನ ನಂತರ ಸೈಟು, ಮನೆ ಎಂದು ರಿಯಲ್ ಎಸ್ಟೇಟ್ ವ್ಯವಹಾರದಲ್ಲಿ ತೊಡಗಿರುವ ಅವನಿಗೆ ತಾನು ಹೊರಟಾಗಲೆಲ್ಲ ರೇಖಾಳ ಮುಖ ಸಪ್ಪಗಾಗುವುದನ್ನು ಗಮನಿಸುವ ವ್ಯವಧಾನವಿರುವುದಿಲ್ಲ. ಗಂಡನಿದ್ದೂ ತನ್ನದು ಒಂಟಿಬಾಳಾಯಿತಲ್ಲ ಎಂದು ರೇಖಾ ಕೊರಗುತ್ತಾಳೆ.

ರೇಖಾಳದು ತುಂಬ ಸೂಕ್ಷ್ಮ ಮನಸ್ಸು. ಗಂಡನನ್ನು ಬೈಯುವುದು, ಗೊಣಗಿ, ಕಿರಿಕಿರಿ ಮಾಡಿ ಗೋಳು ಹುಯಿದುಕೊಳ್ಳುವುದು – ಇವೆಲ್ಲ ತುಂಬ ಸಣ್ಣಬುದ್ಧಿಯ ಕೆಲಸಗಳು ಎಂದು ಅವಳಿಗನ್ನಿಸುತ್ತದೆ. ಮೌನವಾಗಿ ತನ್ನ ಕೆಲಸ ತಾನು ಮಾಡುತ್ತಾ ಶಾಂತವಾಗಿ ಮನೆ ನಡೆಸಿಕೊಂಡು ಹೋಗುವ ಸ್ವಭಾವ ಅವಳದ್ದು. ಗಂಡನ ಸಾಂಗತ್ಯ ಯಾವಾಗಲೂ ಬೇಕು, ಬೇಕು ಎಂದು ಅವಳ ಇರವಿನ ಅಣುಅಣುವೂ ಚೀರುತ್ತಿದ್ದರೂ ಅವಳದನ್ನು ಬಾಯಿಬಿಟ್ಟು ಗಂಡನಿಗೆ ಹೇಳಲಾರಳು. ಕಾರಣವೇನೆಂದರೆ, ಪ್ರೀತಿ ಎನ್ನುವುದು ಅತ್ತು ಕರೆದು ಹಾಕಿಸಿಕೊಳ್ಳುವ ಔತಣವಲ್ಲ, ಅದು ತಾನಾಗಿ ಹುಟ್ಟಬೇಕು ಎಂಬುದು ಅವಳ ಭಾವನೆ. ಶೇಖರನಿಗೆ ಇದನ್ನೆಲ್ಲ ಅರ್ಥಮಾಡಿಕೊಳ್ಳುವ ಸೂಕ್ಷ್ಮ ಮನಸ್ಸಿಲ್ಲ. ತನ್ನ ಮೂಕನೋವನ್ನು ರೇಖಾ ಯಾರ ಮುಂದೂ ಆಡಲಾರಳು, ಅನುಭವಿಸಲಾರಳು. ಇಷ್ಟಾಗಿ ಯಾರ ಮುಂದಾದರೂ ಹೇಳಿಕೊಂಡರೆ ತನ್ನ ನೋವು ಅವರಿಗರ್ಥವಾಗುತ್ತದೆ ಎಂಬ ನಂಬಿಕೆಯೂ ಅವಳಿಗಿಲ್ಲ. ಲೋಕದ ಪ್ರಕಾರ ಅವಳದ್ದು ಸುಖದಾಂಪತ್ಯ. ತಾಳಿ ತೂಗಾಡಿಸಿಕೊಂಡು, ಮಕ್ಕಳನ್ನು ಸ್ಕೂಲಿಗೆ ಕಳಿಸಿ, ಹಬ್ಬಕ್ಕೆ ಅವುಗಳಿಗೆ ಹೊಸಬಟ್ಟೆ ಹಾಕಿ, ಅವರ ಮದುವೆ, ಇವರ ಗೃಹಪ್ರವೇಶ ಎಂದು ಮನೆಯವರೆಲ್ಲ ಅಲಂಕಾರ ಮಾಡಿಕೊಂಡು ತಿರುಗಿದರೆ, ''ಹಾಂ, ಇವರು ಸುಖವಾಗಿದ್ದಾರೆ''ಎಂದು ಭಾವಿಸುವ ಸಮಾಜದ ಮುಂದೆ ತನ್ನ ಜೀವನದ ಪ್ರೀತಿಯ ಕೊರತೆಯ ಬಗ್ಗೆ ರೇಖಾ ಏನು ಹೇಳಿಯಾಳು! ಇಷ್ಟಾಗಿ ಸಮಾಜಕ್ಕೆ ಅರ್ಥವಾಗುವಂತಹ ತಪ್ಪುಗಳನ್ನು ಶೇಖರ ಮಾಡುತ್ತಿಲ್ಲ. ಕುಡಿಯುವುದಿಲ್ಲ, ಹೆಂಡತಿ, ಮಕ್ಕಳನ್ನು ಹೊಡೆಯುವುದಿಲ್ಲ, ಬೇರೆ ಹೆಂಗಸಿನ ಸಂಪರ್ಕ ಇಟ್ಟುಕೊಂಡಿಲ್ಲ. ಆದರೆ ಅವನು ರೇಖಾಳ ಆಳವಾದ ಅಗತ್ಯವಾದ ಒಡನಾಟರೂಪೀ ಪ್ರೀತಿಯನ್ನು ಕೊಡುವುದಿಲ್ಲ. ಇದನ್ನೇ ಮುಂದುಮಾಡಿಕೊಂಡು, ಸುಖಮಯವಲ್ಲದಿದ್ದರೂ ಸಹನೀಯವಾಗಿರುವ, ಮಕ್ಕಳಿಗೆ ದಿಕ್ಕಾಗಿರುವ ಕುಟುಂಬವನ್ನು ಒಡೆದು ಹೊರಬರುವ ಮನಸ್ಸೂ ರೇಖಾಳಿಗಿಲ್ಲ. ಇಷ್ಟಾಗಿ ತನ್ನ ಯೌವನದ ಹತ್ತು, ಹನ್ನೆರಡು ವರ್ಷಗಳನ್ನು ಈ ಮದುವೆಯಲ್ಲಿ ವ್ಯಯಿಸಿದ ಮೇಲೆ, ಮಕ್ಕಳ ಅಗಾಧ ಜವಾಬ್ದಾರಿಯನ್ನು ಹೊತ್ತುಕೊಂಡಿರುವಾಗ, ಮದುವೆಯಾಚೆಗಿನ ಸಂಬಂಧ ಅಥವಾ ಇನ್ನೊಂದು ಮದುವೆಯ ಬಗ್ಗೆ ಯೋಚಿಸುವ ಉತ್ಸಾಹ, ತಾಳ್ಮೆಗಳೂ ಅವಳಲ್ಲಿಲ್ಲ. ನಮ್ಮ ಸಮಾಜ ವ್ಯವಸ್ಥೆಗೊಂಡಿರುವ ರೀತಿಯಲ್ಲಿ ಹೆಣ್ಣಿಗೆ ಪ್ರೀತಿ ಸಿಗಬೇಕೆಂದರೆ ಮದುವೆಯ ಚೌಕಟ್ಟಿನೊಳಗಡೆಯೇ ಸಿಗಬೇಕು. ಹೊರಗೆ ಅದನ್ನು ಹುಡುಕಲು ಹೋದರೆ ಪುಕ್ಕಟೆ ಅಪಕೀರ್ತಿ, ಇನ್ನೊಂದು ಗಂಡಿಗೆ ಇಟ್ಟುಕೊಂಡವಳಾಗುವ ಕರ್ಮ. ಅಂತಹ ಸಂಬಂಧಗಳಲ್ಲಿ ಸಿಗುವುದು ಪ್ರೀತಿಯ ತೆಳುಲೇಪವಿರುವ ಹಸಿಕಾಮ. ಸಾಮಾಜಿಕ ಸುರಕ್ಷೆ ಇರುವ ಮದುವೆಯಲ್ಲೇ ಸಿಗದ ಪ್ರೀತಿ ಸಮಾಜದ ಕೆಂಗಣ್ಣಿಗೆ ಗುರಿಯಾಗುವ ವಿವಾಹಬಾಹಿರ ಹಗರಣಗಳಲ್ಲಿ ಸಿಕ್ಕೀತೇ? ಆ ಭರವಸೆಯೂ ರೇಖಾಳಿಗಿಲ್ಲ. ಹೊರಗಿನ ಮರೀಚಿಕೆಗಳ ಹಿಂದೆ ಓಡುವ, ಓಡಿ ನಿರಾಶಳಾಗುವ ವೇದನೆಗಿಂತ ತನ್ನ ಖಾಸಗಿ ನರಕವೇ ವಾಸಿ. ಹೀಗಾಗಿ ರೇಖಾಳ ಮನಸ್ಸಿನ ಒಂಟಿತನವೆಂಬುದು ಒಂದು ಶಾಶ್ವತ ಗಾಯದಂತೆ ಯಾವಾಗಲೂ ನೋಯಿಸುತ್ತಲೇ ಇರುತ್ತದೆ.

* * *

ಒಮ್ಮೊಮ್ಮೆ ಈ ನೋವು, ಶೇಖರನ ರೇಗಾಟ, ಬದುಕು ತಂದೆಸೆಯುವ ನೂರೆಂಟು ಸಮಸ್ಯೆಗಳು ಇವು ತಾಳಲಾರದಷ್ಟು ಜಾಸ್ತಿಯಾದಾಗ, ರೇಖಾ ತನ್ನ ನಿತ್ಯದ ಶಾಂತಸರೋವರದ ಗುಣವನ್ನು ತಾತ್ಕಾಲಿಕವಾಗಿ ತ್ಯಜಿಸಿ ಜ್ವಾಲಾಮುಖಿಯಂತೆ ಸಿಡಿಯುವುದೂ ಉಂಟು. ಗಂಡನನ್ನು ಆಗ ಚೆನ್ನಾಗಿ ಬಯ್ದುಬಿಡುತ್ತಾಳೆ. ವಿಚಿತ್ರವೆಂದರೆ ಮನೆಯ ಬೆಂಬಲವಾದ ರೇಖಾ, ಎಂದೂ ರೇಗದ ರೇಖಾ ಸಿಡಿದುಬಿಟ್ಟರೆ ಶೇಖರ ವಿಹ್ವಲನಾಗುತ್ತಾನೆ. ಕೆಲವು ಸಲವಂತೂ ಮಗುವಿನಂತೆ ಅತ್ತೇ ಬಿಡುತ್ತಾನೆ. ಮತ್ತೆ ರೇಖಾಳೇ ಅವನನ್ನು ಸಮಾಧಾನಪಡಿಸಬೇಕಾಗುತ್ತದೆ. ಹಾಗೆ ಸಮಾಧಾನವಾಗಿ ಎಲ್ಲವೂ ಶಾಂತವಾದ ಮೇಲೆ ರೇಖಾಳಿಗೆ ಶೇಖರ ಒಂದು ಮಗುವಿನಂತೆ ಭಾಸವಾಗಿ, 'ಛೆ, ಸಮಾನವಾಗಿ ಜಗಳ ಆಡಲೂ ಇವನಿಗೆ ಸಾಧ್ಯವಾಗುವುದಿಲ್ಲವಲ್ಲ' ಅನ್ನಿಸಿ ಪಿಚ್ಚೆನ್ನಿಸಿಬಿಡುತ್ತದೆ. ಆಳದಲ್ಲಿ ಶೇಖರ

ತನ್ನನ್ನೇನಾದರೂ ತಾಯಿಯ ಸ್ಥಾನದಲ್ಲೇ ಇಟ್ಟಿದ್ದಾನೋ, ಅದಕ್ಕೆ ಹಟ ಮಾಡುವ ಮಗುವಿನಂತೆ ಕೂಗಾಡುತ್ತಾ, ರೇಗಾಡುತ್ತಾ ಬೇಜವಾಬ್ದಾರಿತನದಿಂದ ವರ್ತಿಸುತ್ತಾನೋ ಎಂಬ ಅನುಮಾನ ರೇಖಾಳಿಗಿದೆ. ಇಂಥವನು ಹೇಗೆ ತನ್ನ ಜೊತೆಗಾರನಾದಾನು ?! ತನ್ನ ಭಾಷೆ ಶೇಖರನಿಗೆ ಅರ್ಥವಾಗುವುದು ಸಾಧ್ಯವೇ ಇಲ್ಲ, ಸಂವೇದನೆಗಳ ದೃಷ್ಟಿಯಿಂದ ತಮ್ಮ ನಡುವೆ ಎಂದೂ ದಾಟಲಾರದ ಬಿರುಕಿದೆ, ತಾನೊಂದು ರೈಲುಕಂಬಿ, ಶೇಖರನೊಂದು ರೈಲುಕಂಬಿ, ಮಕ್ಕಳ ಜೀವನದ ರೈಲುಬಂಡಿಯನ್ನು ಎಂದೂ ಸೇರಲಾಗದ ಈ ಎರಡು ಕಂಬಿಗಳು ಸಾಗಿಸುತ್ತಿವೆ. ಅಯ್ಯೋ, ಇದೆಂಥ ವಿಚಿತ್ರ ! ದುಃಖದಂತೆ ಕಾಣಿಸದ ದುಃಖಗಳೂ ಇರುತ್ತವಲ್ಲ ಎಂದು ರೇಖಾ ನಿಡುಸುಯ್ಯುತ್ತಾಳೆ.

ಒಂಟಿಯಾಗಿ ಕೆಲಸ ಮಾಡುತ್ತಿರುವಾಗ ಅನೇಕ ಸಲ, ರೇಖಾಳಿಗೆ ಅಯ್ಯೋ ಗಂಡನೆಂಬವನು ಜೊತೆಗಾರನಾಗದಿದ್ದರೆ ಹೆಂಡತಿಯ ಬಾಳು ಎಷ್ಟು ಭಾರವಾಗುತ್ತದಲ್ಲ ಅನ್ನಿಸುತ್ತದೆ. ಮದುವೆಯೆಂಬುದು ಕಿಟಕಿ, ಬಾಗಿಲುಗಳಿಲ್ಲದ ದೊಡ್ಡ ಸೆರೆಮನೆಯೆಂದು ಅವಳಿಗೆ ಭಾಸವಾಗುತ್ತದೆ. ಮದುವೆಯಲ್ಲಿ ಪ್ರೀತಿ ಸಿಗದಿದ್ದರೆ ಹೆಂಡತಿ ಏನು ಮಾಡಬೇಕು, ಎಲ್ಲಿಗೆ ಹೋಗಬೇಕು ? ಈ ಸಮಾಜವೋ ಮದುವೆ ಅಂತ ಒಂದು ಆಗಿಬಿಟ್ಟರೆ, ಗಂಡ ಅಂತ ಒಬ್ಬನಿದ್ದರೆ ಹೆಣ್ಣಿಗೆ ಬೇಕಾದಷ್ಟಾಯಿತು ಎಂಬಂತೆ ವರ್ತಿಸುತ್ತದೆ. ಮದುವೆ ಮಾಡುವಾಗ ಗಂಡು ಹೆಣ್ಣಿನ ಜಾತಿ, ಅಂತಸ್ತು, ನೌಕರಿ, ಕೊನೆಗೆ ಬಣ್ಣ, ಎತ್ತರ ಇದೆಲ್ಲದರ ಬಗ್ಗೆ ಸಿಕ್ಕಾಪಟ್ಟೆ ಲೆಕ್ಕಾಚಾರ ಹಾಕುವ ತಂದೆ-ತಾಯಿ, ಗಂಡು-ಹೆಣ್ಣಿನ ಮನಸ್ಸುಗಳ ಹೊಂದಾಣಿಕೆಯ ಬಗ್ಗೆ ಯೋಚನೆಯನ್ನೇ ಮಾಡುವುದಿಲ್ಲವಲ್ಲ. ಮದುವೆಯಲ್ಲಿ ನೂರಾರು ಸಂಖ್ಯೆಯಲ್ಲಿ ಬಂದು ಉಂಡುಹೋಗುವ ಜನ ಪ್ರೀತಿಯಿಲ್ಲದೆ ಕೊರಗುವ ಹೆಂಡತಿಯ ಕಷ್ಟಕ್ಕೆ ಮರುಗುತ್ತಾರೆಯೇ ? ಹೆಂಡತಿಗೆ ಪ್ರೀತಿ ಕೊಡದ ಗಂಡನಿಗೆ ಸಮಾಜ ಯಾವ ಶಿಕ್ಷೆಯನ್ನೂ ಕೊಡುವುದಿಲ್ಲ. ಅದೇ ಹೆಂಡತಿಯೇನಾದರೂ ಮದುವೆಯ ಹೊರಗೆ ಪ್ರೀತಿಯನ್ನು ಅರಸಿ ಹೋದರೆ ಸಮಾಜ ಅವಳನ್ನು ದೂಷಿಸಲು, ಶಿಕ್ಷಿಸಲು, ಬಹಿಷ್ಕರಿಸಲು ಮರೆಯುವುದಿಲ್ಲ. ಲೋಕದಲ್ಲಿ ಹೆಂಡತಿಯರು ಸುಖವಾಗಿದ್ದದ್ದು ಎಷ್ಟು ಅಪರೂಪ ! ಸೀತೆ, ದ್ರೌಪದಿ, ಅಹಲ್ಯೆ, ದಮಯಂತಿ, ಶಕುಂತಲೆ, ಮೀಡಿಯಾ, ಕ್ಲೈಟಮ್ನೆಸ್ಟ್ರ... ಇವರೆಲ್ಲ ಹೆಂಡತಿಯರಾಗಿದ್ದವರೇ. ಆದರೆ ಎಷ್ಟು ದುಃಖಿಗಳಾಗಿದ್ದರು ! ಹೆಂಡತಿಯ ಕಷ್ಟಕ್ಕೆ, ಅದರಲ್ಲೂ ಪ್ರೀತಿಯ ಕೊರತೆಯಂತಹ ಕಣ್ಣಿಗೆ ಕಾಣದ ಕಷ್ಟಕ್ಕೆ ಸಮಾಜದ ಮನಸ್ಸು ಮಿಡಿಯುವುದಿಲ್ಲವಲ್ಲ ಅಂತ ರೇಖಾ ಆಗಾಗ ಯೋಚಿಸುತ್ತಾಳೆ. ಇಂತಹುದರಲ್ಲಿ ಅರುಣ, ಮಿಲಿಯ ಜೋಡಿಹಕ್ಕಿಯಂತಹ ಬದುಕು ಅವಳಲ್ಲಿ ಆಶ್ಚರ್ಯ ತರುತ್ತದೆ. ದಿನ ಬೆಳಗಾದರೆ ಎದುರಿಗೆ ಕಾಣುವ ಚಿತ್ರಗಳು ನೆನಪಾಗುತ್ತವೆ.

''ಇವತ್ತು ನಂಗೆ ತುಂಬ ಸುಸ್ತಾಗಿದೆ ಅರುಣ್, ಅಡಿಗೆ ಮಾಡಕ್ಕಾಗಲ್ಲ, ಹೋಟೇಲಿಗ್ಹೋಗೋಣ್ವಾ...'' ಮುದ್ದುಗರೆಯುವ ಮಿಲಿ. ''ಆಯ್ತು ಅದಕ್ಕೇನಂತೆ, ಹೋಗೋಣ ನಡಿ'' ಅನ್ನುವ ಅರುಣ್. ''ನನ್ಬಿಟ್ಟೇ ಊಟ ಮಾಡ್ಬಿಟ್ಯಾ...'' ಎಂದು ಹುಸಿಗೋಪ ತೋರುವ ಅರುಣ್. ''ನಂಗೆ ತುಂಬ ಕಷ್ಟ ಕಣೋ, ಇವತ್ತು ಜಾಸ್ತಿ ಕೆಲಸ ಇತ್ತು, ಹಸಿವಾಯ್ತು, ಊಟ ಮಾಡ್ಬಿಟ್ಟೆ'' ಎಂದು ತುಟಿ ಮುಂದೆ ಚಾಚಿ ಮುದ್ದಾಗಿ ಹೇಳುವ ಮಿಲಿ. ಇವಳ ಬರ್ತ್‌ಡೇ ಅಂತ ಅವನು ಹೊಸ ಹೊಂಡಾ ಆಕ್ಟಿವಾ ಬುಕ್ ಮಾಡುತ್ತಾನೆ. ಅವನಿಗಿಷ್ಟ ಎಂದು ಇವಳು ಪ್ರತೀವಾರ ಪಾಯಸ ಮಾಡುತ್ತಾಳೆ. ''ಅರುಣ್ ಇದ್ರೆ ನಂಗೇನು ಕಷ್ಟ ಇಲ್ಲಪ್ಪ, ನಮ್ಮದುವೆ ಫೇರಿ ಟೇಲ್ ತರ ಇದೆ'' ಎಂದು ಹೆಮ್ಮೆಯಿಂದ ಹೇಳುವ ಮಿಲಿ. ''ನಾನಿವ್ಳನ್ನ ಅಪ್ಕೊಂಡಿದ್ದನ್ನ ಕೆಲಸದವಳು ನೋಡ್ಬಿಟ್ಳು ಅಂತ ಎಷ್ಟು ನಾಚ್ಕೊಂಡಿದ್ದಾಳೆ ನೋಡಿ'' ಎಂದು ಒಪ್ಪಿಸುವ ಅರುಣ್. ಅವನು ಆಫೀಸಿಂದ ಬರುತ್ತಿದ್ದಂತೆ, ''ಓಹ್, ವ್ಹಾಟ್ ಎ ರಿಲೀಫ್'' ಅನ್ನುವ ಮಿಲಿ. ಪ್ರತಿಯೊಂದಕ್ಕೂ, ''ಮೈ ವೈಫ್, ಮೈ ವೈಫ್'' ಅನ್ನುವ ಅರುಣ್. ಒಬ್ಬರು ಇನ್ನೊಬ್ಬರನ್ನು ನೋಡುತ್ತಿದ್ದರೆ ಅವರ ಕಣ್ಣುಗಳಲ್ಲಿ ಪ್ರೀತಿಯ ಝರಿಯೇ ಪ್ರತ್ಯಕ್ಷವಾಗಿಬಿಡುತ್ತಿತ್ತು. ಆ ಕೌತುಕವನ್ನು ರೇಖಾ ಬೆರಗಾಗಿ ನೋಡುತ್ತಿದ್ದಳು. ಅವರ ಪ್ರೀತಿಯ ಅನೇಕ ಭಾವಭಂಗಿಗಳಿಗೆ ಅವಳು ಸಾಕ್ಷಿಯಾಗಿದ್ದಳು. ಕೆಲವೊಮ್ಮೆ ಆ ಪ್ರೀತಿ ದೊಡ್ಡ ಪ್ರವಾಹವಾಗಿ ಹರಿದು ರೇಖಾಳನ್ನು ಕಕ್ಕಾಬಿಕ್ಕಿಯಾಗಿಸುತ್ತಿತ್ತು. ''ನಂಗೆ ತುಂಬ ತಲೆನೋವು ಕಣೋ, ಮಸಾಜ್ ಮಾಡ್ತೀಯಾ'' ಎಂದು ಒಂದು ದಿನ ರೇಖಾ ಅವರ ಮನೆಯಲ್ಲಿರುವಂತೆಯೇ, ಮಿಲಿ ಅರುಣನ ಕಾಲುಗಳ ನಡುವೆ ಅವನಿಗೆ ಬೆನ್ನಾಗಿ ಕುಳಿತು ಅವನಿಗೊರಗಿದ್ದಳು. ಅವರು ಸಹಜವೆಂಬಂತೆ ತೋರಿದ ಆ ವರ್ತನೆಯಿಂದ ರೇಖಾಳಿಗೆ ಮುಜುಗರವಾಗಿ ಗೋಡೆ ಕಡೆ ಮುಖ ತಿರುಗಿಸಿದ್ದಳು, ಯಾವುದೋ ನೆಪ ಮಾಡಿ ತನ್ನ ಮನೆಗೆ ಹಿಂತಿರುಗಿಬಿಟ್ಟಿದ್ದಳು.

* * *

ಅರುಣ, ಮಿಲಿಯರ ಸಂಬಂಧ ಮೊದಮೊದಲು ತನಗೊಂದು ಲಘುವಾದ, ತಮಾಷೆಯ ವಿಷಯವಾಗಿ ಕಾಣುತ್ತಿದ್ದದ್ದು ಈಗ ಮೂರುಹೊತ್ತೂ ತನ್ನನ್ನು ಕಾಡಲಾರಂಭಿಸಿದೆ ಅಂತ ರೇಖಾಗೆ ಅನ್ನಿಸುತ್ತಿದೆ. ಕೂತಲ್ಲಿ, ನಿಂತಲ್ಲಿ ಅವಳಿಗೆ ಅವರಿಬ್ಬರ ಜೋಡಿಜೀವನ ನೆನಪಾಗಲಾರಂಭಿಸಿದೆ. ಅದು ತನ್ನ ಇರವನ್ನೇ ವ್ಯಾಪಿಸುವಷ್ಟು ಬಲ ಪಡೆದುಕೊಂಡಿದೆ ಅನ್ನಿಸಲು ಪ್ರಾರಂಭವಾಗಿದೆ. ಮನೆಸಾಮಾನಿಗಾಗಿ ಅಂಗಡಿಗೆ ಒಬ್ಬಳೇ ಹೋಗಿಬಂದಾಗ, ಮಕ್ಕಳನ್ನು ಒಬ್ಬಳೇ ಡಾಕ್ಟರ್ ಹತ್ತಿರ ಕರೆದುಕೊಂಡು ಹೋಗುವಾಗ, ದೀರ್ಘವಾಗುತ್ತಾ ಹೋಗುವಂತೆ ಭಾಸವಾಗುವ ಸಂಜೆಗಳು ಮನೆಗೆಲಸ, ಮಕ್ಕಳ ಜವಾಬ್ದಾರಿಗಳಿಂದ ತುಂಬಿಕೊಂಡಾಗ ತನ್ನ ಒಂಟಿ ಯಾನವನ್ನು ಎದುರು ಮನೆಯ ಜೋಡಿಗಾನದೊಂದಿಗೆ ಮನಸ್ಸು ಹೋಲಿಸಿ, ಹೋಲಿಸಿ ಹಿಂಸೆಪಡುತ್ತದೆ. ಅದು ಅಸೂಯೆಯೋ, ತನ್ನ ಮನೆಯಲ್ಲಿಲ್ಲದ್ದು ಅಲ್ಲಿದೆ ಎಂಬ ಸಂಕಟವೋ, ಕೋಪವೋ, ತನಗೆ ಬದುಕು ಅನ್ಯಾಯ ಮಾಡಿದೆ ಎಂಬ ಭಾವವೋ ಏನೆಂದು ರೇಖಾಗೆ ತಿಳಿಯುತ್ತಿಲ್ಲ. ಇನ್ನೊಬ್ಬರು ನಮ್ಮೊಳಗೆ ಒಂದು ರೋಗವಾಗಿ ಬೆಳೆದುಬಿಡುವುದು ಎಂಥಾ ಯಾತನೆಯ ವಿಷಯ. ತನ್ನ ಮನೆ ತಲೆಬಾಗಿಲು ತೆಗೆದ ತಕ್ಷಣ ಕಾಣುವ ಅವರ ಸುಖದಾಂಪತ್ಯ ತನ್ನನ್ನೇಕೆ ಚುಚ್ಚಬೇಕು ?... ಆದರೆ, ಹೀಗೆ ಅಸೂಯೆಯಿಂದ ಯೋಚಿಸುವುದು ತುಂಬಾ ಸಣ್ಣತನವಲ್ಲವೇ ? ತನ್ನನ್ನು ಆಪ್ತಸ್ನೇಹಿತೆಯೆಂದು ಭಾವಿಸಿ ಎಲ್ಲವನ್ನೂ ತನ್ನ ಬಳಿ ಹೇಳಿಕೊಳ್ಳುವ ಮಿಲಿಗೆ ಒಳಿತನ್ನೆ ಬಯಸ ಬೇಕಲ್ಲದೆ ಅವಳ ಬಗ್ಗೆ ಹೊಟ್ಟೆ ಉರಿಪಡುವುದು ತಪ್ಪಲ್ಲವೇ ?... ಆದರೂ ತನ್ನ ಹೊಟ್ಟೆ ಉರಿಸಲೆಂದೇ ವಿಧಿ ಇಂತಹ ಚೆಲುವಾದ ದಾಂಪತ್ಯವನ್ನು ತನ್ನ ಕಣ್ಣ

ಮುಂದಿಟ್ಟಿದೆಯೇ ? ಮಿಲಿಗೆ ಸಿಕ್ಕಿದ್ದು ತನಗೇಕೆ ಸಿಕ್ಕಿಲ್ಲ? ತಾನು ಯಾವುದರಲ್ಲಿ ಕಡಿಮೆ ? ತನ್ನ ಇಪ್ಪತ್ತೊಂದನೇ ವರ್ಷದಲ್ಲಿ 'ಇವಳು ಇನ್ನೂ ಹೆಚ್ಚು ಓದಿಬಿಟ್ಟರೆ ಗಂಡು ಸಿಗುತ್ತಾನೆ ಇಲ್ಲವೋ' ಎಂದು ಹೆದರಿ (!) ದಬದಬ ಎಂದು ಮದುವೆ ಮಾಡಿಬಿಟ್ಟ ಅಪ್ಪ, ಅಮ್ಮಂದಿರೇ... ನೋಡುತ್ತಿದ್ದೀರಾ, ಇವತ್ತಿನ ನನ್ನ ಈ ನರಕವನ್ನು, ಮಗಳ ಮದುವೆ ಮಾಡಿ ಗೆದ್ದ ನೀವು, ನನ್ನನ್ನು ಬಾಗಿಲಿಲ್ಲದ ಸೆರೆಮನೆಗೆ ತಳ್ಳಿ, ಸೋಲಿಸಿಬಿಟ್ಟಿರಿ... ಅರುಣ, ಮಿಲಿಯದು ಅರೇಂಜ್ಡ್ ಮದುವೆಯಾದರೂ ಅವರ ಮದುವೆಯಲ್ಲಿ ಪ್ರೀತಿ ಜೀವಂತವಾಗಿ ಉಸಿರಾಡುತ್ತಿದೆಯಲ್ಲ, ನಾನೇನು ತಪ್ಪು ಮಾಡಿದೆ ಎಂದು ನನಗೀ ಕೊರತೆ... ಛೆ... ಹೀಗೆಲ್ಲ ಕಹಿಯೋಚನೆ ತುಂಬಿಕೊಳ್ಳುವುದು ತಪ್ಪಲ್ಲವೇ ?... ಪರಸ್ಪರ ವಿರುದ್ಧವಾದ ಇಂತಹ ಭಾವನೆಗಳಿಂದ ರೇಖಾ ತುಂಬ ದಿನ ನರಳುತ್ತಾಳೆ. ತನ್ನ ಮನಸ್ಸಿನ ರಣಾಂಗಣವನ್ನು, ದಿನಾ ಸಿಗುವ, ಈಗಂತೂ ಸಾಕಷ್ಟು ಆಪ್ತರೇ ಆಗಿರುವ ಮಿಲಿ, ಅರುಣರ ಮುಂದೆ ತೋರಿಸಿಕೊಳ್ಳಲಾಗದೆ, ಅವರ ಮುಂದೆ ಎಲ್ಲವೂ ಸರಿಯಾಗಿರುವಂತೆ ನಟಿಸಬೇಕಾದ ಹಿಂಸೆಯಿಂದಾಗಿ ಒದ್ದಾಡುತ್ತಾಳೆ. ತನ್ನ ಮತ್ತು ತನ್ನ ಗಂಡನ ಸಂಬಂಧದ ಸಂಭ್ರಮಗಳನ್ನು ಬಿಡುಬೀಸಾಗಿ ಮಿಲಿ ಹಂಚಿಕೊಳ್ಳುತ್ತಿದ್ದಾಗ, ಒಳಗೆ ನೋವಿನ ಅಗ್ನಿಪರ್ವತಗಳು ಸ್ಫೋಟಿಸುತ್ತಿದ್ದರೂ, ಮೇಲೆ ಮುಗುಳ್ನಗುತ್ತ ಇರಬೇಕಾದ ಇಕ್ಕಟ್ಟಿನಲ್ಲಿ ಬಹಳ ದಿನ ನರಳುತ್ತಾಳೆ.




ಬಹಳ ದಿನ ಹೀಗೆ ತಾನೇ ಸೃಷ್ಟಿಸಿಕೊಂಡ ನರಕದಲ್ಲಿ ಒದ್ದಾಡಿದ ರೇಖಾಳಿಗೆ ಒಂದು ದಿನ ವಿಚಿತ್ರವಾದ ಅನುಭವವುಂಟಾಗುತ್ತದೆ. ಆ ದಿನ ಅರುಣ, ಮಿಲಿಯರು ರೇಖಾಳ ಮನೆಯೆದುರಿನ ಪೋರ್ಟಿಕೋದಲ್ಲಿ ಸ್ವತಃ ರೇಖಾಳೇ ಮಾಡಿಕೊಟ್ಟ ಕಾಫಿಯನ್ನು ಸವಿಯುತ್ತಾ ಎಂದಿನಂತೆ ನಗುತ್ತಾ, ಮಾತಾಡುತ್ತಾ ಇದ್ದಾರೆ. ಕಾಫಿ ಕುಡಿದು, ಒಬ್ಬರನ್ನೊಬ್ಬರು ರೇಗಿಸಿಕೊಳ್ಳುತ್ತಾ, ಮಾತಾಡುತ್ತಾ ನಡೆದು ಹೋದವರನ್ನು ನೋಡುತ್ತಾ ಇದ್ದ ರೇಖಾಗೆ ಇದ್ದಕ್ಕಿದ್ದಂತೆ ಅನ್ನಿಸುತ್ತದೆ : ಅಲ್ಲ, ತಾನು ಇವರ ದಾಂಪತ್ಯದ ಬಗ್ಗೆ ಅದೆಷ್ಟು ಯೋಚಿಸುತ್ತೇನೆ, ಅದು ಹೇಗೆ ತನ್ನನ್ನು ಕಾಡುತ್ತಿದೆ ಎಂಬುದು ಇವರಿಗೇ ಗೊತ್ತಾಗುತ್ತಿಲ್ಲವಲ್ಲ. ಬಹುಶಃ ಅವರ ದಾಂಪತ್ಯ ಅದರ ಪಾಡಿಗೆ ಅದಿದೆ. ನಾನೇ ನನ್ನ ತಲೆಯೊಳಗಿನ ಪೂರ್ವಕಲ್ಪಿತ ಆದರ್ಶಗಳಿಂದಾಗಿ, ಅದರ ಬಗೆಗೆ ಯೋಚಿಸಿ, ಯೋಚಿಸಿ ಹಣ್ಣಾಗುತ್ತಿದ್ದೇನೆ. ಅರುಣ, ಮಿಲಿಯರೇ ತಮ್ಮ ದಾಂಪತ್ಯದ ಬಗ್ಗೆ ಇಷ್ಟು ಯೋಚಿಸುತ್ತಾರೋ ಇಲ್ಲವೋ, ನನ್ನ ಕಲ್ಪನೆಯಲ್ಲಿ ಆದರ್ಶ ದಾಂಪತ್ಯದ ಚಿತ್ರವೊಂದು ಬಲವಾಗಿ ಕೂತಿದೆ. ಗಂಡು ಹೆಣ್ಣಿನ ಸಹಸ್ಪಂದನ, ಒಡನಾಟಗಳಿಗೆ ನಾನು ತುಂಬ ಬೆಲೆ ಕೊಡುವುದರಿಂದ, ಜೀವನದಲ್ಲಿ ಅದು ತುಂಬ ಮುಖ್ಯವಾದದ್ದು ಎಂದು ಭಾವಿಸುವುದರಿಂದ ಹೀಗಾಗುತ್ತಿದೆ. ಇಷ್ಟಾಗಿ ಅರುಣ, ಮಿಲಿಯರ ದಾಂಪತ್ಯದ ಸೊಗಸು ತನಗೆ ನೋಡಲು ಸಿಕ್ಕಿದ್ದಕ್ಕಾಗಿ ತಾನು ಸಂತೋಷ ಪಡಬೇಕು. ಯಾವುದನ್ನು ತಾನು ಆದರ್ಶ ಎಂದು ಭಾವಿಸಿದ್ದೆನೋ ಅದು ಇಲ್ಲೇ ತನ್ನ ಕಣ್ಣೆದುರಿಗೇ ಅರಳಿದೆಯಲ್ಲ! ತನ್ನ ಕನಸು ಅರುಣ, ಮಿಲಿಯರ ದಾಂಪತ್ಯದ ರೂಪದಲ್ಲಿ ತನ್ನ ಎದುರಿಗೆ ಬಂದಿದೆ. ಇದು ಎಂತಹ ಅದೃಷ್ಟದ ವಿಚಾರ!... ಒಂಟಿತನದ ನೋವು ಆಗಾಗ ಕಾಡಿದರೂ, ತನ್ನ ಬಾಳು ಯಾವುದೋ ಒಂದು ಲಯದಲ್ಲಿ ಮೊದಲಿನಿಂದಲೂ ನಡೆದುಕೊಂಡುಹೋಗುತ್ತಿತ್ತು. ಈಗಲೂ ನಡೆದುಕೊಂಡುಹೋಗುತ್ತಿದೆ... ಮುಂದೆಯೂ ನಡೆದುಕೊಂಡುಹೋಗುತ್ತದೆ. ತನ್ನ ದಾಂಪತ್ಯವನ್ನು ಅರುಣ, ಮಿಲಿಯರ ದಾಂಪತ್ಯಕ್ಕೆ ಹೋಲಿಸಿಕೊಂಡು ತಾನು ತನ್ನ ಗೋಳನ್ನು ಜಾಸ್ತಿಮಾಡಿಕೊಳ್ಳಬಾರದು. ಹೂವಿನ ತೋಟವೊಂದನ್ನು ನೋಡಿದಂತೆ, ಬಹಳ ದಿನಗಳಿಂದ ತಾಜ್‌ಮಹಲನ್ನು ನೋಡಲು ಆಸೆಪಟ್ಟವರು ಅದನ್ನು ನೋಡಿದಾಗ ಖುಷಿಪಡುವಂತೆ, ತಾನು ಅವರ ಜೋಡಿಜೀವನವನ್ನು ನೋಡಿ ಸಂತೋಷ ಪಡಬೇಕೇ ಹೊರತು ಅಸೂಯೆಪಡಬಾರದು... ಈ ಆಲೋಚನೆಯಿಂದ ರೇಖಾಳ ಕಣ್ಣಲ್ಲಿ ನೀರು ಹರಿಯುತ್ತದೆ. ಇಷ್ಟು ದಿನದ ಸಂಕಟ, ಅಸೂಯೆ, ಕೋಪ ಎಲ್ಲವೂ ಕಣ್ಣೀರಾಗಿ ಹರಿದುಹೋಗಿ ತನ್ನ ಕನಸೊಂದನ್ನು ಸಾಕಾರರೂಪದಲ್ಲಿ ಕಂಡ ಕೃತಕೃತ್ಯಭಾವವೊಂದು ಮಾತ್ರ ಮನಸ್ಸಿನಲ್ಲಿ ಉಳಿಯುತ್ತದೆ. ಅವಳ ಮನಸ್ಸು ಹಗುರವಾಗುತ್ತದೆ.

* * *

ಅರುಣ್‌ಗೆ ಬೇರೆ ಊರಿಗೆ ವರ್ಗವಾಗಿದೆ. ಮಿಲಿಯೂ ವರ್ಗ ಮಾಡಿಸಿಕೊಂಡು ಹೊರಡುವುದರಲ್ಲಿದ್ದಾಳೆ. ಇನ್ನೆರಡು ದಿನದಲ್ಲಿ ಅವರು ಹೊರಡಲಿದ್ದಾರೆ. ಇಂತಹ ಸನ್ನಿವೇಶದಲ್ಲಿ ಒಂದು ದಿನ ಬೆಳಿಗ್ಗೆ ಅರುಣನ ಆಫೀಸಿಗೆ ಒಂದು ಫೋನು ಬರುತ್ತದೆ. ಅದು ರೇಖಾಳದು. ''ಅರುಣ್, ನಾನು ರೇಖಾ ಮಾತಾಡ್ತಿದೀನಿ. ಇವತ್ತು ಸಾಯಂಕಾಲ ನಾಕು ಗಂಟೆಗೆ ನಿಮ್ಮ ಆಫೀಸಿನ ಹತ್ತಿರದ ಕಾಮತ್ ಹೋಟೆಲಿನಲ್ಲಿ ಸಿಕ್ತೀರಾ ? ಸ್ವಲ್ಪ ಮಾತಾಡ್ಬೇಕು.'' ಅರುಣ್‌ಗೆ ಆಶ್ಚರ್ಯ ! ಇದೇನು ? ಎದುರು ಮನೆಯಲ್ಲೇ ಇರುವವಳು ಎಂದೂ ಇಲ್ಲದೆ ಆಫೀಸಿನ ಹತ್ತಿರ ಯಾಕೆ ಭೇಟಿ ಮಾಡುತ್ತಿದ್ದಾಳೆ? ನೋಡೋಣ, ಸಿಕ್ಕಿದಾಗ ಗೊತ್ತಾಗುತ್ತದಲ್ಲ ಅನ್ನಿಸಿ, ''ಆಯ್ತು, ಬನ್ನಿ ರೇಖಾ, ಸಿಗ್ತೀನಿ'' ಅನ್ನುತ್ತಾನೆ. ಮಿಲಿಗೆ ಒಳ್ಳೆಯ ಸ್ನೇಹಿತೆಯಾದರೂ ತನ್ನ ಹತ್ತಿರ ಸೌಜನ್ಯದ, ಅತಿಥಿ ಸತ್ಕಾರದ ಮಾತುಗಳನ್ನು ಬಿಟ್ಟು ಬೇರೆ ಯಾವ ಮಾತನ್ನೂ ಆಡದ ರೇಖಾ ಇದ್ದಕ್ಕಿದ್ದಂತೆ ತನ್ನನ್ನು ಒಂಟಿಯಾಗಿ ಭೇಟಿ ಮಾಡುವ ಕಾರಣವೇನಿರಬಹುದು ಎಂಬ ಕುತೂಹಲ ಅರುಣನನ್ನು ತುಂಬಿಕೊಳ್ಳುತ್ತದೆ.

ಹೋಟೆಲಿನಲ್ಲಿ ಅರುಣ್, ರೇಖಾ ಎದುರುಬದುರಾಗಿ ಕುಳಿತಿದ್ದಾರೆ. ವೇಟರ್‌ಗೆ ಕಾಫಿ ತರುವಂತೆ ಅರುಣ ಹೇಳಿದ ನಂತರ, ರೇಖಾ ಯಾವುದೇ ಪೀಠಿಕೆಯಿಲ್ಲದೆ ಮಾತು ಶುರುಮಾಡಿಬಿಡುತ್ತಾಳೆ. ''ಅರುಣ್, ನಿಮ್ಮ ಹೆಂಡತಿ ಮಿಲಿ ತುಂಬ ಅದೃಷ್ಟವಂತೆ. ಏಕೆಂದರೆ, ನೀವು ಅವಳಿಗೆ ಬರೀ ಗಂಡನಾಗಿಲ್ಲ, ಒಡನಾಡಿಯಾಗಿದ್ದೀರಿ, ಸಂಗಾತಿಯಾಗಿದ್ದೀರಿ, ಆತ್ಮಸಖನಾಗಿದ್ದೀರಿ. ಹೆಣ್ಣಿಗಿರುವ ಗಾಢವಾದ ಪ್ರೀತಿಯ ಮತ್ತು ಸಾಂಗತ್ಯದ ಅಗತ್ಯವನ್ನು ನೀವು ಪೂರ್ತಿ ಮಾಡಿದ್ದೀರಿ. ನನಗೆ ನಿಮ್ಮನ್ನು, ನಿಮ್ಮ ದಾಂಪತ್ಯವನ್ನು ನೋಡಿದರೆ ತುಂಬ ಸಂತೋಷ ಆಗುತ್ತೆ. ನಿಮಗೆ ಅಭಿನಂದನೆ. ನಿಮ್ಮ ಮನಸ್ಸಿನ ಒಳಮನೆಯೊಳಗೆ ಮಿಲಿಯನ್ನು ಬಿಟ್ಟುಕೊಂಡು ಅವಳಿಗೆ ಅದೆಷ್ಟು ಆತ್ಮವಿಶ್ವಾಸವನ್ನು ಕೊಟ್ಟಿದ್ದೀರಿ...''. ಕಾಫಿ ಬಂತು. ಇಬ್ಬರೂ ಕುಡಿಯಲಾರಂಭಿಸಿದರು. ಮತ್ತೆ ರೇಖಾ ಮುಂದುವರಿಸಿದಳು.

''ನಿಮಗೆ ಗೊತ್ತಿಲ್ಲ, ಅರುಣ್. ಮಿಲಿಯ ಜೀವನದ ಅತಿದೊಡ್ಡ ಸಮಸ್ಯೆಯೊಂದನ್ನು ನೀವು ಪರಿಹರಿಸಿದ್ದೀರಿ. ಒಬ್ಬ ಹೆಣ್ಣಿನ ಮಟ್ಟಿಗೆ ಪ್ರೀತಿಯ ಕೊರತೆಗಿಂತ ದೊಡ್ಡ ಸಮಸ್ಯೆ ಬೇರಾವುದೂ ಇಲ್ಲ.. ನೀವು ಇಡೀ ಜೀವನ ಮಿಲಿಗೆ ಈ ಪ್ರೀತಿಯನ್ನು ಕೊಡಬೇಕು ಅರುಣ್. ಅವಳು ಏನೇ ತಪ್ಪು ಮಾಡಿದರೂ ಈ ಪ್ರೀತಿಯಿಂದ ಮಾತ್ರ ಅವಳನ್ನು ತಪ್ಪಿಸಬೇಡಿ. ಏಕೆಂದರೆ... ಏಕೆಂದರೆ... ಪ್ರೀತಿ ಇಲ್ಲದೆ ಬದುಕುವುದು ತುಂಬ ಕಷ್ಟ.'' ಅರುಣನಿಗೆ ತನ್ನ ಮುಖ ಕಾಣದಂತೆ ರೇಖಾ ಬೇರೆ ಕಡೆ ತಿರುಗಿದಳು. ಅವಳ ಮುಖ ಕಂಡಿದ್ದರೆ ಅರುಣನಿಗೆ ಅವಳ ಕಣ್ಣುಗಳಲ್ಲಿ ಮಡುಗಟ್ಟಿ ನಿಂತಿದ್ದ ನೀರು ಕಂಡಿರುತ್ತಿತ್ತು.

ಕಾಫಿ ಕುಡಿದು ಬಾಯಿ ಒರೆಸಿಕೊಂಡ ನೆಪದಲ್ಲಿ ಕಣ್ಣನ್ನೂ ಒರೆಸಿಕೊಂಡ ರೇಖಾ, ತನ್ನ ಪರ್ಸಿನಿಂದ ವಸ್ತುವೊಂದನ್ನು ತೆಗೆದು ಅರುಣನಿಗೆ ಕೊಟ್ಟಳು. ಜೋಡಿಹಕ್ಕಿಗಳ ಪಿಂಗಾಣಿಯ ಸುಂದರವಾದ ಶಿಲ್ಪಕಲಾಕೃತಿ ಅದು. ಗಾಜಿನ ಡಬ್ಬಿಯಲ್ಲಿಟ್ಟಿದ್ದರು. ರೇಖಾ ಹೇಳಿದಳು, ''ದಯವಿಟ್ಟು ಇದನ್ನಿಟ್ಟುಕೊಳ್ಳಿ ಅರುಣ್. ನಿಮ್ಮ ಸುಂದರ ದಾಂಪತ್ಯಕ್ಕೆ ನನ್ನ ಸಣ್ಣ ಕಾಣಿಕೆ ಇದು. ನಿಮಗೆ ಒಳ್ಳೇದಾಗ್ಲಿ. ನಿಮ್ಮ ದಾಂಪತ್ಯದಲ್ಲಿ ಪ್ರೀತಿ ಹೀಗೇ ಯಾವಾಗಲೂ ಜೀವಂತವಾಗಿರ್ಲಿ. ನಾನಿನ್ನು ಬರ್ತೀನಿ'' ಅಂದವಳೇ ಅರುಣನಿಗೆ ಮಾತಾಡುವ ಅವಕಾಶವನ್ನೂ ಕೊಡದೆ ಹೋಗಿಯೇಬಿಟ್ಟಳು.

ತಬ್ಬಿಬ್ಬಾದ ಅರುಣ್, ರೇಖಾ ಕೊಟ್ಟ ಜೋಡಿಹಕ್ಕಿಯ ಶಿಲ್ಪವನ್ನು ಕೈಯಲ್ಲಿ ಹಿಡಿದು, ಅವಳು ಹೋದ ಕಡೆಯೇ ನೋಡುತ್ತಾ ಕುಳಿತುಬಿಟ್ಟ. ರೇಖಾ ಇದೇಕೆ ತನ್ನನ್ನು ಇದ್ದಕ್ಕಿದ್ದಂತೆ ಭೇಟಿ ಮಾಡಿ ಹೀಗೆ ಉಡುಗೊರೆ ಕೊಟ್ಟಳು ಎಂದು ಅವನಿಗೆ ಗೊಂದಲವಾಯಿತು. ಆ ಗೊಂದಲ ಅವನ ಜೀವನವಿಡೀ ಹಾಗೆಯೇ ಉಳಿಯಲಿತ್ತು.

ಚಿತ್ರಲೇಖಾ








ದೇವರು ಬಡವರ ಮಕ್ಕಳಿಗೆ ಐಷಾರಾಮಿ ಜೀವನ ಕೊಡದಿದ್ದರೂ, ಸೌಂದರ್ಯ, ಆರೋಗ್ಯ ಸಂಪತ್ತನ್ನು ದಯಪಾಲಿಸುವಲ್ಲಿ ಜಿಪುಣತನ ಪ್ರದರ್ಶಿಸಿಲ್ಲ – ಎನ್ನುವ ಮಾತಿಗೆ ರುಕ್ಕು ಒಂದು ಮಾದರಿ.

ಹದಿನೆಂಟರ ಅಂಚಿನಲ್ಲಿರುವ ರುಕ್ಕು ಬಡಕುಟುಂಬದಲ್ಲಿ ಅರಳಿದ ಸುಂದರ ಪುಷ್ಪ. ಖ್ಯಾತ ಪ್ರಸಿದ್ಧ ಇಂಜಿನಿಯರಿಂಗ ಕಾಲೇಜಿನ ಸೆರಗಿನಲ್ಲಿ ಮಲಗಿರುವ ಸುರತ್ಕಲ್ ಹೊಸ ಬಡಾವಣೆಯಲ್ಲಿ, ಚಿಕ್ಕಂದಿನಲ್ಲೇ ತಂದೆ-ತಾಯಿಯರನ್ನು ಕಳೆದುಕೊಂಡ ದುರ್ದೈವಿ. ದೂರದ ನೆಂಟರ ಮನೆಯಲ್ಲಿ ವಾಸ್ತವ್ಯ. ಕಷ್ಟದ ಕಣ್ಣೀರಲ್ಲಿ ಕೈತೊಳೆದು ಬೆಳೆದವಳು. ಸರ್ಕಾರಿ ಶಾಲೆಯಲ್ಲಿ ಹಾಯಿಸ್ಕೂಲ ತನಕ ಓದು. ಓದಿನ ಜೊತೆಗೆ ಮುಂಜಾನೆ ಮನೆಯ ಮುಸುರಿ ಕೆಲಸವಾದರೆ ಸಂಜೆ ಹೊತ್ತು ಬೀಡಿ ಸುತ್ತುವುದು ಅವಳ ದಿನಚರಿಯಲ್ಲಿ ಸೇರಿದ್ದವು.

ಹಾಯಿಸ್ಕೂಲ ಮುಗಿಸಿದ ಮೇಲೆ ವಿಧಿ ಇಲ್ಲದೆ 'ಹೌಸ್‌ಮೇಡ್' ವೃತ್ತಿಯನ್ನು ಹಿಡಿಯುವ ಅನಿವಾರ್ಯತೆ. ಕಾಲೇಜ ಕ್ಯಾಂಪಸ್‌ನಲ್ಲಿಯ ಕೆಲವು ಮನೆಗಳನ್ನು ಹೊಂದಿಸಿಕೊಂಡಳು.



ರುಕ್ಕು ಮನೆಗೆಲಸದಲ್ಲಿ ಬಲು ಚುರುಕು, ಕಷ್ಟಸಹಿಷ್ಣು. ಹೊರೆ ಕೆಲಸ ಹೇರಿದರೂ ತುಟಿಪಿಟಿಕ್ಕೆನ್ನದೆ ಝಟಪಟ ಮಾಡಿ ಮುಗಿಸುವುದರಲ್ಲಿ ನಿಸ್ಸೀಮಳು. ಅವಳ ಕೈ-ಬಾಯಿ ಭಾಳ ಶುದ್ಧ. ಯಾವುದಕ್ಕೂ ಆಶೆಪಡದ ಬಡಜೀವ – ಹೀಗೆ ಮನೆಯೊಡತಿಯರ ಪ್ರಶಂಸೆ ಮಾತು.

ಕ್ಯಾಂಪಸ್ ಹೆಂಗಸರಿಗೆ ರುಕ್ಕುವಿನ ಮೇಲೆ ಎಲ್ಲಿಲ್ಲದ ಪ್ರೀತಿ. ಅವರಿಗೆ ಕ್ಯಾಂಪಸ್ಸಿನ ಸೂಕ್ಷ್ಮ ಸಮಾಚಾರ ಸಿಗುತ್ತಿದ್ದದ್ದು ರುಕ್ಕುವಿನಿಂದ. ರುಕ್ಕು ಮನೆಗೆಲಸ ಮುಗಿಸಿದ ಮೇಲೆ ಹತ್ತು ನಿಮಿಷವಾದರೂ ಮನೆಯೊಡತಿಯ ಜೊತೆ ಪಟ್ಟಾಂಗ ಹೊಡೆಯೋದು ಅಭ್ಯಾಸ. ಯಾವುದೇ ಬಿಂಕು ಬಡಿವಾರಗಳಿಲ್ಲದೆ ಅರಳು ಸಿಡಿಸಿದಂತೆ ಪಟಪಟನೆ ಮಾತಾಡುವ ಮಾತಿನ ಮಲ್ಲಿ, ಚಲ್ಲಾಟದ ಚೆಲುವೆ.

ಹೆಂಗಸರಿಗೆ ಬಹಳಷ್ಟು ಹಿಡಿಸಿದ್ದು ರುಕ್ಕುವಿನ – ಬಿಚ್ಚುಮನಸ್ಸು, ನೇರ ನಡೆನುಡಿ, ಶಾಂತಸ್ವಭಾವ, ಒಳ್ಳೆ ಶೀಲ. ಅವಳಲ್ಲಿ ಇನ್ನೊಂದು ಎದ್ದುಕಾಣುವ ಲಕ್ಷಣ – ಅವಳದೇ ಆದ ಫ್ಯಾಶನ್. ಕೆಲವು ಮಹಿಳೆಯರಂತು ಅವಳ ಫ್ಯಾಶನ್ ಅನುಕರಣೆ ಮಾಡುತ್ತಿದ್ದರು – ಹೀಗೊಂದು ತಮಾಷೆ ಮಾತು.

ನಿಜ ಹೇಳಬೇಕೆಂದರೆ... ರುಕ್ಕುವಿನ ಹೆಸರು ಕ್ಯಾಂಪಸ್ಸಿನ ಮಹಿಳೆಯರ ಪರಿಧಿಗಷ್ಟೇ ಸೀಮಿತವಾಗಿರದೆ ಸಾಲಾಗಿ ನಿಂತಿರುವ ಐದು ಹಾಸ್ಟೆಲ್ ಹುಡುಗರವರೆಗೆ ಹರಡಿತ್ತು. ಹುಡುಗರು ಅವಳಿಗೆ 'ಫ್ಯಾಶನ್ ರುಕ್ಕು', 'ಬೋಲ್ಡ್ ಆಂಡ್ ಬ್ಯೂಟಿಫುಲ್' ಎಂಬ ಹಣೆಪಟ್ಟಿ ಹಚ್ಚಿದ್ದರು. ಹಾಗಂತ ಹುಡುಗರೆಂದೂ ಅವಳನ್ನು ಕೀಳು ಭಾವನೆಯಿಂದ ಕಂಡಿಲ್ಲ... ಸೌಜನ್ಯತೆಯ ಎಲ್ಲೆ ಮೀರಿ ವರ್ತಿಸಿಲ್ಲ. ಅವಳ ಮುಖ ದರ್ಶನದಿಂದ ಹೃದಯದಲ್ಲಿ ಮೂಡುವ ಮಧುರ ಭಾವನೆಗಳ ಕ್ಷಣಿಕ ಸಂತೋಷಕ್ಕಾಗಿ ದಿನದಲ್ಲಿ ಒಂದು ಸಲವಾದರೂ ರುಕ್ಕುವಿನ ಮುಖ ನೋಡುವ ಚಪಲ.

ರುಕ್ಕುವಿನ ಮುಖದರ್ಶನವಾಗದ ದಿವಸ ನೋಡಬೇಕು ಹುಡುಗರ ಪಾಡು! ತರಗತಿಗಳಲ್ಲಿ ಹಾಜರಾತಿ ಗಣನೀಯವಾಗಿ ಇಳಿಯುತ್ತಿತ್ತು. ಹಾಜರಿದ್ದವರಿಗೆ ಪಾಠದ ಕಡೆಗೆ ಗಮನ ಹರಿಸಲು ಕಷ್ಟಸಾಧ್ಯ. ಅಷ್ಟೊಂದು ಪ್ರಭಾವ ಬೀರಿದ್ದಳು ರುಕ್ಕು.

ರುಕ್ಕುವಿನ ದಿನಚರಿ ಶುರುವಾಗುವುದು ಮುಂಜಾನೆ ಏಳು ಗಂಟೆಗೆ. ಮನೆಗೆಲಸಕ್ಕೆ

ಡಾ|| ರುದ್ರಯ್ಯ ವಿ. ಗದಗ

# ಮೇಡ್ ಸರ್ವೆಂಟ್ ರುಕ್ಕು

ಹೋಗಲು ಹಾಸ್ಟೆಲ್ ಮುಂದಿರುವ ಡಾಂಬರ ರಸ್ತೆ ಮೇಲೆ ನಡೆದು ಹೋಗಬೇಕು. ಹೀಗೆ ಹೋಗುತ್ತಿರುವಾಗ ಹುಡುಗರು ರೂಂ ಕಿಟಕಿಗಳ ಬಳಿ ನಿಂತು ರುಕ್ಕುವನ್ನೇ ಎವೆಯಿಕ್ಕದೆ ನೋಡೋದು ದಿನಚರಿ. ಕೆಲವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಸಿಳ್ಳುಹಾಕೋದು, ಸಂತೋಷ ಉಕ್ಕಿದಾಗ, ''ರುಕ್ಕು ಆಯೇರೆ... ರುಕ್ಕು...'' ಎಂದು ರಾಗಬದ್ಧವಾಗಿ ಹಾಡಿದರೆ ಇನ್ನು ಹಲವರು ''ಯಾಹೂ... ರುಕ್ಕು...'' ಎಂದು ಕಿರುಚುತ್ತಿದ್ದರು. ರುಕ್ಕು ಯಾವುದಕ್ಕೂ ಕ್ಯಾರೇ ಎನ್ನದೆ ತನ್ನ ಪಾಡಿಗೆ ತಾನು ಹೋಗುತ್ತಿದ್ದಳು. ರುಕ್ಕು ಹುಡುಗರನ್ನು ಅದೆಷ್ಟು ಮರುಳುಗೊಳಿಸಿದ್ದಳು ಎನ್ನುವುದಕ್ಕೆ ಒಂದು ಪ್ರಸಂಗ ಹೀಗಿದೆ –

ಅದೊಂದು ದಿನ ರೂಂಮೇಟ್ ವಿವೇಕ, ''ಕಲ್ಲೇಶಿ, ತಿಂಡಿಗೆ ಹೊತ್ತಾಗುತ್ತೆ... ಕಾಲೇಜ ಬೆಲ್ ಹೊಡೆಯಿತು... ಕ್ಲಾಸಿಗೆ ತಡವಾಗುತ್ತೆ ಏಳಲೇ...'' ಎಂದು ಒದರಿದರೂ – ಹರ ಇಲ್ಲ... ಶಿವ ಇಲ್ಲ... ! ಕೊನೆಗೆ ಒಂದು ಮೋಹಿನಿಯ ಅಸ್ತ್ರ ಪ್ರಯೋಗಿಸಿದ.

''ಕೊನೆ ಬ್ಲಾಕ್ ಮುಂದ ರುಕ್ಕು ಕಾಣ್ಸಕೊಂಡ್ಲು... ಇನ್ನೇನು ನಮ್ ಬ್ಲಾಕ್ ಎದುರು ಬರ್ತಾಳೆ...'' ಇಷ್ಟು ಹೇಳಿದಾಕ್ಷಣ ಕಲ್ಲೇಶಿ ದಿಗ್ಗನೆ ಮೇಲೆದ್ದು, ಕಿಟಕಿ ಬಳಿ ನಿಂತು ರುಕ್ಕುನನ್ನೇ ನೋಡುತ್ತ ನಿಂತ. ಕಣ್ಮರೆಯಾದ ಮರುಕ್ಷಣ ಬಕೆಟ್, ಚೆಂಬು, ಹಿಡಿದು ಸಿಳ್ಳುಹಾಕುತ್ತ ಬಾತ್‌ರೂಂ ಕಡೆ ಹೆಜ್ಜೆಹಾಕಿದ.

ಇದು ಕಲ್ಲೇಶಿಯೊಬ್ಬನ ಕತೆಯಾಗಿರದೆ ಹೆಚ್ಚು ಕಮ್ಮಿ ಎಲ್ಲಾ ಹುಡುಗರದೂ – ಅದೇ ರಾಗ ಅದೇ ತಾಳ.

* * *

ಹೀಗೆ ಸಂತೋಷದ ದಿನಗಳು ಕಳೆದುಹೋಗುತ್ತಿರುವಾಗ ಏಕಾಏಕಿ ಒಂದು ವಿಲಕ್ಷಣ ಘಟನೆ ಬೆಳಕಿಗೆ ಬಂತು.

ಅದೊಂದು ದಿನ ಬೆಳಿಗ್ಗೆ ಏಳು ಗಂಟೆಗೆ ಹಾಸ್ಟೆಲ್ ರಸ್ತೆ ಮೇಲೆ ರುಕ್ಕು ನಡೆದುಹೋಗುವ ದೃಶ್ಯ ಹುಡುಗರ ಕಣ್ಣಿಗೆ ಸಿಗಲಿಲ್ಲ. ರುಕ್ಕು ಕ್ಯಾಂಪಸ್ ಮಹಿಳೆಯರ ಕಣ್ಣಿಗೆ ಬೀಳಲಿಲ್ಲ. ಮನೆಗೆಲಸಕ್ಕೆ ಬರಲಿಲ್ಲ. ಹಾಗಾದರೆ ರುಕ್ಕು ಏನಾದಳು... ? ನಿಗೂಢ ಪ್ರಶ್ನೆ.

ಇಂಥಾದೊಂದು ಮಸಾಲೆ ವಿಷಯ ಈ ಜನರಿಗೆ ಸಿಕ್ಕರೆ ಸುಮ್ಮನೆ ಬಿಟ್ಟಾರೆ... ? ಬಿಟ್ಟರೆ ಇಡೀ ಕುಲಕ್ಕೆ ಅಪಮಾನ ಬಗೆದಂತೆ. ರುಕ್ಕುವಿನ ಬಗ್ಗೆ ಹುಟ್ಟಿಕೊಂಡ ಗಾಳಿಮಾತುಗಳು ರೆಕ್ಕೆ-ಪುಕ್ಕ ಅಂಟಿಸಿಕೊಂಡು ಕ್ಯಾಂಪಸ್ ತುಂಬಾ ಹಾರಾಡಿದವು.

ರುಕ್ಕು ಮನೆಗೆಲಸದಲ್ಲಿ ಬಲು ಚುರುಕು, ಕಷ್ಟಸಹಿಷ್ಣು. ಹೊರೆ ಕೆಲಸ ಹೇರಿದರೂ ತುಟಿಪಿಟಿಕ್ಕೆನ್ನದೆ ಝಟಪಟ ಮಾಡಿ ಮುಗಿಸುವುದರಲ್ಲಿ ನಿಸ್ಸೀಮಳು. ಅವಳ ಕೈ-ಬಾಯಿ ಭಾಳ ಶುದ್ಧ. ಯಾವುದಕ್ಕೂ ಆಶೆಪಡದ ಬಡ ಜೀವ – ಹೀಗೆ ಮನೆಯೊಡತಿಯರ ಪ್ರಶಂಸೆ ಮಾತು. ಕ್ಯಾಂಪಸ್ ಹೆಂಗಸರಿಗೆ ರುಕ್ಕುವಿನ ಮೇಲೆ ಎಲ್ಲಿಲ್ಲದ ಪ್ರೀತಿ. ಅವರಿಗೆ ಕ್ಯಾಂಪಸ್ಸಿನ ಸೂಕ್ಷ್ಮ ಸಮಾಚಾರ ಸಿಗುತ್ತಿದ್ದದ್ದು ರುಕ್ಕುವಿನಿಂದ. ರುಕ್ಕು ಮನೆಗೆಲಸ ಮುಗಿಸಿದ ಮೇಲೆ ಹತ್ತು ನಿಮಿಷವಾದರೂ ಮನೆಯೊಡತಿಯ ಜೊತೆ ಪಟ್ಟಾಂಗ ಹೊಡೆಯೋದು ಅಭ್ಯಾಸ. ಯಾವುದೇ ಬಿಂಕು ಬಡಿವಾರಗಳಿಲ್ಲದೆ ಅರಳು ಸಿಡಿಸಿದಂತೆ ಪಟಪಟನೆ ಮಾತಾಡುವ ಮಾತಿನ ಮಲ್ಲಿ, ಚಲ್ಲಾಟದ ಚೆಲುವೆ.

ಹೆಂಗಸರು ತಮ್ಮ ಹೆಗಲೇರಿದ ಮನೆಗೆಲಸದ ಭಾರ ಭರಿಸಲಾಗದೆ ರುಕ್ಕುವಿಗೆ ಹಿಡಿಶಾಪ ಹಾಕಿದರು. ದಿನವಿಡೀ ದುಡಿದು, ಬೆವರು ಸುರಿಸಿ, ಅಧಿಕ ಕೊಬ್ಬು ಕರಗಿಸಿ ಸ್ಲಿಮ್ಮಾದರು. ಕೆಲಸದ ಮೇಲಿನ ಕೋಪವನ್ನು ಮಕ್ಕಳು – ಗಂಡನ ಮೇಲೆ ಕಾರಿ ತೃಪ್ತಿಪಟ್ಟರು. ರುಕ್ಕು ಆದಷ್ಟು ಬೇಗ ವಾಪಸ್ ಬರುವಂತೆ ಮಾಡಲು ಸದಾಶಿವನಿಗೆ ಲಂಚದ ಹರಕೆ ಹಾಕಿಕೊಂಡರು.

ಹೆಂಗಸರ ಪಾಡು ಹೀಗಾದರೆ ಹುಡುಗರ ಕತೆಯೇ ಬೇರೆ. ದಿನನಿತ್ಯ ಏಳು ಗಂಟೆಗೆ ರೂಂ ಕಿಡಕಿ ಸರಳುಗಳ ಮಧ್ಯೆ ಪಿಳಿಪಿಳಿ ಬಿಡುತ್ತಿದ್ದ ಕಣ್ಣುಗಳು ಅದೃಶ್ಯವಾದವು. ತಾರಕ ಸ್ವರದ ಸಂಗೀತ, ಸಿಳ್ಳಿನ ಶಬ್ದ ಎಲ್ಲವೂ ಈಗ ನಿಶ್ಶಬ್ದ.

ಮೆಸ್ ಊಟ ಸೇರದೆ ಗೂಡಂಗಡಿಗಳಲ್ಲಿ ಡಬಲ್ ಆಮ್ಲೇಟ್ ತಿಂದು ಹಸಿವನ್ನು ಹಿಂಗಿಸಿದರು. ಕ್ಲಾಸಿಗೆ ಚಕ್ಕರ್ ಹೊಡೆದು, ರೂಂಗಳಲ್ಲಿ ಕುಳಿತು, ಚರ್ಚೆಮಾಡುತ್ತಾ ಸಾಕಷ್ಟು ಬೀಡಿ, ಸಿಗರೇಟ್ ಸುಟ್ಟರು. ಗುಟ್ಕಾ ಜಗಿದರು. ಕೆಲವರು ಸದಾನಂದಕ್ಕೆ ಹೋಗಿ, ಬೀರು ಕುಡಿದು ಮನದ ದುಗುಡ ಬಿಟ್ಟುಬಂದರು. ಇನ್ನು ಹಲವರು ಮಂಗಳೂರಿಗೆ ಹೋಗಿ, 'ಆಪ್ತಮಿತ್ರ' ಮ್ಯಾಟ್ನಿ ನೋಡಿ, ಹಂಪನಕಟ್ಟಾದಲ್ಲಿ ಹುಡುಗಿಯರ ಬೆನ್ನ ಹಿಂದೆ ಸುತ್ತಾಡಿ ಚುರುಕಾಗಿ ಬಂದರು. ಕೆಲವರಂತೂ ದೇವದಾಸನ ವೇಷದಲ್ಲಿ ಬೀದಿ, ಬಗೀಚು, ಬೀಚು ಸುತ್ತಾಡಿದರು. ಹುಡುಗರ ಚರ್ಚೆಯಿಂದ ಮೂಡಿಬಂದ ಕೆಲವು ಅನಿಸಿಕೆಗಳು ಹೀಗಿವೆ –

ರುಕ್ಕುವಿಗೆ ಮೆದುಳುಜ್ವರ ಬಂದು ಕಂಕನಾಡಿ ಆಸ್ಪತ್ರೆಯಲ್ಲಿ ಐ.ಸಿ. ವಾರ್ಡಿನಲ್ಲಿ ಕೋಮಾದಲ್ಲಿ ಬಿದ್ದುಕೊಂಡಿರಬಹುದೇ... ? ಚೋಟಾರಾಜನ್ ಚೇಲಾಗಳು ಅವಳನ್ನು ಕಿಡ್ನಾಪ್‌ಮಾಡಿ ಬಾಂಬೆಗೆ ಎಳಕೊಂಡು ಹೋಗಿರಬಹುದೇ... ? ಇಲ್ಲಾ ನಮ್ಮಲ್ಲಿಯ ಹುಡುಗನನ್ನು ರುಕ್ಕು ಹಾರಿಸಿಕೊಂಡು ಹೋಗಿರಬಾರದೇಕೆ... ? ... ಬರೀ ಊಹೆಗಳು.

ಕೊನೆ ಊಹೆ ನಿಜವಿರಲಿಕ್ಕೆ ಸಾಕು. ಲವ್ ವಿಷಯದಲ್ಲಿ ಯಾರನ್ನೂ ನಂಬಲಾಗದು. ಸರಿ ಬ್ಲಾಕ್ ಲೀಡರ್ಸ್ ತಮ್ಮ ಬ್ಲಾಕಿನ ಹುಡುಗರ ಜಾತಕ ಜಾಲಾಡಿದರು. ಯಾವನೂ ತಪ್ಪಿಸಿಕೊಂಡಂತೆ ಕಂಡುಬರಲಿಲ್ಲ. ಹಾಗಾದರೆ ರುಕ್ಕುಗೆ ಏನಾಗಿರಬಹುದು... ? ಚಿದಂಬರ ರಹಸ್ಯ !

* * *

ಎರಡು ತಿಂಗಳ ನಂತರ...

ಅದೊಂದು ದಿನ ನಾನು ಕಾಲೇಜಿಗೆ ರಜಾ ಹಾಕಿ ರೂಂನಲ್ಲಿ ಕುಳಿತು ಯಾವುದೋ ಸಂಶೋಧನೆಯ ಪೇಪರ್ ಬರೆಯುತ್ತಿದ್ದೆ. ನನ್ನಾಕೆ ಮಕ್ಕಳನ್ನು ಸ್ಕೂಲಿಗೆ ಅಟ್ಟಿ ಬಂದು ಸುಧಾರಿಸಿಕೊಳ್ಳಲು ದಿವಾನದ ಮೇಲೆ ಉರುಳಿದಳು.

ಹತ್ತು ನಿಮಿಷ ಕಳೆದಿರಲಿಲ್ಲ, ಬಾಗಿಲ ಕರೆಗಂಟೆ ಸಂಗೀತ ಹೊರಡಿಸಿತು. ಕದ ತೆರೆದ ನನ್ನವಳು ಬೆರಗಾಗಿ ನಿಂತಳು ! ಹುಡುಕುತ್ತಿರುವ ಬಳ್ಳಿ ಕಾಲಿಗೆ ತೊಡರಿಕೊಂಡಂತಹ ಅನುಭೂತಿ ! ಹೊಸಲಿನಾಚೆಗೆ ನಿಂತಿದ್ದಳು ರುಕ್ಕು – ಮಂದಹಾಸ ಬೀರುತ್ತ.

''ರುಕ್ಕು, ಹೇಳ್ದೆ-ಕೇಳ್ದೆ ಇಷ್ಟು ದಿವ್ಸ ನೀ ಅದ್ಯಾವ ಹಾಳು ಸುಡುಗಾಡಿಗೆ ಹೋಗಿದ್ದೆ ?'' ನನ್ನವಳು ಎದೆಯಾಳದಲ್ಲಿಯ ಕೋಪನೆಲ್ಲಾ ಕಾರಿದಳು.

''ಅಕ್ಕಾರ ನಾನು ನಿಮ್ಗೆ 'ಒಂದು ಸರ್‌ಪ್ರೈಸ್ ನ್ಯೂಜ್' ಹೇಳೋದೈತ್ರಿ'' ರುಕ್ಕು ನಯವಾಗಿ ಬೆಣ್ಣೆ ಸವರಿ, ಅಕ್ಕನ ಕೋಪವನ್ನು ಜರ್ರನೆ ಇಳಿಸಿದಳು.

''ರುಕ್ಕು, ಅದೇನ್ ವಿಷಯ ಲಗೂನ್ ಹೇಳವ್ವ'' ರುಕ್ಕುನನ್ನು ಪುಸಲಾಯಿಸಿದಳು.

''ಮೊದ್ಲು ಮನೆಗೆಲಸ, ಮಾತುಕತೆ ಆಮ್ಯಾಲೆ'' ಒಂದು ಹೊಡೆತ ಎರಡು ತುಂಡು. ಮನೆಗೆಲಸವೆಲ್ಲ ಮುಗಿಸಿದ ನಂತರ –

''ಅಕ್ಕಾರ ನಂನ ಬದುಕು ತೆರೆದ ಪುಸ್ತಕ. ನಿಮ್ಗೆ ಚೆನ್ನಾಗಿ ಗೊತ್ತು. ನಂನ ನೆಂಟರು ಒಬ್ಬ ಪಡಪೋಸಿನ್ ನಂಗೆ ಗಂಟು ಹಾಕಾಕ ಹೊಂಚು ಹೂಡ್ಯಾರ. ನಂಗದು ಸುತರಾಂ ಇಷ್ಟವಿಲ್ಲ. ನಂನ ಬೇಕು ಬೇಡಗಳು ಅವ್ರ ದರಕಾರಿನಾಗ ಇಲ್ಲ. ಅವ್ರಿಗೆ ಬೇಕಾಗಿರೋದು ದುಡ್ಡು ಕೈಬಿಡ್ಡ ನಂನ ಲಗ್ನವಾಗಬೇಕು. ಅದಕ್ಕೆ ನಾನೊಂದು ನಿರ್ಧಾರಕ್ಕೆ ಬಂದೀನಿರೀ'' ರುಕ್ಕು ಗಂಭೀರವಾದಳು.

''ರುಕ್ಕು, ಯಾವುದವ್ವ ನಿಂನ ನಿರ್ಧಾರ ?''

''ಅಕ್ಕಾರ, ನಾನು... ಒಬ್ಬ ಹುಡುಗನ್... ಲವ್ ಮಾಡೀನಿರಿ. ಸನಿದ್ರಾಗ ನಾವಿಬ್ರೂ 'ರಜಿಸ್ಟರ್ ಮದುವೆ' ಮಾಡಿಕೊಳ್ತೀವಿರಿ'' ರುಕ್ಕು ನಾಚಿಕೆಯ ಮುದ್ದೆಯಾಗಿ ವಿಷಯ ಬಯಲು ಮಾಡಿದಳು.

''ಇದೇನು ರುಕ್ಕು... ? ನೀ ಹೇಳೋದೆಲ್ಲಾ ನಿಜವಾ... ?'' ನನ್ನ ಮನದನ್ನೆ ಹುಬ್ಬೇರಿಸಿದಳು.

''ಹೌದರೀ. ಲವ್ ಅನ್ನೋದು ಭಾಳ ವಿಚಿತ್ರ ನೋಡ್ರಿ. ಅದು ಎಲ್ಲಿ, ಯಾವಾಗ, ಹ್ಯಾಂಗ ಸುರುವಾಗತೈತಿ ಅಂತಾ ಗೊತ್ತಾಗಲ್ಲ ಬಿಡ್ರಿ. ಒಟ್ನಿನಾಗ ಪ್ರೇಮಸಾಗರದಲ್ಲಿ ಬಿದ್ದೀವಿ – ತೇಲ್ತೀವೋ... ಮುಳುಗ್ತೀವೋ ಆ ಶಿವನೇ ಬಲ್ಲ !''

''ಅಂದ್ಹಾಂಗ ಯಾರವ್ವ ನಿನ್ನ ಹುಡುಗ ? ನೋಡಾಕ ಹ್ಯಾಂಗಿದಾನೆ ?''

''ಓಹ್... ! ಅವನೊಬ್ಬ ಸುಂದರ ಮಲೆಯಾಳಿ ಯುವಕ. ವಯಸ್ಸು ಸುಮಾರು ಇಪ್ಪತ್ತೆರಡು. ಹೆಸರು ಕಾರ್ತಿಕ. ಓದು ಕೊನೆವರ್ಷ ಕಂಪ್ಯೂಟರ್ ಇಂಜನಿಯರಿಂಗ್'' ರುಕ್ಕು ಪ್ರೇಮಿಯ ಸ್ಥೂಲ ಚಿತ್ರಣ ಬಿಡಿಸಿದಳು.

''ರುಕ್ಕು, ಹುಡುಗನ ಪೂರ್ವಾಪರಗಳನ್ನು ಪರಿಶೀಲಿಸದೆ ನಿಂತ ಕಾಲಲ್ಲಿ ಓಡಿಹೋಗೋದು ಅಪಾಯಕಾರಿ ! ವ್ಯಕ್ತಿಯ ಬರೀ ಬಾಹ್ಯ ಚಹರೆಗೆ ಮರುಳಾಗೋದು ಮೂರ್ಖತನ. ಯಾರ ಮನಸ್ಸು ಯಾವ ಕ್ಷಣದಲ್ಲಿ ಬೇಕಾದ್ರೂ ಬದಲಾಗಬೋದು. ಪ್ರೇಮವಿವಾಹಗಳು ಪುಸ್ತಕದಾಗ ಓದಾಕ ಚೆಂದ. ಅವುಗಳಿಗೆ ಜನಮತ ಇನ್ನೂ ಪೂರ್ತಿ ಸಿಕ್ಕಿಲ್ಲ. ನಿಜ ಹೇಳಬೇಕೆಂದರೆ... ಪ್ರೇಮವಿವಾಹಗಳು ದುಃಖಾಂತ್ಯ ಕಂಡಿರೋವು ಹೆಚ್ಚು... ಸುಖಾಂತ್ಯ ಕಂಡಿರೋವು ಕಮ್ಮಿ ಸಂಖ್ಯೆ.

''ರುಕ್ಕು ಸಮಚಿತ್ತದಿಂದ ನೀ ಇನ್ನೊಮ್ಮೆ ಯೋಚಿಸು. ನೀ ತಳೆದ ನಿರ್ಧಾರದಿಂದ ಆಚೆಗೆ ಬರಲು ಸಾಧ್ಯವಾದರೆ ನಿಂಗೆ ಒಳ್ಳೇದು.'' ನನ್ನಾಕೆ ಪ್ರೇಮವಿವಾಹದ ಬಗ್ಗೆ ಪುಟ್ಟ ಭಾಷಣ ಬಿಗಿದಳು.

''ನಾವು ತಕ್ಕೊಂಡಿದ್ದು ಗಟ್ಟಿ ತೀರ್ಮಾನ. ಹಿಂದೆ ಸರಿಯುವ ಪ್ರಮೇಯ ಬರುಲ್ಲ. ಯಾವನೋ ಅಯೋಗ್ಯನ್ ಕಟ್ಕೊಂಡು ದಿನಾ ಸಾಯೋ ಬದ್ಲು, ಪ್ರೀತಿಸುವವನ ಜೊತೆ ನಾಲ್ಕು ದಿನ ಜಾಲಿಯಾಗಿ ಕಳೆದು ಸಟಕ್ಕನೆ ಸಾಯೋದು ಸಾವಿರಪಾಲು ಲೇಸು,'' ರುಕ್ಕು ಅಕ್ಕನ ಮಾತನ್ನು ಪಕ್ಕಕ್ಕೆ ಸರಿಸಿದಳು.

''ಸರಿ ತಾಯಿ. ನಿಂಗೆ ತೋಚಿದ್ಹಾಂಗ ಮಾಡು. ನಿಂದು ಪ್ರೇಮವಿವಾಹ ನೂರು ವರ್ಷ ಹಸನಾಗಿರಲಿ.'' ತುಂಬು ಹೃದಯದಿಂದ ಹರಸಿ ರುಕ್ಕುನನ್ನು ಬೀಳ್ಕೊಟ್ಟಳು.

ಲವ್, ಹಾದರ, ಬಸಿರು ಬಹುಕಾಲ ಬಚ್ಚಿಡೋದು ಅಸಾಧ್ಯ. ರುಕ್ಕು ಕಾರ್ತಿಕರ ಪ್ರೇಮಪ್ರಕರಣ ಬಯಲಾಗಲು ಬಹಳ ಸಮಯ ಹಿಡಿಯಲಿಲ್ಲ. ಹೆಚ್ಚಿನ ಹುಡುಗರು ಅವರು ತಳೆದ ನಿಲುವನ್ನು ಸಮರ್ಥಿಸಿದರು.

ಈಗಲೂ ರುಕ್ಕು ಹಾಸ್ಟೆಲಿನ ಅದೇ ರಸ್ತೆ ಮೇಲೆ ಓಡಾಡುತ್ತಾಳೆ. ಆದರೆ ಮುಂಜಾನೆ ರೂಂ ಕಿಟಕಿ ಸರಳುಗಳ ಮಧ್ಯೆ ಪಿಳಿಪಿಳಿ ಬಿಡುತ್ತಿದ್ದ ಕಣ್ಣುಗಳು ಕಣ್ಮರೆಯಾದವು. ಸಿಳ್ಳು ಹೊಡೆಯೋದು, ತಾರಕ ಸ್ವರದಲ್ಲಿ ಹಾಡೋದು – ಎಲ್ಲಾ ನಿಶ್ಶಬ್ದ. ಅದು ರುಕ್ಕು-ಕಾರ್ತಿಕರ ಪ್ರೇಮಕ್ಕೆ ಸಂದ ಗೌರವದ ಸಂಕೇತ.

ಕಾಲೇಜ ಪರೀಕ್ಷೆ ಮುಗಿದ ತಕ್ಷಣ ಮಂಗಳೂರಿನ ರಜಿಸ್ಟ್ರಾರ್ ಚೇಂಬರಿನಲ್ಲಿ, ಸ್ನೇಹಿತರ ಉಪಸ್ಥಿತಿಯಲ್ಲಿ ರುಕ್ಕು, ಕಾರ್ತಿಕ ಪರಸ್ಪರ ಮಾಲೆ ಹಾಕುವ ಮೂಲಕ ಅವರೀರ್ವರ ಪ್ರೇಮವಿವಾಹಕ್ಕೆ ಅಫಿಶಿಯಲ್ ಮುದ್ರೆ ಬಿತ್ತು.

* * *

ಆರು ವರ್ಷಗಳ ನಂತರ...

ನಾನು ಸಂಬಂಧಿಕರ ಮದುವೆಗೆಂದು ಬಳ್ಳಾರಿಗೆ ಹೋಗಿದ್ದೆ. ಮದುವೆ ಮಂಟಪದಲ್ಲಿ ಡಾ|| ಪ್ರಕಾಶ ಬಾಬು ನನ್ನ ಪಕ್ಕದಲ್ಲಿ ಕೂತಿದ್ದರು. ಬಳ್ಳಾರಿಯಲ್ಲಿ ನ್ಯಾಶನಲ್ ಏಡ್ಸ್ ಕಂಟ್ರೋಲ್ ಆರ್ಗನೈಜೇಶನ್ ಹೆಸರಿನ ಪ್ರತಿಷ್ಠಿತ ಆಸ್ಪತ್ರೆಯೊಂದಿದೆ. ಅದರ ಡಯರೆಕ್ಟರ್ ಡಾ|| ಪ್ರಕಾಶ

ಬಾಬು. ಅವರಿಗೆ ನನ್ನ ಹೆಸರು, ಸುರತ್ಕಲ್ಲಿನ ಸೇವೆ, ನಿವೃತ್ತಿ ಬಗ್ಗೆ ಮಾಹಿತಿ ನೀಡಿ ಪರಿಚಯಿಸಿಕೊಂಡೆ.

''ಪ್ರೊಫೆಸರ್, ನೀವು ಸುರತ್ಕಲ್ ಹೆಸರೆತ್ತಿದಾಕ್ಷಣ ಥಟ್ಟನೆ ನನಗೊಂದು ವಿಷಯ ನೆನಪಾಯ್ತು. ತಿಂಗಳ ಹಿಂದೆ ರುಕ್ಕು ಹೆಸರಿನ ಇಪ್ಪತ್ನಾಲ್ಕರ, ಸುಂದರ ಯುವತಿ ಯೋರ್ವಳು ನಮ್ಮ ಆಸ್ಪತ್ರೆಗೆ ಸೇರಿಕೊಂಡಳು. ಅವಳ ಏಡ್ಸ್ ರೋಗ ಈಗ ಕೊನೆ ಹಂತ ತಲುಪಿದೆ. ಮೂಲತಃ ಅವಳು ದಕ್ಷಿಣ ಕನ್ನಡ ಜಿಲ್ಲಾದವಳು. ಮದುವೆಗೆ ಮುಂಚೆ ಸುರತ್ಕಲ್ ಕಾಲೇಜ್ ಕ್ಯಾಂಪಸ್ ಮನೆಗಳಲ್ಲಿ ಮೇಡ್ ಸರ್ವಂಟ್ ಆಗಿದ್ದಳಂತೆ. ಇಲ್ಲಿಗೆ ಬರುವ ಮೊದಲು ಕೇರಳದಲ್ಲಿ ವಾಸವಾಗಿದ್ದಳು.

''ಪ್ರತಿಯೊಬ್ಬ ಏಡ್ಸ್ ರೋಗಿಯ ಹಿಂದೆ ಒಂದು ಕತೆ ಇರುತ್ತದೆ. ಇದಕ್ಕೆ ರುಕ್ಕು ಹೊರತಲ್ಲ. ಪಾಪ ಇಷ್ಟು ಸಣ್ಣ ವಯಸ್ಸಿನಲ್ಲಿ ಹೀಗಾಗಬಾರದಿತ್ತು'' ಎಂದು ಹೇಳಿ ಪ್ರಕಾಶ ಬಾಬು ಮೌನವಹಿಸಿದರು.

ಐದು ನಿಮಿಷ ಕಳೆದ ನಂತರ ಅವರು ರುಕ್ಕುವಿನ ಬದುಕಿನ ವಿಸ್ತೃತ ಚಿತ್ರಣವಿದ್ದ ಪುಸ್ತಕದ ಪುಟಗಳನ್ನು ಒಂದೊಂದಾಗಿ ನನ್ನೆದುರು ಮಗುಚಿಹಾಕತೊಡಗಿದರು :

ಮಂಗಳೂರಲ್ಲಿ ನಾವಿಬ್ಬರೂ ಪ್ರೇಮವಿವಾಹ ಮಾಡಿಕೊಂಡು, ಕೇರಳದಲ್ಲಿರುವ ಕಾರ್ತಿಕನ ಮನೆಗೆ ಪ್ರಯಾಣ ಹೊರಟೆವು. ನನಗೋ ಗಂಡನ ಮನೆ ಸೇರುವ ಸಂಭ್ರಮ, ತವಕ. ಕಾರ್ತಿಕನ ತಂದೆ-ತಾಯಿ ನಮ್ಮ ವಿವಾಹವನ್ನು ಒಪ್ಪಿಕೊಳ್ಳಬಹುದು... ಆದರದಿಂದ ನನ್ನನ್ನು ಮನೆ ತುಂಬಿಸಿಕೊಳ್ಳಬಹುದು... ನಮಗಲ್ಲಿ ಭವ್ಯ ಸ್ವಾಗತ ಕಾದಿರಬಹುದು... ಏನೇನೋ ಕಲ್ಪನೆಗಳು.

ಮನೆ ತಲುಪಿದಾಗ ನಮಗಲ್ಲಿ ಭಾರಿ ನಿರಾಶೆ ಕಾದಿತ್ತು! ಅವರು ನಮ್ಮ ಮದುವೆಯನ್ನು ಸಮ್ಮತಿಸಲಿಲ್ಲ. ಮನೆ ಸೇರಿಸಿಕೊಳ್ಳಲಿಲ್ಲ. ಬದಲಿಗೆ ನಿರ್ದಯವಾಗಿ ನಮ್ಮಿರ್ವರನ್ನು ಹೊರದಬ್ಬಿ, ರಪ್ಪನೆ ಕದ ಬಡಿದುಕೊಂಡರು. ಗಂಡನ ಮನೆಯವರು ನೀಡಿದ ಮದುವೆಯ ಮೊದಲ ಉಡುಗೊರೆ!

ನಮ್ಮ ಬದುಕನ್ನು ನಾವೇ ರೂಪಿಸಿಕೊಳ್ಳಬೇಕು ಎನ್ನುವ ವಾಸ್ತವ ಅರಿವಾಯ್ತು. ವಾಸಕ್ಕೆ ಬಾಡಿಗೆ ಮನೆ. ಸಣ್ಣ ಕಂಪನಿಯೊಂದರಲ್ಲಿ ಕಾರ್ತಿಕನಿಗೆ ಕೆಲಸ. ಸಂಬಳ ಅಷ್ಟಕ್ಕಷ್ಟೆ. ಹೊಸದಾಗಿ ಮದುವೆಯಾದ ಹೆಣ್ಣಿನ ಬಯಕೆಗಳನ್ನು ಈಡೇರಿಸುವುದು ಗಂಡನಾದವನ ಕರ್ತವ್ಯ. ಯಾವುದನ್ನೂ ಮಾಡಲಾಗದ ಕಾರ್ತಿಕನ ದುರವಸ್ಥೆ. ಬರೀ ಪ್ರೀತಿ, ಪ್ರೇಮದಿಂದಲೇ ಬದುಕು ಸುಂದರವಾಗದು.

ಕಾಲ ಸರಿದಂತೆ ಜೀವನ ನೀರಸವೆನಿಸತೊಡಗಿತು. ಕಂಡ ಕನಸುಗಳೆಲ್ಲಾ ಮುಂಜಾವಿನ ಮಂಜಿನಂತೆ ಕರಗಿ ಹೋದವು. ಸಂಸಾರದಲ್ಲಿ ವಿರಸದ ಹೊಗೆಯಾಡ ತೊಡಗಿತು. ವಿರಳವಾಗಿದ್ದ ಕಲಹಗಳು ದಿನಚರಿ ಆದವು. ನಾನು ಬದುಕಿನಲ್ಲಿ ದುಡುಕಿ ದಾರಿ ತಪ್ಪಿದೆ ಎಂಬ ಅಪರಾಧಿ ಪ್ರಜ್ಞೆ ಕಾಡತೊಡಗಿತು.

ಅಂದು ಕಂಪನಿ ಕೆಲಸಕ್ಕೆಂದು ಬೆಂಗಳೂರಿಗೆ ಹೋದ ಕಾರ್ತಿಕ ಮೂರು ತಿಂಗಳಾದರೂ ಮನೆಗೆ ಮರಳಲಿಲ್ಲ. ಒಂದು ದಿನ ಹಾದಿ-ಬೀದಿ ಮಾತುಗಳು ಕಿವಿಗೆ ಬಿದ್ದಾಗ ಎಲ್ಲಾ ಬಯಲಾಯ್ತು – ಕಾರ್ತಿಕ ಹೋದದ್ದು ದುಬಾಯಿಗೆ! ವಾಪಸ್ ಬರುವ ಇರಾದೆ ಇಲ್ಲವಂತೆ!

ಛೇ! ಕಾರ್ತಿಕ ಹೀಗೇಕೆ ನನ್ನ ಜೀವದ ಜತೆ ಚೆಲ್ಲಾಟವಾಡಿ, ನಡುನೀರಲ್ಲಿ ಬಿಟ್ಟುಹೋದ ? ಅವನೊಬ್ಬ ನಯವಂಚಕ. ಪ್ರೇಮವಿವಾಹದ ಬಗ್ಗೆ ತಳೆದಿದ್ದ ನನ್ನ ನಿಲುವು ತಲೆಕೆಳಗಾಯ್ತು.

ವಿಧಿಯಾಟವೇ ಹೀಗೆ – ಒಂದಿಷ್ಟು ಸುಖ-ಸಂತೋಷ ಕೊಟ್ಟಂತೆ ಮಾಡಿ ದಿಢೀರನೆ ಎಲ್ಲವನ್ನೂ ಕಸಿದುಕೊಳ್ಳುವುದು. ನನ್ನ ಬದುಕು ಈಗ ಸುಂಟರಗಾಳಿಗೆ ಸಿಲುಕಿದ ತರಗೆಲೆ. ಎಲ್ಲಾ ಸಮಸ್ಯೆಗಳಿಗೆ ಇತಿಶ್ರೀ ಹಾಡಬೇಕೆಂದರೆ... ವಿಷ ಕುಡಿಯಲು ಧೈರ್ಯ ಸಾಲಲಿಲ್ಲ.

ಹೀಗೆ ಮನಸ್ಸಿನ ಬೇಗುದಿಯಲ್ಲಿದ್ದಾಗ, ನನ್ನ ಬದುಕಿನಲ್ಲಿ ಅಚಾನಕ್ ಒಬ್ಬ ದಲ್ಲಾಳಿ ಎಂಟರ್ ಆದ. ನನ್ನ ಸಂದಿಗ್ಧ ಪರಿಸ್ಥಿತಿ, ಒಂಟಿತನ, ಅಸಹಾಯಕತೆ, ಮನೋದೌರ್ಬಲ್ಯ – ತನ್ನ ಸ್ವಾರ್ಥಕ್ಕೆ ಬಳಸಿಕೊಂಡ. ನನಗೆ 'ಕಾಲ್‌ಗರ್ಲ್' ಹಣೆಪಟ್ಟಿ ಹಚ್ಚಿ, ಬದುಕಿನ ಹೊಸದೊಂದು ಮಜಲಿನ ಪರಿಚಯ ಮಾಡಿಸಿದ.

ಎಂಥ ವಿಪರ್ಯಾಸ! ಗೃಹಿಣಿಯಾಗಿರಬೇಕಿದ್ದ ನಾನು ಗಯ್ಯಾಳಿಯಾಗಿಬಿಟ್ಟೆ! ನೀರಿಗಿಳಿದ ಮೇಲೆ ಚಳಿಗೆ ಹೆದರುವುದೇಕೆ ? ಕಸಬಿಗೆ ಹೊಸಬಳಾದರೂ ಬದಲಾದ ವ್ಯವಸ್ಥೆಯೊಂದಿಗೆ ಸಂಧಾನ ಮಾಡಿಕೊಂಡೆ. ಜೀವನವೇ ಹೀಗೆ – ಎಣಿಸಿದ್ದೇ ಒಂದಾದರೆ ನಡೆಯುವುದೇ ಬೇರೊಂದು.

ಇನ್ನೂ ಮಾಸದೆ ಉಳಿದಿದ್ದ ಬಣ್ಣ, ಯೌವನ, ಸೆಳೆತ, ಸುಂದರ ಮೈಕಟ್ಟು, ಥಳುಕು-ಬಳುಕು – ನನ್ನ ಸಹಾಯಕ್ಕೆ ನಿಂತವು. ಪಂಚತಾರಾ ಹೋಟೆಲ್, ಅತಿಥಿ ಗೃಹಗಳು, ಫಾರ್ಮ್ ಹೌಸ್, ಭವ್ಯ ಬಂಗ್ಲೆ– ಹೀಗೆ ಕರೆದಲ್ಲಿಗೆ ಕಾರಿನಲ್ಲಿ ಹೋಗಿ ಬರತೊಡಗಿದೆ. ಹೊರಗೆ ಮೇಯುವ ಚಟವಿದ್ದ ಸಮಾಜದ ಗಣ್ಯರ ಜೊತೆಗೆ ಯೌವನದ ಬಿಸಿ ಹಂಚಿಕೊಂಡೆ. ಬೇಸರವಾಗುವಷ್ಟು ದುಡ್ಡು ಮಾಡಿದೆ. ಸೆಟವಿ ನನ್ನ ಹಣೆಬರಹವನ್ನು ತಿದ್ದಿರಬೇಕೆಂದು ಭಾವಿಸಿ ಸಂತೋಷಪಟ್ಟೆ.

ಒಂದು ದಿನ ಇದ್ದಕ್ಕಿದ್ದಂತೆ ನುಚ್ಚುನೂರಾಗುವಷ್ಟು ತಲೆಸಿಡಿತ. ವಿಪರೀತ ಜ್ವರ, ಮೈ-ಕೈ ನೋವು. ದೇಹದ ಚೈತನ್ಯವೆಲ್ಲ ಸೋರಿಹೋದ ವಿಚಿತ್ರ ಅನುಭವ. ನಾನು ಪ್ರಯಾಸಪಟ್ಟು ಆಸ್ಪತ್ರೆಗೆ ಹೋದೆ. ನನ್ನನ್ನು ನಾನಾತರದ ಪರೀಕ್ಷೆಗೆ ಒಳಪಡಿಸಿದರು. ಕೊನೆಗೆ ಡಾಕ್ಟರ್ ಒಂದು ವಿಷಯ ಸ್ಫೋಟಿಸಿದರು. ನನಗೆ ಭಯಾನಕ ಏಡ್ಸ್ ರೋಗ ಅಂಟಿಕೊಂಡಿತ್ತು! ಭಯದಿಂದ ನಾನು ಉಡುಗಿ ಹೋದೆ! ಒಂದು ಪಡಕೊಳ್ಳಬೇಕಾದರೆ ಮತ್ತೊಂದನ್ನು ಕಳಕೊಳ್ಳಬೇಕು. ವಾಸ್ತವದ ಕಹಿ ಸತ್ಯ.

ನನ್ನನ್ನು ಅನುಭವಿಸಿ ಹೋದ ನೂರಾರು ಕಚ್ಚೆಹರಕರಲ್ಲಿ ಯಾವನೋ ಒಬ್ಬ ಈ ರೋಗವನ್ನು ನನ್ನ ಬಳಿ ಬಳುವಳಿಯಾಗಿ ಬಿಟ್ಟುಹೋಗಿದ್ದ. ನಿರ್ದಯಿ ವಿಧಿಯ ಕ್ರೂರ ದೃಷ್ಟಿ ಮತ್ತೊಮ್ಮೆ ನನ್ನ ಮೇಲೆ ನಾಟಿತ್ತು! ಡಾಕ್ಟರ್ ಅಡ್ರೆಸ್ ಕೊಟ್ಟರು. ಅವರ ಸಲಹೆ ಮೇರೆಗೆ ನಾನು ಬಳ್ಳಾರಿಗೆ ಬಂದು ಏಡ್ಸ್ ಹಾಸ್ಪಿಟಲ್ ಸೇರಿಕೊಂಡೆ.''

ರುಕ್ಕುವಿನ ದಾರುಣ ಗಾಥೆ ಕೊನೆಗೊಂಡಾಗ ಬಿರುಗಾಳಿ ಬೀಸಿ ನಿಂತಂತಾಯಿತು. ನನ್ನ ಮನಸ್ಸು ಒದ್ದೆಯಾಯಿತು. ಕರುಳು ಚುರುಗುಟ್ಟಿತು. ಅನಾಥೆಯಾಗಿ ಬೆಳೆದ ರುಕ್ಕು ಕೊನೆಗಾಲ ತನಕ ಅನಾಥೆಯಾಗಿಯೇ ಉಳಿದುಬಿಟ್ಟಳು.

**ಡಾ|| ರುದ್ರಯ್ಯ ವಿ. ಗದಗ**
'ಪಂಚವಟಿ', ಮ. ನಂ. ೨೪೦/೪೨, ವಿವೇಕಾನಂದನಗರ,
ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧



# ಯುರೇನಸ್‌ನ ಕಣ್ಣುಮುಚ್ಚಾಲೆ ಆಟ

ಡಾ॥ ಬಿ. ಎಸ್. ಶೈಲಜಾ

ಗ್ರಹಗಳ ಪುನರ್ವರ್ಗೀಕರಣದ ಗಲಾಟೆಯಲ್ಲಿ ಮತ್ತೆ ಮತ್ತೆ ಕೇಳುತ್ತಿದ್ದ ಹೆಸರು ಯುರೇನಸ್ (ಮತ್ತು ನೆಪ್ಚೂನ್). ಬರಿಗಣ್ಣಿಗೆ ಕಾಣುವ ಐದನ್ನು ಮಾತ್ರ ಗ್ರಹ ಎಂದು ಕರೆಯಬೇಕು ಎಂದರೆ ಇವೆರಡೂ ಅಪವಾದಗಳಾಗಿ ಬಿಡುವುವು. ಯುರೇನಸ್‌ಅನ್ನು ಬರಿಗಣ್ಣಿನಿಂದ ಹುಡುಕುತ್ತೇನೆ ಎಂದು ಸವಾಲು ಹಾಕಿದವರು ನಕ್ಷತ್ರಗಳ ನಕ್ಷೆ ತಯಾರಿಸಿ, ಒಂದೊಂದೂ ಚುಕ್ಕೆಯನ್ನು ಗುರುತಿಸಿ ಯಶಸ್ವಿ ಯಾಗಿದ್ದಾರೆ. ಆದರೆ ಅದಕ್ಕೆ ಚಂದ್ರನಿಲ್ಲದ ಶುಭ್ರರಾತ್ರಿಯೆ ಬೇಕು. ಅಷ್ಟೇ ಅಲ್ಲ ನಗರದ ವಿದ್ಯುದ್ದೀಪ, ವಾಹನಗಳ ದೀಪಗಳ ತೊಂದರೆ ಇಲ್ಲದ ಊರಾಚೆಯ ಪ್ರಶಾಂತ ಸ್ಥಳವೂ ಬೇಕು.

ನವೆಂಬರ್‌ನಲ್ಲಿ ಯುರೇನಸ್‌ಅನ್ನು ಹುಡುಕಲು ಒಂದು ಉಪಾಯವಿದೆ. ಒಂದನೆಯ ತಾರೀಖು ಚಂದ್ರನ ಆಸುಪಾಸನ್ನು ಗುರುತುಹಾಕಿಟ್ಟುಕೊಳ್ಳಿ. ೨೮ರಂದು ಪುನಃ ಅದೇ ಸ್ಥಳಕ್ಕೆ ಹಿಂದಿರುಗಿದಾಗ ಸಂಜೆ ನಕ್ಷೆಯ ಚುಕ್ಕೆಗಳನ್ನು ಪರಿಶೀಲಿಸಿ. ಒಂದು ಚಂದ್ರನಿಗೆ ಅತಿ ಸಮೀಪ ಇದೆ ಎನಿಸುತ್ತದೆ. ೯:೨೮ ನಿಮಿಷಕ್ಕೆ ಈ ಚುಕ್ಕೆ ಮಾಯವಾಗಿಬಿಡುತ್ತದೆ. ಪುನಃ ೧೦:೨೧ಕ್ಕೆ ನೋಡಿದಿರಾದರೆ ಚಂದ್ರನ ಇನ್ನೊಂದು ಬದಿಯಲ್ಲಿ ಹಾಜರಾಗುತ್ತದೆ. ಇದೇ ಚುಕ್ಕೆಯೇ ಯುರೇನಸ್. ಈ ಘಟನೆಗೆ ಆಚ್ಛಾದನೆ ಎಂಬ ಹೆಸರಿದೆ. ಹೀಗೆ ಹಲವಾರು ಆಚ್ಛಾದನೆಗಳು ಈಗಾಗಲೇ ನಡೆಯುತ್ತಿದ್ದರೂ (ನವೆಂಬರ್ ೧ರಂದೂ ಇದೆ) ನಮಗೆ ಕಾಣಸಿಗುವುದು ಇದೊಂದೇ ಅಂದರೆ ೨೮ರ ಘಟನೆ ಮಾತ್ರ.

ಹೀಗೆ ಕಷ್ಟಪಟ್ಟು ನೋಡಬೇಕಾದ ಈ ಗ್ರಹ ಹೊರತುಪಡಿಸಿ ನೋಡಲು ಸಿಗುವ ಇನ್ನೊಂದು ಗ್ರಹ ಶನಿ. ಬೆಳಗಿನ ಜಾವ ನೆತ್ತಿಗೆ ಸಮೀಪವೇ ಕಾಣುವ ಇದು ಬರುವ ತಿಂಗಳು ಹಿನ್ನಡೆಯಲಿದೆ. ಬೆಳಗಿನ ಆಕಾಶದಿಂದ ಸಂಜೆಗೆ ಬರುವುದರ ಮುನ್ಸೂಚನೆ. ಸಂಜೆಯ ಆಕಾಶದಿಂದ ಬೆಳಗಿಗೆ ಜಾರುವ ಬುಧ ಇನ್ನೊಂದು ಕಣ್ಣುಮುಚ್ಚಾಲೆ ಆಟ ಆಡಲಿದೆ. ೭ರಂದು ಶುಕ್ರದ ಸಮೀಪ ಹಾದು ಹಿನ್ನಡೆಯುವಾಗ ಸೂರ್ಯನ ಮುಂದೆ ಹಾದು ಚುಕ್ಕೆಯಂತೆ ಕಾಣಲಿದೆ. ಸಂಕ್ರಮ ಎಂಬ ಹೆಸರಿನ ಈ ಘಟನೆ ೨೦೦೩ರ ಮೇ ತಿಂಗಳಲ್ಲಿಯೂ ನಡೆದಿತ್ತು. ಈ ಘಟನೆ ನಮಗೆ ಕಾಣುವುದಿಲ್ಲ. ಪೆಸಿಫಿಕ್ ಸಾಗರದಿಂದ ಕಾಣುತ್ತದೆ. ಹೀಗೆ ಮುನ್ನಡೆಯುವ ಬುಧ ಬೆಳಗಿನ ಜಾವ ಕಾಣುತ್ತದೆ. ತಿಂಗಳ ಕೊನೆಗೆ ೨೫ರಂದು ಪೂರ್ವ ದಿಕ್ಕಿನಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು.




ಮಂಗಳ, ಗುರು, ಶುಕ್ರ – ಈ ಗ್ರಹಗಳು ಸಂಧ್ಯಾಪ್ರಕಾಶದಲ್ಲಿ ಕಾಣುವುದು ಕಷ್ಟವೇ.

ಇನ್ನು ನಕ್ಷತ್ರಗಳತ್ತ ಗಮನ ಹರಿಸೋಣ. ಸಂಜೆಯ ಆಕಾಶದಲ್ಲಿ ಕಾಣುವ ಧನುಸ್ಸು, ಮಕರ, ಕುಂಭ, ಮೀನ, ಮೇಷ ಇವನ್ನು ನಕ್ಷೆಯ ಸಹಾಯದಿಂದ ಗುರುತಿಸಬಹುದು. ಮಕರ, ಕುಂಭ ಇವುಗಳನ್ನು ಗುರುತಿಸುವುದು ಕಷ್ಟ ಏಕೆಂದರೆ ಅಲ್ಲಿರುವುವೆಲ್ಲಾ ಕ್ಷೀಣ ನಕ್ಷತ್ರಗಳು. ಮೀನರಾಶಿಯೂ ಕ್ಷೀಣವೇ ಆದರೂ ಎರಡು ಮೀನುಗಳ ನಡುವಿನ ಪೆಗಸಸ್ (ನಕುಲ) ಪುಂಜದಿಂದ ಇದನ್ನು ಗುರುತಿಸಬಹುದು. ಬೇಸಿಗೆ ತ್ರಿಕೋಣ ಎಂದು ಕರೆಯಿಸಿಕೊಳ್ಳುವ ವೇಗಾ (ಅಭಿಜಿತ್), ದೆನೆಬ್ (ಹಂಸಾಕ್ಷಿ) ಮತ್ತು ಆಲ್ಟೇರ್ (ಶ್ರವಣ) ಈ ನಕ್ಷತ್ರಗಳನ್ನು ಸುಲಭವಾಗಿ ಗುರುತಿಸಬಹುದು. ಈಶಾನ್ಯದಲ್ಲಿ ಕಾಸಿಯೋ ಪಿಯಾ (ಕುಂತಿ)ವನ್ನೂ ಸುಲಭವಾಗಿ ಗುರುತಿಸಬಹುದು.

ಸುಮಾರು ಎಂಟು ಗಂಟೆಯ ಹೊತ್ತಿಗೆ ಪೂರ್ವದಿಕ್ಕಿನಲ್ಲಿ ಸ್ಫುಟವಾಗಿ ಕಾಣುವ ನಕ್ಷತ್ರ ಗುಚ್ಛವೇ ಕೃತ್ತಿಕಾ. ೬ರ ಸಂಜೆ ಚಂದ್ರನನ್ನು ಗಮನಿಸಿ. ದುರ್ಬೀನು ದೂರದರ್ಶಕಗಳಿಂದ ತೋರಿಸಲು ಇದು ಒಳ್ಳೆಯ ಅವಕಾಶ. ಪ್ರಖರ ಚಂದ್ರನ ಹಿನ್ನೆಲೆಯಲ್ಲಿ ಕೃತ್ತಿಕಾದ ನಕ್ಷತ್ರಗಳು ಒಂದೊಂದಾಗಿ ಕಣ್ಮರೆಯಾಗಿ ಪುನಃ ಇನ್ನೊಂದು ಪಕ್ಕದಿಂದ ಹೊರಬರುವುದನ್ನು ಕಾಣಬಹುದು. ಸುಮಾರು ಹತ್ತುಗಂಟೆಯ ಹೊತ್ತಿಗೆ ಕೃತ್ತಿಕಾ ಪೂರ್ಣವಾಗಿ ಚಂದ್ರನಿಂದ ಬೇರೆಯಾಗುವುದನ್ನು ಕಾಣಬಹುದು. ಇದು ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ. ಇದು ಕಾರ್ತಿಕ ಮಾಸ. ಅಂದರೆ ಚಂದ್ರ ೫ರ ಹುಣ್ಣಿಮೆಯಂದು ಕೃತ್ತಿಕಾ ಬಳಿ ಇರಬೇಕಿತ್ತು. ಗಣನೆಯಲ್ಲಿ ವ್ಯತ್ಯಾಸವಿದೆ ಎಂಬುದು ಇಲ್ಲಿ ಸುಸ್ಪಷ್ಟ.

ನವೆಂಬರ್ ಎಂದರೆ ಉಲ್ಕಾವೃಷ್ಟಿಯ ನೆನಪಾಗುವುದು. ಪ್ರತಿವರ್ಷದಂತೆ ಈ ವರ್ಷವೂ ೧೮ರಂದು ಲಿಯೋನಿಡ್ ವೃಷ್ಟಿ ಗರಿಷ್ಠ ಮುಟ್ಟುವುದು. ಗಂಟೆಗೆ ೫೦ರಿಂದ ೧೦೦ ಉಲ್ಕೆಗಳು ಕಾಣಬಹುದೆಂಬ ನಿರೀಕ್ಷೆ ಇದೆ. ಆದರೆ ಇದರ ಅರ್ಧದಷ್ಟು ಕಾಣಬಹುದು.

ಕುಬ್ಜಗ್ರಹಗಳು ಎಂದು ಹೊಸವರ್ಗ ಸೃಷ್ಟಿಯಾಗಿರುವ ಹಿನ್ನೆಲೆಯಲ್ಲಿ ಅವು ಎಷ್ಟಿವೆ

೩೭ನೇ ಪುಟಕ್ಕೆ



೬ರ ಸಂಜೆ ಪೂರ್ವದ ನೋಟ ಕೃತ್ತಿಕಾ ಪುಂಜ ಚಂದ್ರನ ಹಿಂದೆ ಮಾಯವಾಗಲಿದೆ.

# ಅನುವಾದ

## ಸ್ವರೂಪ, ಸಮಸ್ಯೆ ಹಾಗೂ ಸಂಭಾವನೆಗಳು : ಸಂದರ್ಭ ಸಮಕಾಲೀನ ಕಥೆಗಳು

ಡಾ|| ಪರಿಮಳಾ ಅಂಬೇಕರ

ಕಲೆಯ ಪ್ರಕಾರಗಳು, ಅದರಲ್ಲೂ ಸಾಹಿತ್ಯ ಕಲೆಯ ಪ್ರಕಾರಗಳು, ಎಷ್ಟೇ ಸ್ವಾಯತ್ತ ಅಥವಾ ಸ್ವತಂತ್ರವಾಗಿದ್ದರೂ ಕೂಡ, ಸರ್ವಸಾಧಾರಣ ಸಂವಹನದ ಪ್ರಶ್ನೆ ಉದ್ಭವಿಸಿದಾಗ, ಸಮಾಜವನ್ನು ಅದರ ವಿಶಾಲ ಹಾಗೂ ವಿಸ್ತೃತ ಫಲಕದ ಸಂದರ್ಭದಲ್ಲಿ ಮುಟ್ಟುವ ಪ್ರಶ್ನೆ ಎದುರಾದಾಗ, ಕಲೆಗೆ ತನ್ನ ಸಂಶ್ಲಿಷ್ಟ ಹಾಗೂ ಗಂಭೀರ ಸಂರಚನೆಯ ಕವಚದಿಂದ ಹೊರಬಂದು, ಶಿಲ್ಪ, ತಾಂತ್ರಿಕತೆ ಅಥವಾ ಮಂಚನದಂತಹ ಬಾಹ್ಯ ಮಾಧ್ಯಮಗಳ ಆಧಾರ ಪಡೆಯಬೇಕಾಗುತ್ತದೆ. ಕಲೆಗೆ ಇಂತಹ ಬಾಹ್ಯ ಮಾಧ್ಯಮಗಳಿಗೆ ಶರಣು ಹೋಗಲೇಬೇಕಾಗುತ್ತದೆ. ಸಹಜವಾಗಿ ಹಾಗೂ ಬಹು ಪ್ರಮಾಣದಲ್ಲಿ ಕಲೆಯು ಜನರನ್ನು ಮುಟ್ಟುವ ಪ್ರಶ್ನೆ ಸಂಪೂರ್ಣವಾಗಿ ಇಂತಹುದೇ ಬಾಹ್ಯ ಮಾಧ್ಯಮಗಳ ಮೇಲೆ ಅವಲಂಬಿತವಾಗಿದೆ. ಕಲೆಯ ಸಾರ್ಥಕತೆ, ಸಮಾಜದ ಎಲ್ಲ ಸ್ತರೀಯ ವರ್ಗಸಮುದಾಯದ ಜನರಿಂದ ಅದರ ಗುರುತಿಸುವಿಕೆಯಲ್ಲಿ ಅಡಗಿದೆ. ಈ ತರಹದ್ದೇ ಅತ್ಯಂತ ಗಂಭೀರ ಸಮಾಜೋನ್ಮುಖ ದೃಷ್ಟಿಯನ್ನು ಪಡೆದಂತಹ ಮಾಧ್ಯಮ ಅನುವಾದದ್ದಾಗಿದೆ. ಕಲೆಯ ಕಲಾತ್ಮಕ ಉಪಯೋಗಿತೆಯ ಹಾಗೂ ಸಾರ್ಥಕತೆಯ ತತ್ವವನ್ನು ಮೈಗೂಡಿಸಿಕೊಂಡ ದಾಯಿತ್ವಪೂರ್ಣವಾದ ಪ್ರಕ್ರಿಯೆ ಅನುವಾದದ್ದು. ಅನುವಾದ, ಏಕಕಾಲದಲ್ಲಿ ಸೃಜನ, ಶಿಲ್ಪ ಹಾಗೂ ತಂತ್ರದಂತಹ ಕ್ರಿಯೆಗಳನ್ನು ಹುರಿಹಾಕುತ್ತ, ತನ್ನ ಸಾಧ್ಯತೆಯ ಸಂಭಾವನೆಯನ್ನು ಬಹುಸಂಖ್ಯಾತ ವರ್ಗಕ್ಕೆ ಹಾಗೂ ಒಟ್ಟಾರೆಯಾಗಿ ಅಪರಿಚಿತ ವಿಶ್ವದ ಎದುರು ತನ್ನನ್ನು ತಾನು ಬಿಚ್ಚಿಕೊಳ್ಳುವಲ್ಲಿ ಕಂಡುಕೊಳ್ಳುತ್ತದೆ. ಭಾಷಾಂತರದ ಪ್ರಕ್ರಿಯೆ ಒಂದು ವಿಶಿಷ್ಟ ಸಮುದಾಯ ಅಥವಾ ವಿಶಿಷ್ಟ ಭಾಷೆಯ ಸಂಸ್ಕೃತಿಯನ್ನು, ಅದರ ಕಲಾತ್ಮಕ ಧೋರಣೆಗಳನ್ನು, ಜೀವನದ ಮೌಲ್ಯಗಳನ್ನು, ರಾಷ್ಟ್ರಸ್ತರದ ಎತ್ತರಕ್ಕೆ ಹಾಗೂ ವಿಶ್ವಸ್ತರದ ವಿಶಾಲತೆಯಲ್ಲಿ ಸಂಪ್ರೇಷಿಸುತ್ತದೆ. ಜೊತೆಗೆ ತನ್ನ ಸಂಭಾವ್ಯತೆಯ ಮಹತ್ವವನ್ನು ಕೂಡ ತೆರೆದು ತೋರಿಸುತ್ತಾಹೋಗುತ್ತದೆ.

ಜಾಗತೀಕರಣ ಹಾಗೂ ವಸಾಹತೀಕರಣದ ಇಂದಿನ ಸಂದರ್ಭದಲ್ಲಿ ಕಲೆಯ ಸ್ಥಾನೀಯತೆ ಅಥವಾ ಪ್ರಾದೇಶಿಕತೆಯನ್ನು ಉಳಿಸಿಕೊಂಡುಬರುವಲ್ಲಿ ಯಾವುದಾದರೂ ಮಾಧ್ಯಮವು ಸಹಾಯವಾಗಿ ನಿಲ್ಲಬಹುದಾದರೆ ಅದು ಭಾಷಾಂತರದ ಮಾಧ್ಯಮ. ಅನುವಾದದ ಕಲೆ ಬಹಳ ಜೋಪಾನವಾಗಿ, ಹಾಗೂ ಆತ್ಮೀಯವಾಗಿ ಸ್ಥಳೀಯ - ಪ್ರಾದೇಶಿಕ ಜೀವನ ಸಂವೇದನೆಯನ್ನು ಅದರ ಸೂಕ್ಷ್ಮತೆಯನ್ನು ವಿಶ್ವದ ಮುಂದೆ ಅಲಂಕರಿಸಿ ಪ್ರಸ್ತುತಪಡಿಸುತ್ತದೆ. ಜಾಗತೀಕರಣದ ಇಂದಿನ ಈ ಸಂದರ್ಭದಲ್ಲಿ ಸಾಮ್ರಾಜ್ಯಶಾಹಿಯ ಆರ್ಥಿಕ ನೀತಿಯ ದವಡೆಯಲ್ಲಿ ನಲುಗಿಹೋಗುತ್ತಿರುವ ಸ್ಥಳೀಯ ಸಂಸ್ಕೃತಿಯ ಅಸ್ತಿತ್ವವನ್ನು ಕಾಪಾಡುವ, ಹಾಗೂ ಸಮಸಂಸ್ಕೃತಿಯ ಕಪಿಮುಷ್ಟಿಯಿಂದ ಮೂರನೇ ದೇಶವೆಂದು ಕರೆಸಿಕೊಳ್ಳುವ ಭಾರತದಂತಹ ಭೂಭಾಗಗಳ ಸಾಂಸ್ಕೃತಿಕ ಅಸ್ಮಿತೆಯನ್ನು ಉಳಿಸುವ ಶಕ್ತಿ ಅನುವಾದ ಮಾಧ್ಯಮಕ್ಕೆ ಇದೆ. ಜಾಗತೀಕರಣದ ವಿರುದ್ಧ ನಿರರ್ಥಕ ಸೆಣೆಸಾಟದ ಬದಲಾಗಿ, ವಿಪರೀತ ವಿಷಮ ಪರಿಸ್ಥಿತಿಯಲ್ಲಿಯೂ ಕೂಡ ತನ್ನ ಮಣ್ಣಿನ ಸಂಸ್ಕೃತಿಯ ಬೇರಿನ ಆಳವನ್ನು ಮನಗಂಡು ಅದನ್ನು ರೂಢಿಸಿಕೊಂಡು, ದೇಶ ಹಾಗೂ ವಿಶ್ವಸಾಹಿತ್ಯದ ಸಂದರ್ಭದಲ್ಲಿ ಅನುವಾದ ಕಲೆಯ ಮುಖಾಂತರ ಪ್ರಸ್ತುತಪಡಿಸುವ ಆವಶ್ಯಕತೆ ಇದೆ. ಆದ್ದರಿಂದಲೇ ವಿಶ್ವಸಾಹಿತ್ಯದ ಅನುವಾದದ ಸಂದರ್ಭದಲ್ಲಿ ಭಾರತೀಯ ಭಾಷಾಸಾಹಿತ್ಯದ ಅನುವಾದ ಹಾಗೂ ಅದರ ವಿಕಲ್ಪೀಯ ಸಂಭಾವನೆಗಳ ಪುನರ್ ಅವಲೋಕನ ಆವಶ್ಯಕವಾಗಿ ನಮ್ಮ ಮುಂದೆ ನಿಲ್ಲುತ್ತದೆ.

ಈ ತರಹದ ವಿಚಾರಸರಣಿಯಲ್ಲಿ ಕನ್ನಡ ಸಾಹಿತ್ಯದ ಎದುರು ಎರಡು ತೆರನಾದ ಭಾಷಾಂತರದ ಸಂಭಾವನೆಗಳು ಬಿಚ್ಚಿಕೊಳ್ಳುತ್ತವೆ. ಒಂದು ವೇಳೆ, ಅಹಿಂದೀ ಭಾಷಾ ಸಮುದಾಯವು ಹಿಂದಿಯನ್ನು ಭಾರತದ ಬಹುಸಂಖ್ಯಾತ ಜನತೆ ಬಳಸುವ ಸಂಪರ್ಕ ಭಾಷೆಯೆಂದು ಒಪ್ಪಿಕೊಳ್ಳುವುದಾದರೆ, ಈ ಸಂಭಾವನೆಯ ಸ್ತರಕ್ಕೆ ಎರಡಕ್ಕೆ ಬದಲಾಗಿ ಮೂರು ಬಾಗಿಲುಗಳು ತೆರೆದುಕೊಳ್ಳುತ್ತವೆ. ಅವನ್ನು ಈ ತರಹ ಗುರುತಿಸೋಣ :

೧. ಪ್ರಾದೇಶಿಕ ಭಾಷಾಸಾಹಿತ್ಯದ ಆಂತರಿಕ ಸ್ತರದಲ್ಲಾಗುವ ಅನುವಾದ. ಅಂದರೆ ಕನ್ನಡ ಸಾಹಿತ್ಯದ ಅನುವಾದ ತಮಿಳು, ತೆಲುಗು, ಮಲಯಾಳಂ, ಗುಜರಾತಿ, ಪಂಜಾಬಿ, ಬಂಗಾಲಿ, ಮರಾಠಿ ಭಾಷೆಯಲ್ಲಿ.
೨. ಎರಡನೆಯದಾಗಿ ಹಿಂದಿಗೆ ಪ್ರಾದೇಶಿಕ ಭಾಷಾಸಾಹಿತ್ಯದ ಅನುವಾದ.
೩. ಮೂರನೆಯದಾಗಿ ಪ್ರಾದೇಶಿಕ ಭಾಷಾಸಾಹಿತ್ಯವನ್ನು ಭೂಮಂಡಲದ ಭಾಷೆಯಾಗಿ ವಿಶ್ವಕ್ಕೇ ವ್ಯಾಪಿಸಿರುವ ಇಂಗ್ಲಿಷ್ ಭಾಷೆಗೆ ಅನುವಾದಿಸುವುದು.

ಅನುವಾದದಿಂದ ವಿಶ್ವಸ್ತರದಲ್ಲಿ ಗುರುತಿಸಿಕೊಳ್ಳುವ ಯಾವ ಸಾಧ್ಯತೆ, ಸಂಭಾವನೆ ಇದ್ದರೂ ಭಾರತದಂತಹ ಬಹು ಸಾಂಸ್ಕೃತಿಕ ಹಾಗೂ ಬಹು ಭಾಷಾಪ್ರಾಂತೀಯ ದೇಶದಲ್ಲಿ ತಮ್ಮ ತಮ್ಮದರಲ್ಲಿಯೇ ಗುರುತಿಸಿಕೊಳ್ಳುವ ಹಾಗೂ ಸಮಭಾವದ ಮಾನಸಿಕತೆಯನ್ನು ಬೆಳೆಸುವ ಆವಶ್ಯಕತೆ ಮೊದಲಿದೆ. ಕಾರಣ ನಾವು ಇಂದು, ಭಿನ್ನ ಸಾಂಸ್ಕೃತಿಕ ಅಸ್ತಿತ್ವದ ಒಳಗೆ ಹುದುಗಿರುವ ಏಕತ್ವದ ಮಾನವೀಯ ಸಂಕಲ್ಪನೆಯ ಅನುಭೂತಿಯನ್ನು ಮನವರಿಕೆಮಾಡಿಕೊಳ್ಳುವ ಆವಶ್ಯಕತೆ ಇದೆ. ಇದನ್ನು ಸಾಧಿಸಲು ಅನುವಾದವು ಒಂದು ಸಾರ್ಥಕ ಕಲಾತ್ಮಕ ಮಾಧ್ಯಮವಾಗಿ ಸಾಬೀತಾಗುತ್ತದೆ. ರಾಜ್ಯ - ರಾಷ್ಟ್ರಸ್ತರದ ಸಮಾನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ವೈಚಾರಿಕತೆಯ ಸದೃಢತೆಗಾಗಿ ಪ್ರಾದೇಶಿಕ ಭಾಷಾಸಾಹಿತ್ಯದ ಆಂತರಿಕ ಅನುವಾದದ ಅನಿವಾರ್ಯತೆ

---

ಅನುವಾದದಿಂದ ವಿಶ್ವಸ್ತರದಲ್ಲಿ ಗುರುತಿಸಿಕೊಳ್ಳುವ ಯಾವ ಸಾಧ್ಯತೆ, ಸಂಭಾವನೆ ಇದ್ದರೂ ಭಾರತದಂತಹ ಬಹು ಸಾಂಸ್ಕೃತಿಕ ಹಾಗೂ ಬಹು ಭಾಷಾಪ್ರಾಂತೀಯ ದೇಶದಲ್ಲಿ ತಮ್ಮ ತಮ್ಮದರಲ್ಲಿಯೇ ಗುರುತಿಸಿಕೊಳ್ಳುವ ಹಾಗೂ ಸಮಭಾವದ ಮಾನಸಿಕತೆಯನ್ನು ಬೆಳೆಸುವ ಆವಶ್ಯಕತೆ ಮೊದಲಿದೆ. ಕಾರಣ ನಾವು ಇಂದು, ಭಿನ್ನ ಸಾಂಸ್ಕೃತಿಕ ಅಸ್ತಿತ್ವದ ಒಳಗೆ ಹುದುಗಿರುವ ಏಕತ್ವದ ಮಾನವೀಯ ಸಂಕಲ್ಪನೆಯ ಅನುಭೂತಿಯನ್ನು ಮನವರಿಕೆ ಮಾಡಿಕೊಳ್ಳುವ ಆವಶ್ಯಕತೆ ಇದೆ. ಇದನ್ನು ಸಾಧಿಸಲು ಅನುವಾದವು ಒಂದು ಸಾರ್ಥಕ ಕಲಾತ್ಮಕ ಮಾಧ್ಯಮವಾಗಿ ಸಾಬೀತಾಗುತ್ತದೆ. ರಾಜ್ಯ - ರಾಷ್ಟ್ರಸ್ತರದ ಸಮಾನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ವೈಚಾರಿಕತೆಯ ಸದೃಢತೆಗಾಗಿ ಪ್ರಾದೇಶಿಕ ಭಾಷಾಸಾಹಿತ್ಯದ ಆಂತರಿಕ ಅನುವಾದದ ಅನಿವಾರ್ಯತೆಯನ್ನು, ಇಂದು ಅತ್ಯಂತ ಗಂಭೀರವಾದ ಪರಿಕರವಾಗಿ ಬಳಸಬೇಕಾಗಿದೆ. ರಾಷ್ಟ್ರಸ್ತರದ ಜನತಾಂತ್ರಿಕ ಪರಿವರ್ತನೆ ಅಥವಾ ಜನವಾದಿ ದೃಷ್ಟಿಗಾಗಿ ಭಾರತೀಯ ಸಾಹಿತ್ಯದ ಚಿಂತಕರಿಗೆ, ಬೌದ್ಧಿಕ ವರ್ಗಕ್ಕೆ ಒಂದು ತಂತ್ರ ಮತ್ತು ವ್ಯವಸ್ಥೆಯ ಅಡಿಯಲ್ಲಿ ಕಾರ್ಯ ಸೂಚಿಗಳನ್ನು ರೂಪಿಸಿಕೊಳ್ಳುವ ಆವಶ್ಯಕತೆ ಇಂದು ತುರ್ತಾಗಿ ಎದುರಾಗಿದೆ ಮತ್ತು ಇದರ ಸಂಭಾವ್ಯತೆಯ ಬಾಗಿಲುಗಳನ್ನು ಕೇವಲ ಅನುವಾದ ತಂತ್ರ ತೆರೆಯಬಹುದು.

---

ಯನ್ನು ಇಂದು ಅತ್ಯಂತ ಗಂಭೀರವಾದ ಪರಿಕರವಾಗಿ ಬಳಸಬೇಕಾಗಿದೆ. ರಾಷ್ಟ್ರಸ್ತರದ ಜನತಾಂತ್ರಿಕ ಪರಿವರ್ತನೆ ಅಥವಾ ಜನವಾದಿ ದೃಷ್ಟಿಗಾಗಿ ಭಾರತೀಯ ಸಾಹಿತ್ಯದ ಚಿಂತಕರಿಗೆ, ಬೌದ್ಧಿಕ ವರ್ಗಕ್ಕೆ ಒಂದು ತಂತ್ರ ಮತ್ತು ವ್ಯವಸ್ಥೆಯ ಅಡಿಯಲ್ಲಿ ಕಾರ್ಯ ಸೂಚಿಗಳನ್ನು ರೂಪಿಸಿಕೊಳ್ಳುವ ಆವಶ್ಯಕತೆ ಇಂದು ತುರ್ತಾಗಿ ಎದುರಾಗಿದೆ ಮತ್ತು ಇದರ ಸಂಭಾವ್ಯತೆಯ ಬಾಗಿಲುಗಳನ್ನು ಕೇವಲ ಅನುವಾದ ತಂತ್ರ ತೆರೆಯಬಹುದು. ಪ್ರಾದೇಶಿಕತೆಯ ಅಸ್ಮಿತೆಯನ್ನು ಜೋಪಾನವಾಗಿರಿಸಿಕೊಂಡು ಭಾರತೀಯತೆಯ ಆತ್ಮವನ್ನು ಗುರುತಿಸುವ ಆವಶ್ಯಕತೆಯನ್ನು ಇಂದಿನ ಪರಿಸರದಲ್ಲಿ, ಬಹಳ ಆಳವಾಗಿ, ಸಂಶ್ಲಿಷ್ಟವಾಗಿ ನಾವು ಮನಗಾಣುತ್ತಿದ್ದೇವೆ. ಸಂದಿಗ್ಧತೆಯ ನೂರೊಂದು ಸವಾಲುಗಳು ಇಂದು ಐಕ್ಯತೆಯ ಮಾರ್ಗದಲ್ಲಿವೆ. ದೇಶ ಹಾಗೂ ರಾಷ್ಟ್ರದ ಸಂದರ್ಭದಲ್ಲಿ ಭಾರತೀಯ ಭಾಷೆಗಳಲ್ಲಿ ಟ್ಯಾಗೋರರ ಗೀತಾಂಜಲಿಯ ಅನುವಾದ, ದ. ರಾ. ಬೇಂದ್ರೆಯವರ ನಾಕುತಂತಿಯ ಅನುವಾದ, ಕಬೀರರ ಕಬೀರವಾಣಿಯ ಅನುವಾದ, ಸಂತ ಜ್ಞಾನೇಶ್ವರರ ಜ್ಞಾನೇಶ್ವರಿಯ ಅನುವಾದ, ಈ ಸಂದಿಗ್ಧ ಸವಾಲುಗಳಿಗೆ ಉತ್ತರ ಕೊಡಲು ಎತ್ತಿದಂತಹ ಅತ್ಯಂತ ಮಾನವೀಯ ಹೆಜ್ಜೆಗಳಾಗಿವೆ.

ಉತ್ತರಶತಿಯ ಸಂದರ್ಭದಲ್ಲಿ ರಾಷ್ಟ್ರಸ್ತರದಲ್ಲಿ ದಲಿತ ಎಜೆಂಡಾದ ಪ್ರಸ್ತುತಿಯ ಹಿಂದೆ ಹುದುಗಿರುವ ಗುಪ್ತ ಸತ್ಯವೆಂದರೆ ಅನುವಾದದ ಸಾಹಿತ್ಯಿಕ ಪ್ರಯತ್ನವೆಂದರೆ ತಪ್ಪಾಗಲಾರದು. ಅನುವಾದವನ್ನು ಅತ್ಯಂತ ಜಾಣ್ಮನದಿಂದ ಸಾಧನರೂಪವಾಗಿ ಬಳಸಿಕೊಂಡು, ಮರಾಠಿ ಸಾಹಿತ್ಯ ಚಿಂತನ ಕ್ಷೇತ್ರದ ದಲಿತ ವಿಮರ್ಶೆ ಹಾಗೂ ದಲಿತ ಸಂವೇದನೆ ಇಂದು ದೇಶದ ಸರಾಸರಿ ಎಲ್ಲ ಭಾರತೀಯ ಭಾಷಾಸಾಹಿತ್ಯದಲ್ಲಿ ಒಂದು ಪ್ರಬಲ ಸಾಹಿತ್ಯ ಹಾಗೂ ಜೀವನಮೌಲ್ಯವಾಗಿ ಸ್ಥಾಪಿತಗೊಳ್ಳಲು ಸಫಲವಾಯಿತು. ಅತ್ಯಂತ ಚುರುಕಿನಿಂದ ಮರಾಠಿ, ಪಂಜಾಬಿ, ಗುಜರಾತಿ, ಕನ್ನಡ, ತಮಿಳು, ಮಲಯಾಳಂ, ತೆಲುಗುಗಳಂತಹ ಪ್ರಾದೇಶಿಕ ಭಾಷೆಯಲ್ಲಿ ರಚಿತಗೊಂಡ ದಲಿತ ಕಥೆ, ಆತ್ಮಕಥೆ, ವೈಚಾರಿಕ ಸಾಹಿತ್ಯ ಅನುವಾದಿತ ರೂಪದಲ್ಲಿ ತಮ್ಮೊಳಗಿನ ಆಂತರಿಕ ವಲಯದಲ್ಲಿ ಉಪಲಬ್ಧವಾದುದರಿಂದಲೇ, ದಲಿತ ವಿಮರ್ಶೆ ಇಂದು ಸಾಹಿತ್ಯ ಚಿಂತನೆಯ ಸ್ತರದಲ್ಲಿಯೆ ಅಲ್ಲ ರಾಜಕೀಯ ಮತ್ತು ಸಮಾಜ ಮನೋವೈಜ್ಞಾನಿಕ ಸ್ತರಗಳಲ್ಲಿಯೂ ಕೂಡ ಮೂಲ ಜೀವದರ್ಶನವಾಗಿ ಬೇರೂರಿದೆ. ಆದರೆ ಇಲ್ಲಿ ಬರುವ ಪ್ರಮುಖ ಪ್ರಶ್ನೆಯೆಂದರೆ ಕನ್ನಡ ಭಾಷಾಸಾಹಿತ್ಯವೂ, ಕಥಾಸಾಹಿತ್ಯವೂ ಎಷ್ಟು ಪ್ರತಿಶತ ಪ್ರಮಾಣದಲ್ಲಿ ತನ್ನನ್ನು ತಾನು, ಈ ಪ್ರಬಲ ಮಾಧ್ಯಮವಾದ ಅನುವಾದಕ್ಕೆ ತೆರವು ಮಾಡಿಕೊಟ್ಟಿದೆ ? ಪ್ರಾಂತೀಯ ಭಾಷೆಯ ಸಮಕಾಲೀನ ಗತಿವಿಧಿಗಳಲ್ಲಿ ಕನ್ನಡ ಭಾಷೆ ತನ್ನ ಉಪಸ್ಥಿತಿಯನ್ನು ಖಚಿತಪಡಿಸಿಕೊಂಡಿದೆ, ಎಷ್ಟು ಪ್ರಮಾಣದಲ್ಲಿ ತನ್ನದೇ ಆದಂತಹ ವೈಚಾರಿಕ ನಿಲುವು ಹಾಗೂ ಜೀವನವನ್ನು ನಿರೂಪಿಸುವ ಪರಿಯಲ್ಲಿ ಹೊರಗಿನವರನ್ನು ಶಾಮೀಲು ಮಾಡಿಕೊಂಡಿದೆ ? ಈ ನಿಟ್ಟಿನಲ್ಲಿ ನೋಡಿದಾಗ, ಶೈಕ್ಷಣಿಕ ಸಂಸ್ಥೆಗಳ, ಭಾಷಾ ಸಂಘಸಂಸ್ಥೆಗಳ ಹಾಗೂ ಶಿಕ್ಷಣ ಕೇಂದ್ರಗಳ ಮೂಲದಿಂದ ಆಯೋಜಿತಗೊಳ್ಳುವ ಕಾರ್ಯಕ್ರಮಗಳಲ್ಲಿ, ದೇಶದ ಬೇರೆಯ ಭಾಷಾಸಾಹಿತ್ಯದ ತತ್ವಗಳನ್ನು ಶಾಮೀಲು ಮಾಡಿಕೊಳ್ಳುವ ಹಾಗೂ ಅದರ ಮಾಧ್ಯಮದಿಂದ ಅನುವಾದವನ್ನು ಅನುಮೋದಿಸುವ ಸಂಭಾವನೆಗಳು ಕನ್ನಡ ಭಾಷಾಪ್ರಾಂತದಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಕಾಣಸಿಗುವುವು. ಕನ್ನಡಿಗರ ಈ ನಿಲುವನ್ನು ಗಮನಿಸಿದಾಗ ಬಂಗಾಳಿಯರ ತರಹ ಕನ್ನಡಿಗರೂ ಕೂಡ ಅಸಹಕಾರ ಅಥವಾ ಶ್ರೇಷ್ಠತೆಯ ಮನೋಗ್ರಂಥಿಯಿಂದ ಬಾಧಿತ ರಾಗಿದ್ದಾರೆಯೇ ಎಂಬ ಸಂಶಯ ಬರುವುದು ಸಹಜ !




ಸಾಗರದ ಗಾಂಧಿಮಂದಿರದಲ್ಲಿ ದಿನಾಂಕ ೨೯-೦೯-೨೦೦೬ರಂದು ನವಕರ್ನಾಟಕ ಪುಸ್ತಕ ಪ್ರದರ್ಶನ ಪ್ರಾರಂಭವಾಯಿತು. ಪುರಸಭಾ ಅಧ್ಯಕ್ಷೆ ಶ್ರೀಮತಿ ಸಾಬಿರಾ ಯೂಸುಫ್ ಸಮಾರಂಭದ ಉದ್ಘಾಟನೆ ಮಾಡಿದರು. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷರಾದ ಶ್ರೀ ಪ್ರಕಾಶ ಆರ್. ಕಮ್ಮಾರ್ ಅಧ್ಯಕ್ಷತೆ ವಹಿಸಿದ್ದರು ಹಾಗೂ ಅತಿಥಿಗಳಾಗಿ ಶ್ರೀ ಎನ್. ಜಿ. ಪೈ ಮತ್ತು ಎಚ್. ಬಿ. ರಾಘವೇಂದ್ರ ಹಾಗೂ ಪುಸ್ತಕಪ್ರೇಮಿಗಳು ಭಾಗವಹಿಸಿದ್ದರು.

ಸಮಕಾಲೀನ ಸಂದರ್ಭದಲ್ಲಿ ವಿವಿಧ ಭಾಷಾಸಾಹಿತ್ಯದ ಪತ್ರಿಕೆಗಳನ್ನು, ದಲಿತ ಮತ್ತು ಸ್ತ್ರೀ ಸಾಹಿತ್ಯ, ಆದಿವಾಸಿ ಸಾಹಿತ್ಯವನ್ನು ಕೇಂದ್ರದಲ್ಲಿ ಇಟ್ಟುಕೊಂಡು ಹೊರಡಿಸಿರುವ ಪತ್ರಿಕೆಯ ವಿಶೇಷಾಂಕಗಳಲ್ಲಿ ಕನ್ನಡ ಸಾಹಿತ್ಯದ ಹಾಗೂ ಕನ್ನಡ ಕಥೆಗಳ ಪಾಲ್ಗೊಳ್ಳುವಿಕೆಯ ಪ್ರತಿಶತ ಪ್ರಮಾಣ ಗಣನೀಯವಾಗಿ ಕಡಿಮೆ ಇದೆ. ಜೊತೆಗೆ ಈ ಸಂಶಯ ಕೂಡ ಇರುತ್ತದೆ: ಕನ್ನಡದ ಮಾನಸಿಕತೆ, ತನ್ನನ್ನು ತಾನು ಪ್ರಾದೇಶಿಕ ಭಾಷಾಸಾಹಿತ್ಯದ ಜೊತೆಗೆ ಸಹಮತಿಯ ಅಥವಾ ಏಕರೂಪತೆಯನ್ನು ಮನಗಾಣಲು ಸಾಧ್ಯವಿಲ್ಲವೇ ! ಎಷ್ಟರ ಪ್ರಮಾಣದಲ್ಲಿ ಅದು ಇಂಗ್ಲಿಷ್ ಭಾಷೆಗೆ ತನ್ನನ್ನು ತಾನು ಗುರುತಿಸಿಕೊಳ್ಳುವ ಹವಣಿಕೆಯಲ್ಲಿರುವುದು ? ಕನ್ನಡ ಲೇಖಕನ ಮಾನಸಿಕತೆ ತನ್ನನ್ನು ತಾನು ಎಷ್ಟು ತಲ್ಲೀನತೆಯಿಂದ ಇಂಗ್ಲಿಷಿನಲ್ಲಿ ಅನುವಾದಿತಗೊಳ್ಳುವುದನ್ನು ಕಂಡುಕೊಳ್ಳಲು ಹವಣಿಸುವುದೋ ಅಷ್ಟು ಪ್ರಾದೇಶಿಕತೆಯ ತನ್ನ ಪ್ರಸ್ತುತಿಯನ್ನು ಪರಿಗಣಿಸದೆ ಹೋಗಬಹುದು.

ಪ್ರಾದೇಶಿಕ ಭಾಷಾನುವಾದದ ಎಲ್ಲ ಸವಲತ್ತುಗಳನ್ನು ಬಳಸಿಕೊಳ್ಳುತ್ತ ಇಂದು ದಲಿತ ಸಾಹಿತ್ಯ ಒಂದು ದೇಶವ್ಯಾಪಿ ಸಾಹಿತ್ಯಿಕ ಆಂದೋಲನವಾಗಿ ಪರಿಣಮಿಸಿದೆ. ಆದರೆ ಇದೇ ನೆಲೆಯಿಂದ ನೋಡಿದಾಗ, ಸ್ತ್ರೀಸಾಹಿತ್ಯ ಇಂತಹ ಅನುಕೂಲತೆಗಳನ್ನು ತನ್ನ ತೆಕ್ಕೆಗೆ ಹಾಕಿಕೊಂಡಿಲ್ಲ. ದೇಶದ ಎಲ್ಲ ಭಾರತೀಯ ಭಾಷೆಗಳಲ್ಲಿ ಹೆಸರು ಪಡೆದಿರುವ ಲೇಖಕಿಯರಲ್ಲಿ ತಮ್ಮನ್ನು ವಿದೇಶಿ ಮೂಲದ ಸ್ತ್ರೀವಾದದ ಕೂಡ ಹೊಂದಿಸಿಕೊಂಡು ಪರಿಚಯಿಸುವ ಸಂಭ್ರಮವನ್ನು ಕಾಣುತ್ತೇವೆ. ನೆರೆ ರಾಜ್ಯದ ಭಾಷೆಯ ಸ್ತ್ರೀಸಾಹಿತ್ಯದ ಸೃಜನಾತ್ಮಕ ಗತಿವಿಧಿಗಳಿಂದ ಅವರು ಅಪರಿಚಿತರೇ ಸರಿ. ಪ್ರಾದೇಶಿಕ ಭಾಷಾಸಾಹಿತ್ಯದಲ್ಲಿ ಅನುವಾದಿತಗೊಂಡ ಸ್ತ್ರೀವಾದದ ಗ್ರಂಥಗಳ ಕಥೆ, ಆತ್ಮಕಥೆಗಳ ಅಂಕೆಸಂಖ್ಯೆಯನ್ನು ಗಮನಿಸಿದಾಗ ಅವರಲ್ಲಿರುವ ಉದಾಸೀನ ಹಾಗೂ ತಾತ್ಸಾರ ತಮ್ಮದೇ ನೆರೆ ಪ್ರದೇಶದ ಸ್ತ್ರೀಸಾಹಿತ್ಯದ ಬಗ್ಗೆ ಢಾಳಾಗಿ ಕಂಡುಬರುತ್ತದೆ. ಕನ್ನಡ ಸಂದರ್ಭದಲ್ಲಿ ಈ ವ್ಯತ್ಯಾಸ ಗಣನೀಯವಾಗಿದೆ. ಅತ್ಯಂತ ಜಾಗರೂಕತೆಯಿಂದ, ದೇಸೀ ಸಂಸ್ಕೃತಿಯ ಗಂಧದಿಂದ ತನ್ನ ಸುತ್ತಮುತ್ತಲಿನ ಪ್ರದೇಶದ ವಾಸ್ತವಿಕತೆಯನ್ನು ಕಥೆ ಕಾದಂಬರಿಗಳ ಮುಖಾಂತರ ಬಿಂಬಿಸುವ ಕನ್ನಡ ಲೇಖಕಿ ಗೀತಾ ನಾಗಭೂಷಣ ಹಿಂದಿಯ ಸ್ತ್ರೀಲೋಕಕ್ಕೆ, ಅಥವಾ ಬೇರೆ ಭಾಷಾ ಪ್ರದೇಶದವರಿಗೆ ಎಷ್ಟು ಪರಿಚಿತರು ? ಉತ್ತರ ನಿಜವಾಗಿಯೂ ನಿರಸನ ಉಂಟುಮಾಡುವಂತಹುದು. ಆದರೆ ವಿದೇಶಿ ಸ್ತ್ರೀವಾದಿಗಳ ಲೇಖಕಿಯರ ಪುಸ್ತಕಗಳು, ಅಭಿಜಾತ್ಯತೆಯ ಆವರಣ ಪಡೆದು ನಮ್ಮ ಮನೆಬಾಗಿಲಿಗೆ ದಾಳಿ ಇಡುತ್ತವೆ.

ನಿಟ್ ಇಂಡಿಯಾ ಥ್ರೂ ಲಿಟರೆಚರ್ ಮೂಲಕ ಶಿವಶಂಕರಿಯವರ ದೇಶದ ಸಂಪೂರ್ಣ ಸಾಂಸ್ಕೃತಿಕ ಸಾಹಿತ್ಯಿಕ ಮುಖವನ್ನು ಪರಿಚಯಿಸುವ ಏಕವ್ಯಕ್ತಿ ಪ್ರಯತ್ನದ ತರಹ, ಒಂದು ವೇಳೆ ಅನುವಾದದ ಸಾಧ್ಯತೆಯನ್ನು ಬಳಸಿಕೊಂಡು ದೇಶದ ಸಂಪೂರ್ಣ ಸ್ತ್ರೀಸಾಹಿತ್ಯವನ್ನು ಒಂದು ವೈಚಾರಿಕ ಕೇಂದ್ರದ ಮುಖಾಂತರ ಮೈಗೂಡಿಸಿಕೊಂಡು, ಅದರಲ್ಲಿ ಹುದುಗಿರುವ ಸೃಜನಾತ್ಮಕ ವೈವಿಧ್ಯತೆಯನ್ನು ಬಳಸಿಕೊಳ್ಳುವ ಪ್ರಯತ್ನ ಮಾಡಿದರೆ ದೇಶದ ಸ್ತ್ರೀವಾದ ಹಾಗೂ ಸಾಹಿತ್ಯಕ್ಕೆ ಒಂದು ಭದ್ರ ದೇಸೀನೆಲೆ ಸಿಗುವ ಸಂಭಾವನೆಗಳು ಕಾಣಸಿಗುತ್ತವೆ. ಪಾಶ್ಚಾತ್ಯ ಮೂಲದ ಅನುಕರಣೆಯ ಅನ್ಯೈಜಕತೆ, ಅತಿವಾದದ ಭ್ರಮಾತ್ಮಕ ಆವರಣದಿಂದ ಹೊರಬಂದು, ವಾಸ್ತವತೆಯನ್ನು ಕಂಡುಕೊಳ್ಳಲು ಅನುಕೂಲವಾಗುವುದು.

ಉಂಜುರ ಮಾ ಕಾಲ-ಛಾ ತನ್ಜುರ ಮನ ಕಾಲ, ಅಂದರೆ ಒಳ್ಳೆಯ ವಿಚಾರ ಯಾವುದಾದರೂ ದಿಸೆಯಿಂದ ಬರಲಿ, ಅವನ್ನು ಸ್ವೀಕರಿಸು. ಅನುವಾದ ಹಾಗೂ ಅನುವಾದಕ ಈ ತತ್ವವನ್ನು ತನ್ನ ರಚನಾಪ್ರಕ್ರಿಯೆಯಲ್ಲಿ ದರ್ಶನವಾಗಿ ಸ್ವೀಕರಿಸಬೇಕಿದೆ. ಇಂದಿನ ಈ ಪ್ರಾದ್ಯೋಗಿಕ ಹಾಗೂ ತಂತ್ರಜ್ಞಾನದ ಯುಗದಲ್ಲಿ ಭಾರತೀಯ ಭಾಷೆಯಲ್ಲಿನ ಅನುವಾದ, ವಿಶ್ವಸ್ತರದ ಸಂದರ್ಭದಲ್ಲಿ ವಿರುದ್ಧ ದಿಕ್ಕಿನಲ್ಲಿ ಪ್ರವಹಿಸುವುದನ್ನು ನಾವು ಕಾಣುತ್ತೇವೆ. ಫ್ರೆಂಚ್, ಜರ್ಮನ್, ಅಮೆರಿಕನ್, ಜಾಪನೀಸ್, ಸ್ವೀಡಿಶ್ ಭಾಷಾಸಾಹಿತ್ಯ, ಅನುವಾದದ ಮುಖಾಂತರ ಭಾರತೀಯ ಭಾಷೆಯಲ್ಲಿ ಯಾವ ಪ್ರಮಾಣದಲ್ಲಿ ಪ್ರವೇಶ

ಪಡೆಯುತ್ತಿದೆಯೋ, ಅದೇ ಪ್ರಮಾಣದಲ್ಲಿ, ನಮ್ಮ ಸಾಹಿತ್ಯವು ಇಂಗ್ಲಿಷ್ ಭಾಷೆಗೆ ಅನುವಾದಗೊಳ್ಳುವಾಗ ಅನುವಾದ, ಅನಿವಾರ್ಯತೆ ಹಾಗೂ ಬೇಡಿಕೆಯ ಆಧಾರದ ಮೇಲೆ ಕಡಿಮೆ ಆಗುತ್ತಾ ಹೋಗುತ್ತದೆ. ವಸಾಹತುಶಾಹಿಯ ಮತ್ತು ಬೂರ್ಜ್ವಾ ಮಾನಸಿಕತೆಯ ಪರಿಣಾಮವಾಗಿ ಇಲ್ಲಿನ ನಮ್ಮ ಅನುವಾದದ ಮಾಧ್ಯಮಗಳು ಸಾಮ್ರಾಜ್ಯಶಾಹಿ ನೀತಿ, ಜೀವನಮೌಲ್ಯ ಹಾಗೂ ಸಂಸ್ಕೃತಿಗಳಿಗೆ ತಮ್ಮನ್ನು ತಾವು ತೆರೆದುಕೊಳ್ಳುತ್ತಾ ಹೋಗುತ್ತವೆ. ಜೊತೆ ಜೊತೆಗೆ ತಮ್ಮ ಸಾರ್ಥಕತೆಯನ್ನೂ ಕೂಡ ಕಂಡುಕೊಳ್ಳುತ್ತವೆ. ಓರಿಯಂಟಲಿಜಂನ ಅನಿವಾರ್ಯ ಪರಿಣಾಮವಾಗಿ ಅನುವಾದ ಮಾಧ್ಯಮದಿಂದ ಆರ್ಥಿಕ ಹಾಗೂ ಸಾಂಸ್ಕೃತಿಕ ವಲಯದಲ್ಲಿ ಹೇರುವಿಕೆ ಹಾಗೂ ಸೋರುವಿಕೆ ಏಕಕಾಲದಲ್ಲಿ ಇಂದು ನಡೆಯುತ್ತಿದೆ.

ಉತ್ತರಶತಿಯ ಕನ್ನಡ ದಲಿತ ಹಾಗೂ ಸ್ತ್ರೀ ಕಥೆಗಳ ಅನುವಾದವನ್ನು ಕೈಗೆತ್ತಿಕೊಂಡಾಗ, ಈ ತೆರನಾದ ಕಥೆಗಳ ವಿಶ್ವಸ್ತರದ ಅನುವಾದ, ನಿಜವಾಗಿಯೂ ಅಧಿಕ ಜಟಿಲ ಹಾಗೂ ಭಾಷೆಯ ಸಂಪ್ರೇಷಣೀಯತೆಯ ಪ್ರಯೋಗ ಸಾಧ್ಯತೆಯ ಸವಾಲುಗಳನ್ನು ಎದುರಿಸುತ್ತದೆ. ಒಂದು ತೀರ ವಿಶಿಷ್ಟ ವರ್ಣ ಹಾಗೂ ವರ್ಗ ಸಮುದಾಯದ ಮಡಿಲಲ್ಲಿ ಬೆಳೆದ, ಧ್ವನಿತಗೊಂಡ ದಲಿತ ಸಂವೇದನೆ ಹಾಗೂ ಸ್ತ್ರೀ ಸಂವೇದನೆಯ ಕಥೆಗಳನ್ನು ಅನುವಾದಿಸುವಾಗ, ಅತೀವ ಜಾಗರೂಕ ಹಾಗೂ ಪ್ರಜ್ಞಾಪೂರ್ಣ ಸಾಂಸ್ಕೃತಿಕ ಅಧ್ಯಯನ ಹಾಗೂ ಅನುಭವದ ಅನಿವಾರ್ಯತೆಯನ್ನು ಅನುವಾದಕ ಕಂಡುಕೊಳ್ಳುತ್ತಾನೆ. ಕಾರಣ ಅನುವಾದಕನ ಮುಂದಿರುವ ಪ್ರಮುಖ ಸವಾಲು ಎಂದರೆ ಈ ಸಾಂಸ್ಕೃತಿಕ ಜಗತ್ತಿನ ಸೂಕ್ಷ್ಮತೆಗಳನ್ನು, ಭಾಷೆಯ ಧ್ವನ್ಯಾತ್ಮಕ ವಿಶಿಷ್ಟತೆಗಳನ್ನು ಅತ್ಯಂತ ನಾಜೂಕು ಕೈಗಳಿಂದ, ಮೂಲಕ್ಕೆ ಧಕ್ಕೆ ಬರದ ಹಾಗೆ ಬೇರೊಂದು ಭಾಷೆಯಲ್ಲಿ ಪ್ರಸ್ತುತಪಡಿಸುವುದು. ಜೊತೆಗೇನೆ ಅನುವಾದಕ, ತನ್ನದೇ ಆದಂತಹ ಆರೋಪಿತ ದೃಷ್ಟಿಯಿಂದ ತನ್ನ ಕೈಚಳಕವನ್ನೂ ಕೂಡ ತೋರಿಸಬಹುದು. ಕನ್ನಡದ ದೇವನೂರು ಮಹಾದೇವ, ಬರಗೂರು ರಾಮಚಂದ್ರಪ್ಪ, ಗೀತಾ ನಾಗಭೂಷಣ, ಬಿ. ಟಿ. ಲಲಿತಾ ನಾಯಕ, ಅರವಿಂದ ಮಾಲಗತ್ತಿ, ಕರೀಗೌಡ ಬೀಚನಹಳ್ಳಿ, ಮ. ನ. ಜವರಯ್ಯ, ಮೊಗಳ್ಳಿ ಗಣೇಶ ಮುಂತಾದ ಪ್ರಾದೇಶಿಕ ಹಾಗೂ ದಲಿತ ಕಥಾಕಾರರ ಕಥೆಗಳ ಅನುವಾದ ವಿದೇಶಿ ಭಾಷಾನುವಾದಕನ ಎದುರು ಇಂತಹುದೇ ಸಂದರ್ಭಗಳನ್ನು ಸೃಷ್ಟಿಸದೇ ಇರದು. ಇಂತಹ ಅನುವಾದ ತನ್ನೊಳಗೇನೆ ಒಂದು ಸವಾಲು ಕೂಡ.




ಈ ಸಂದರ್ಭದಲ್ಲಿ, ಡೇವಿಡ್ ರೂಬೆನ್‌ನ ಪ್ರೇಮಚಂದರ ಕಥೆಗಳ ಅನುವಾದವನ್ನು ಕುರಿತು ಹೇಳಿದ ಹಿಂದಿಯ ಖ್ಯಾತ ಚಿಂತಕ ರಾಜೇಂದ್ರ ಯಾದವ್ ಅವರ ವಿಚಾರ ಗಮನಾರ್ಹವಾಗಿದೆ : ''ಪ್ರೇಮಚಂದರ ಅನುವಾದದ ಸಂದರ್ಭದಲ್ಲಿ ಡೇವಿಡ್ ರೂಬೆನ್‌ನ ಮುಂದೆ ಎದುರಾದ ಸಮಸ್ಯೆ ಕೇವಲ ಆತನ ಕಥೆಯಲ್ಲಿರುವ ಶಬ್ದಪುಂಜ, ಲೋಕೋಕ್ತಿಗಳ ಹಾಗೂ ವಕ್ರೋಕ್ತಿಗಳ ಅನುವಾದದ ಜೊತೆ ಗುದ್ದಾಡ ಬೇಕಾಗುತ್ತದೆಯೆಂದೇ ಅಲ್ಲ. ಅವನಿಗೆ ಆ ಸಮಾಜ ಮತ್ತು ಸಂಸ್ಕೃತಿಯನ್ನೂ ಕೂಡ ಅನುವಾದಿಸಬೇಕಾಗುತ್ತದೆ. ಆದರೆ ಅಲ್ಲಿ ಕೇವಲ ಎರಡು ಸಂಸ್ಕೃತಿಗಳಿರುವುದಿಲ್ಲ; ಎರಡು ಭಿನ್ನ ಸಾಮಾಜಿಕ ಅವಸ್ಥೆಗಳು, ವ್ಯವಸ್ಥೆಗಳು ಮತ್ತು ಪಾತ್ರಗಳ ಸ್ಥಿತಿ ಹಾಗೂ ಮಾನಸಿಕತೆ ಕೂಡ ಅಸ್ತಿತ್ವದಲ್ಲಿರುವವು. ಯಾವ ವಿದೇಶದ ಅಧಿಕಾರ, ಶಾಸನ ಹಾಗೂ ಸಾಮಂತೀಯ ಶೋಷಣೆ, ಜಾತಿವಾದ ಅನ್ಯಾಯದ ನಡುವೆ ಪ್ರೇಮಚಂದರು ಜೀವನವನ್ನು ಸೆರೆಹಿಡಿಯುತ್ತಿದ್ದರೋ – ಡೇವಿಡ್ ರೂಬೆನ್‌ನ ಹಿರಿಯರು ಆ ಎಲ್ಲ ಪೀಡೆ ಯಾತನೆಗಳ ಹುಟ್ಟುಹಾಕುವವರಾಗಿದ್ದರು. ಕಾರಣ ಡೇವಿಡ್ ರೂಬೆನ್‌ಗೆ ಪ್ರೇಮಚಂದರ ರಚನಾಲೋಕದಲ್ಲಿ ಇಳಿಯುವುದು, ಒಂದು ತರಹ ಅದೇ ದೂರೆ – ಸ್ಮರಣೆಯ ಅತ್ಯಂತ ಪ್ರಾಮಾಣಿಕ ಆದರೆ ಅತೀವ ತ್ರಾಸದಾಯಕ ದರ್ಶನವಾಗಿದೆ.''

ಇನ್ನು ರಾಷ್ಟ್ರಸ್ತರದ ಅನುವಾದ ಅಂದರೆ ಕನ್ನಡದಿಂದ ಹಿಂದಿಗೆ ಅನುವಾದಿಸುವ ಕನ್ನಡ ಕಥಾಸಂದರ್ಭವನ್ನು ಅವಲೋಕಿಸೋಣ.

ಉತ್ತರಶತಿಯ ಕನ್ನಡ ಸಾಹಿತ್ಯ, ವಿಶೇಷವಾಗಿ ಸಮಕಾಲೀನ ಕಥಾಸಂದರ್ಭ, ಅದರ ಮೂಲ ಚಿಂತನೆಯ ಬೀಜಗಳು, ಸಂವೇದನೆಯ ಕ್ಷೇತ್ರಗಳ ತಿಳುವಳಿಕೆ ಅತ್ಯಂತ ಮುಖ್ಯವಾದುವು. ದಲಿತವಾದ, ಸ್ತ್ರೀ ವಿಮರ್ಶೆ, ರಾಷ್ಟ್ರ ರಾಜ್ಯವಾದದ ಸಮಸ್ಯೆಗಳು, ಬಂಡವಾಳಶಾಹಿಯ ಆರ್ಥಿಕ ನೀತಿಗಳು, ಅದರಿಂದುಂಟಾದ ಸಾಂಸ್ಕೃತಿಕ ಸಂಘರ್ಷ, ಜಾಗತೀಕರಣ ಹಾಗೂ ವಿಶ್ವ ವ್ಯಾಪಾರೀಕರಣದ ಕರಾಳ ಅಮಾನವೀಯ ವ್ಯವಸ್ಥೆ, ರೈತರ ಆತ್ಮಹತ್ಯೆಯ ಪ್ರಕರಣಗಳು, ಉಪಭೋಗೀಸಂಸ್ಕೃತಿಯ ಭೀಷಣ ಕೌಟುಂಬಿಕ ಹಾಗೂ ಸಾಮಾಜಿಕ ಪರಿಣಾಮಗಳು ಇವೆಲ್ಲದರ ಬಗ್ಗೆ ಇತ್ತೀಚಿನ ಕಥೆಗಳು ಸ್ಪಂದಿಸಿವೆ. ವರ್ತಮಾನಕಾಲದ ರಾಜಕೀಯ ಭೂಮಿ ಹಾಗೂ ಸಾಮಾಜಿಕ ಸಂದರ್ಭಗಳು ಎಲ್ಲ ಭಾಷಾಪ್ರದೇಶದ ಜೀವನದಲ್ಲಿ ಹೆಚ್ಚುಕಡಿಮೆ ಸರಿಸಮಾನವಾದ ಜೀವನ ಸಮಸ್ಯೆಗಳನ್ನು ಹಾಗೂ ಪರಿಕರಗಳನ್ನು ಉಣಬಡಿಸುತ್ತಿವೆ. ಎಲ್ಲ ಭಾಷಾ ಪ್ರದೇಶಗಳಿಗೆ ತಮ್ಮದೇ ಆದಂತಹ ಪ್ರಾದೇಶಿಕತೆಯ ವೈಶಿಷ್ಟ್ಯ ಹಾಗೂ ಭೌಗೋಳಿಕ ಪರಿಸೀಮೆಯ ವ್ಯಾಪ್ತಿಯಲ್ಲಿ ಆಬದ್ಧವಾದ ಪ್ರಾದೇಶಿಕ ಸಂಸ್ಕೃತಿಯ ಗಂಧ ಹೊಳವು ಇದ್ದಾಗ್ಯೂ ಕೂಡ, ಇಂದಿನ ಸಮಯದಲ್ಲಿ ದೇಸೀಯ ಸ್ತರದಲ್ಲಿ ಕೆಲವು ಸಮಾನ ಜಾಯಮಾನವುಳ್ಳ , ಧರ್ಮವುಳ್ಳ ಜೀವನ ಜಟಿಲತೆಗಳನ್ನು ಹಾಗೂ ಸಂಶ್ಲಿಷ್ಟ ಜೀವನ ತತ್ವವನ್ನು ಎಲ್ಲ ಭಾಷಾಪ್ರಾಂತಗಳು ಎದುರಿಸುತ್ತಿವೆ. ಈ ಸರಿಸಮಾನವಾದ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಗಳು ಇಂದು ಸಂಪೂರ್ಣವಾಗಿ ಜಾಗತೀಕರಣದ ವಿಶ್ವವ್ಯಾಪಾರನೀತಿಯ ಕೈಗಳಿಂದ ನಿಯಂತ್ರಿತಗೊಂಡಿವೆ. ಕಾರಣ ಇಂದಿನ ಲೇಖಕನಿಗೆ ಎದುರಾಗುವ ಸವಾಲುಗಳಲ್ಲಿ ಬಹುಮುಖ್ಯವಾದವುಗಳೆಂದರೆ, ಒಂದೇ ಪಟ್ಟಿನಲ್ಲಿ ಸ್ಥಾನೀಯತೆ ಹಾಗೂ ಪ್ರಾದೇಶಿಕತೆಯ ಅಸ್ತಿತ್ವ ಅಸ್ಮಿತೆಯನ್ನು ಉಳಿಸಿಕೊಂಡು, ಜಾಗತಿಕ ವಿಶ್ವದ ಓಟದಲ್ಲಿ ತನ್ನನ್ನು ತಾನು ಸೇರಿಸಿಕೊಳ್ಳುವ ಅನಿವಾರ್ಯತೆಯಾಗಿ, ಜೊತೆಗೆ ಅದಕ್ಕಂಟಿಕೊಂಡಿರುವ ಹೊಸ ಮೌಲ್ಯ ವ್ಯವಸ್ಥೆಯ ಅರಿವು, ಹಾಗೂ ಅವುಗಳ ಗುರುತಿಸಿಕೊಳ್ಳುವುದಾಗಿವೆ. ಇವುಗಳು ಇಂದಿನ ಲೇಖಕನ ರಚನಾತ್ಮಕ ಪ್ರತಿಬದ್ಧತೆಗಳು ಕೂಡ ಆಗಿವೆ; ಆಗಲೇಬೇಕಾಗಿವೆ.

ಇಂದಿನ ಈ ಜಾಗತೀಕರಣದ ಸಂದರ್ಭದಲ್ಲಿ, ರಾಷ್ಟ್ರಸ್ತರದ ಎಲ್ಲ ವರ್ಗ, ಸಮುದಾಯ ಹಾಗೂ ಜನಾಂಗೀಯ ಜೀವನ, ತನ್ನದೇ ಆದಂತಹ ಜೀವನ ಪರಿಕರಗಳನ್ನು ಗುರುತಿಸಿಕೊಂಡು, ಸಾಹಿತ್ಯದ ನೆಲೆಯಲ್ಲಿ ಒಂದು ವೇದಿಕೆಯ ಮಾಧ್ಯಮವಾಗಿ ವಿಶ್ವಸಂಸ್ಕೃತಿಗೆ ಪ್ರತಿಸ್ಪಂದಿಸುವ ಆವಶ್ಯಕತೆಯಿದೆ. ಒಂಟೊಂಟಿಯಾಗಿ ಈ ಪ್ರವಾಹದ ವಿರುದ್ಧ ಹೋರಾಡುವುದರ ಬದಲಾಗಿ, ಒಂದೇ ಮೂಲದಿಂದ ಒಂದೇ ನೆಲೆಯಿಂದ ಇಂದಿನ ಸವಾಲುಗಳನ್ನು ಎದುರಿಸುವ ಆವಶ್ಯಕತೆಯಿದೆ. ಇಂತಹ ಸಂಭಾವನೆಗಳ ಮಾರ್ಗಗಳು ತಮ್ಮೊಳಗಿನ ಆಂತರಿಕ ಆತ್ಮೀಯತೆಯನ್ನು ಕೊಡುಕೊಳ್ಳುವಿಕೆಯ ಮುಖಾಂತರವೇ ತೆರೆದುಕೊಳ್ಳುತ್ತವೆ. ಈ ನೆಲೆಯಲ್ಲಿ ಸೃಜನಾತ್ಮಕ ಸಾಹಿತ್ಯದ ಅದರಲ್ಲೂ ವಿಶೇಷವಾಗಿ ವೈಚಾರಿಕ ಸಾಹಿತ್ಯದ ಆದಾನ ಪ್ರದಾನ ತನ್ನ ಧನಾತ್ಮಕ ಪರಿಣಾಮವನ್ನೊಳಗೊಂಡಿರುವುದಾಗಿ ನಾವು ಕಾಣುತ್ತೇವೆ. ವಿಶೇಷವಾಗಿ ಪ್ರಾದೇಶಿಕ ಭಾಷಾಸಾಹಿತ್ಯದ ರಚನಾತ್ಮಕ ಮಾನದಂಡಗಳನ್ನು ಹಿಂದಿಯಲ್ಲಿ ಪ್ರಸ್ತುತಪಡಿಸುವಿಕೆಯಿಂದ ಇಂತಹ ಸಂಭಾವನೆಗಳ ಫಲಿಸುವಿಕೆಯ ಆಶೆ ಅಧಿಕವಾಗಿವೆ. ಕಾರಣ ಇಂದು ಕನ್ನಡದ ಜೊತೆಗೆ ಎಲ್ಲ ಪ್ರಾಂತೀಯ ಭಾಷಾಸಾಹಿತ್ಯದಲ್ಲಿ ಹುದುಗಿರುವ ಕಲಾತ್ಮಕ ಸಂಭಾವ್ಯತೆ ಹಾಗೂ ವೈಚಾರಿಕ ನಿಲುವನ್ನು ಹಿಂದಿಗೆ ವರ್ಗಾಯಿಸಬಹುದಾಗಿದೆ. ಈ ನಿಟ್ಟಿನಲ್ಲಿ ಹಿಂದಿ ಲೇಖಕಿ ಆದಿವಾಸಿ ಸಮುದಾಯದ ಕಾರ್ಯಕರ್ತೆ ರಮಣಿಕಾ ಗುಪ್ತಾ ಹಾಗೂ ದುಡಿಯುವ ವರ್ಗದ ಬಗೆಗೆ ಅತೀವ ಮಾನವೀಯ ಕಾಳಜಿ ಉಳ್ಳ ಗೌರಿನಾಥರ ಪ್ರಯತ್ನ ಗಮನಾರ್ಹ. ಅವರ ಜನಾಂಗೀಯ ಜೀವನದ ಬಗೆಗಿನ ಸಾಮರಸ್ಯತೆ, ಮಾನವೀಯ ಕಾಳಜಿ, ದೇಸೀ ಮೂಲದ ಸುಧಾರಣಾ ಚಿಂತನೆಗಳು, ವಿಶ್ವಾಸಗಳು ಅತ್ಯಂತ ಸುತ್ತ್ಯವೂ ಹೌದು, ಅನುಕರಣೀಯವೂ ಹೌದು. ಇಂದು ದಲಿತ ಸಾಹಿತ್ಯಕ್ಕೆ, ಸ್ತ್ರೀ ಸಾಹಿತ್ಯಕ್ಕೆ, ಆದಿವಾಸಿ ಜನಾಂಗದ ಸಾಹಿತ್ಯಕ್ಕೆ, ಅಲ್ಪಸಂಖ್ಯಾತರ ಸಾಹಿತ್ಯಕ್ಕೆ, ಕೃಷಿಕ ಹಾಗೂ ದುಡಿಯುವ ಕಾರ್ಮಿಕವರ್ಗದ ಸಾಹಿತ್ಯಕ್ಕೆ, ವರ್ಣ-ವರ್ಗ ಹಾಗೂ ಜಾತಿವಿಹೀನವಾದ ಒಂದು ಮಾನವೀಯ ಮಾನದಂಡಗಳನ್ನೊಳಗೊಂಡ ರಾಷ್ಟ್ರಸ್ತರದ ವೇದಿಕೆ ಒದಗಿಸಿ ಕೊಡುವ ಆವಶ್ಯಕತೆಯಿದೆ.

ಕನ್ನಡ ಕಥೆಗಳನ್ನು ಹಿಂದಿಗೆ ಅನುವಾದಿಸುವ ಪ್ರಕ್ರಿಯೆಗೆ ತನ್ನದೇ ಆದಂತಹ ಒಂದು ವಿಶೇಷವಿದೆ. ಕನ್ನಡ ಪ್ರದೇಶದ ಭೂಭಾಗದ ಭೌಗೋಳಿಕ ಪರಿಸೀಮೆಯು ಬಹು ವೈವಿಧ್ಯಮಯವಾಗಿದೆ. ಅಂದರೆ ಕರ್ನಾಟಕದ್ದೇ ಆದ ಒಂದು ಪ್ರಾದೇಶಿಕ ಪರಿವೇಶದಲ್ಲಿ

ರಚಿತಗೊಂಡ ಕಥೆಯ ಭಾಷೆ ಹಾಗೂ ಅದರ ಸಾಂಸ್ಕೃತಿಕ ನಿಗೂಢತೆಯನ್ನು ತಿಳಿಯಬೇಕಾದರೆ ಕನ್ನಡಿಗನಿಗೆ ಸಹ ಅಲ್ಲಿನ ವಿಶಿಷ್ಟ ಸಾಂಸ್ಕೃತಿಕ ಜೀವನ ಸ್ವರೂಪದ ಪರಿಚಯ ಜ್ಞಾನ ಆವಶ್ಯಕವಾಗುತ್ತವೆ. ಮಲೆನಾಡಿನ ಸಂಸ್ಕೃತಿ ಉತ್ತರ ಕರ್ನಾಟಕ ಸಂಸ್ಕೃತಿಗಿಂತ ತೀರ ಭಿನ್ನ. ಪಶ್ಚಿಮ ಪ್ರದೇಶದ ಜೀವನಶೈಲಿ ಸಮುದ್ರತೀರದ ಜೀವನ ಸಂಸ್ಕೃತಿಗಿಂತ ಬೇರೆಯ ಪರಿಸರವನ್ನು ನಮ್ಮ ಮುಂದೆ ತೆರೆದಿಡುತ್ತದೆ. ಇಂತಹ ಸಂದರ್ಭದಲ್ಲಿ ಈ ಭಿನ್ನ ಭೌಗೋಳಿಕ ಸೀಮಾಪ್ರದೇಶದ ಸಂಸ್ಕೃತಿಯನ್ನು, ಅಲ್ಲಿನ ಭಾಷಾಶೈಲಿಯನ್ನು ಇಂತಹ ವಿಶಿಷ್ಟ ಸಾಂಸ್ಕೃತಿಕ ಮಡಿಲಲ್ಲಿ ಬೆಳೆದ ಕಥಾಸಾಹಿತ್ಯವನ್ನು ಹಿಂದಿಗೆ ಅನುವಾದಿಸುವಾಗ, ಅನುವಾದದ ಪ್ರಕ್ರಿಯೆ ತನ್ನದೇ ಆದಂತಹ ಸವಾಲುಗಳನ್ನು ಅನುವಾದಕನ ಮುಂದೆ ಒಡ್ಡುತ್ತದೆ. ಇದು ಅನುವಾದಕನ ಕಲಾತ್ಮಕತೆಯ ಪರೀಕ್ಷೆ ಕೂಡ ಹೌದು.

ಪಟ್ಟಣ ಹಾಗೂ ಮೆಟ್ರೋ ನಗರಗಳ ಸಂಸ್ಕೃತಿಯನ್ನು ಹಾಗೂ ಅದರ ಪರಿವೇಶವನ್ನು ದರ್ಶಿಸುವ ಸಾಹಿತ್ಯದ ರೂಪ ಹೆಚ್ಚು ಕಡಿಮೆ ಸಮಾನವಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಅನುವಾದಕನು ಕೇವಲ ಭಾಷಿಕ ವಿವಿಧತೆಯನ್ನು ಎದುರಿಸುತ್ತಾನೆ. ಭಾಷೆಗೆ ಪ್ರತಿ ಭಾಷೆಯನ್ನು ಇಡುವಾಗ ಅಂತಹ ವಿಶೇಷ ಶ್ರಮವನ್ನು ಅನುವಾದಕ ಪಡಬೇಕಾಗಿಲ್ಲ. ಏಕೆಂದರೆ ಜಾಗತೀಕರಣದ ಹಾಗೂ ತಂತ್ರಜ್ಞಾನದ ಅತೀವ ಬಳಕೆಯ ಹಾಗೂ ಹರಡುವಿಕೆಯಿಂದ ಸಮರೂಪಿ ಸಂಸ್ಕೃತಿ ಹಾಗೂ ಭಾಷೆಯ ಕರಾಳ ಕೈಗಳು ದೇಶದ ಸಾಂಸ್ಕೃತಿಕ ಹಾಗೂ ಭಾಷಿಕ ವೈವಿಧ್ಯತೆಯ ಕಲಾತ್ಮಕತೆಯನ್ನು, ನಾಜೂಕು ಕಲಾಕುಸುರಿಯನ್ನು ಅಳಿಸಿಹಾಕುತ್ತಿವೆ. ಬೋಳುಬೋಳಾದ ಸಮಸಂಸ್ಕೃತಿ ಒಂದು ಕೃತಕತೆಯನ್ನು ನಮ್ಮ ಮೇಲೆ ಹೇರುತ್ತಿದೆ. ಭಾಷೆ ಹಾಗೂ ಸಂಸ್ಕೃತಿಗಳ ವಿಲೋಮೀಕರಣ ಹೀಗೆಯೇ ಮುಂದುವರೆದರೆ ಭವಿಷ್ಯದಲ್ಲಿ ಅನುವಾದಕನಿಗೆ ಮಾಡಲು ಏನೂ ಕೆಲಸ ಇರುವುದಿಲ್ಲ. ಅನುವಾದದ ಕೆಲಸ ತೀರ ಸರಳವಾಗಬಹುದು. ವೈವಿಧ್ಯತೆಯೇ ಇರುವುದಿಲ್ಲ. ಕಾರಣ ಇಂದು ಅನುವಾದಕನಿಗೆ ಪ್ರಾದೇಶಿಕತೆಯ ಇಂತಹ ನಾಜೂಕು ಸ್ವರೂಪವನ್ನು ಉಳಿಸುವ, ಅದನ್ನು ಜಗತ್ತಿಗೆ ಪರಿಚಯಿಸುವ ಕೆಲಸ ಕೂಡ ಮಾಡಬೇಕಾಗಿದೆ. ರಾಷ್ಟ್ರಸ್ತರದ ಎಲ್ಲ ಅಭಿಯಾನಗಳ, ಆಂದೋಲನಗಳ ಸಾರ್ಥಕತೆಯೂ ಪ್ರಾದೇಶಿಕ ಸ್ತರದ ಅಸ್ಮಿತೆಯನ್ನು ಗುರುತಿಸಿ ಕಾಪಾಡಿಕೊಂಡು ಬರುವುದರಲ್ಲಿಯೇ ಇದೆ.

ಒಂದು ವೇಳೆ ಕಥೆಗಳು ನಗರಜೀವನದ ಪರಿವೇಶವನ್ನು ಹೊಂದಿದ್ದವುಗಳಾಗಿದ್ದರೆ ವಿಶೇಷತೆ ಇಲ್ಲ. ಈ ನಗರಜೀವನದ ಶಿಷ್ಟ ಹಾಗೂ ವಿಶಿಷ್ಟ ಜೀವನಶೈಲಿಯನ್ನು ಅಭಿವ್ಯಕ್ತಿಸುವ ಭಾಷೆಗೆ ಒಂದು ಸಮಾನವಾದ ಲಯ ಹಾಗೂ ಟೋನ ಇರುತ್ತದೆ. ಕನ್ನಡದ ಹಾಗೂ ಹಿಂದಿಯ ಸಂಸ್ಕೃತ ಬಹುಳ ಸ್ವರೂಪ ಅನುವಾದದ ಕ್ರಿಯೆಯಲ್ಲಿ ವರದಹಸ್ತವಾಗಿ ಸಾಬೀತಾಗುತ್ತದೆ. ಪ್ರಾದೇಶಿಕ ಜೀವನಶೈಲಿಯ ಕಥೆಗಳ ಹಿಂದೀ ಅನುವಾದದ ಸಂದರ್ಭದಲ್ಲಿ ಒಂದು ಅನುಕೂಲತೆ ಇದೆ. ಅದೇನೆಂದರೆ ಭಾರತದ ಭೂಭಾಗದ ಹೆಚ್ಚು ಕಡಿಮೆ ಎಲ್ಲ ಪ್ರದೇಶ ಹಾಗೂ ಜನಸಮುದಾಯಗಳಲ್ಲಿ ಅದು ವ್ಯಾಪಕವಾಗಿದೆ. ಕಾರಣ ಕಥೆ ಕಾದಂಬರಿಯಲ್ಲಿನ ಕನ್ನಡದ ಪ್ರಾದೇಶಿಕ ರೂಪ ಬೇರಾವ ಮರಿಮಾಚಿಕೆ ಇರದೇ ಅತ್ಯಂತ ಸರಳವಾಗಿ, ಅದೇ ಜನಪದೀಯ ಪ್ರದೇಶದ ಹಿಂದಿಯ ಟೋನ ಮತ್ತು ಉಚ್ಚಾರಣೆಯ ಜೊತೆಗೆ ಪ್ರಸ್ತುತಪಡಿಸಬಹುದು. ಆದರೆ ಶರ್ತು ಇಷ್ಟೇ : ಅನುವಾದಕ ಆ ಹಿಂದಿಯ ಪ್ರಾದೇಶಿಕ ಭಾಷೆಯ ಲಯ, ಟೋನ ಹಾಗೂ ಪ್ರಾಂತೀಯ ರೂಪದಲ್ಲಿ ಮುಳುಗಿದವನಾಗಿರಬೇಕು. ಅನ್ಯಥಾ ಅನುವಾದಕನ ಆನಂದ ಓದುಗರ ಕಿರಿಕಿರಿಯಲ್ಲಿ ಪರಿಣಮಿಸಲು ತಡವಾಗುವುದಿಲ್ಲ.




ದೇವನೂರು ಮಹಾದೇವ, ಪೂರ್ಣಚಂದ್ರ ತೇಜಸ್ವಿ, ಮ. ನ. ಜವರಯ್ಯ, ಗೀತಾ ನಾಗಭೂಷಣ, ಬಿ. ಟಿ. ಲಲಿತಾ ನಾಯಕ, ಕರೀಗೌಡ ಬೀಚನಹಳ್ಳಿ, ಸಾರಾ ಅಬೂಬಕ್ಕರ್, ವೈದೇಹಿ, ಅರವಿಂದ ಮಾಲಗತ್ತಿ, ಕುಂ. ವೀರಭದ್ರಪ್ಪ ಮತ್ತು ಇನ್ನೂ ಅನೇಕ ಕನ್ನಡ ಕಥಾಲೇಖಕರ ಕೃತಿಗಳು, ಈ ತೆರನೆಯ ವಸ್ತುಸ್ತರದ ಹಾಗೂ ಆವರಣಸ್ತರದ ಪ್ರತಿಬದ್ಧತೆಗಳಿಂದ ಕೂಡಿದವುಗಳಾಗಿವೆ. ಹಾಗೆಯೇ ಅವುಗಳ ಅನುವಾದದ ಕಾರ್ಯ ಒಂದು ವಿಶಿಷ್ಟ ಸೃಜನಾತ್ಮಕ ಆನಂದ ಹಾಗೂ ಸ್ಥಿತಿಯಿಂದ ಅನುವಾದಕನನ್ನು ಸಂತೃಪ್ತಪಡಿಸುತ್ತದೆ. ಜೊತೆಗೆ ಅನುವಾದಕ ಒಂದು ವಿಶಿಷ್ಟ ಜನಪದೀಯ ಜೀವನ ಸಂಸ್ಕೃತಿಯನ್ನು ದೇಶಸ್ತರದಲ್ಲಿ ಪ್ರಸ್ತುತಪಡಿಸುವ, ಸಂಪ್ರೇಶಿಸುವ ಮಾಧ್ಯಮವಾಗುವ, ಸಾಧನವಾಗಿ ನಿಲ್ಲುವ ಅದ್ಭುತ ಅಹಂಕಾರದಿಂದ ಬೀಗುತ್ತಾನೆ.

ಅನುವಾದದ ಈ ವಿಶೇಷ ಸಾಧನೆಗೆ ಇಂದು ಈ ಎಲ್ಲ ನೆಲೆಗಳಿಂದ ಚಾಲನೆ ಕೊಡಬೇಕಾಗಿದೆ. ಅನುವಾದದ ಸಂಭಾವನೆಗಳನ್ನು ಅತ್ಯಂತ ವಿಶಾಲ ಹಾಗೂ ವಿಸ್ತೃತ ಭಾವಭೂಮಿಯಲ್ಲಿ ಪ್ರಸ್ತುತಪಡಿಸಬೇಕಾದ ಆವಶ್ಯಕತೆ ಇದೆ. ದೇಶದ ದೇಸೀಯ ಹಾಗೂ ಪ್ರಾದೇಶಿಕ ಸಂಸ್ಕೃತಿಗಳ ಕೊಂಡಿಗಳನ್ನು ರಾಷ್ಟ್ರಬಾಂಧವ್ಯದ ನೆಲೆಯಿಂದ ಬೆಸೆಯಬೇಕಾಗಿದೆ.

ಡಾ॥ ಪರಿಮಳಾ ಅಂಬೇಕರ
ಉಪನ್ಯಾಸಕಿ, ಹಿಂದೀ ಅಧ್ಯಯನ ವಿಭಾಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

---

*೩೩ನೇ ಪುಟದಿಂದ (ಯುರೇನಸ್‌ನ ಕಣ್ಣುಮುಚ್ಚಾಲೆ ಆಟ)*

ಎಂದು ತಿಳಿದುಕೊಳ್ಳುವ ಕುತೂಹಲ ಅನೇಕರಿಗಿದೆ. ಸಿರಿಸ್ ಎಂಬುದು ಮಾತ್ರ ದುರ್ಬೀನು, ಪುಟ್ಟ ದೂರದರ್ಶಕಗಳ ವ್ಯಾಪ್ತಿಯಲ್ಲಿದೆ. ಇನ್ನೆರಡು (ಪ್ಲೂಟೋ ಮತ್ತು ಈರಿಸ್) ದೊಡ್ಡ ದೊಡ್ಡ ದೂರದರ್ಶಕಗಳಿಗೂ ಸಿಗುವುದಿಲ್ಲ. ಇದು ಕುಂಭರಾಶಿಯ ಅಂಚಿನಲ್ಲಿದೆ. ದಕ್ಷಿಣ ಮೀನ ಪುಂಜಕ್ಕೆ ಚಲಿಸುತ್ತಿದೆ. ಹುಡುಕುವುದು ಕಷ್ಟವೇ.

ಕಳೆದ ತಿಂಗಳು ಅಕಸ್ಮಾತ್ತಾಗಿ ಎರಡು ಧೂಮಕೇತುಗಳು ಪ್ರಕಾಶಮಾನವಾಗಿ ಕಂಡವು. ಶನಿಗ್ರಹದ ಪಕ್ಕದಲ್ಲಿ ಕಂಡ ಚುಕ್ಕೆಯನ್ನು ಧೂಮಕೇತು ಎಂದು ಗುರುತಿಸಿದವರು ಡೇವಿಡ್ ಲೆವಿ. ಅದಲ್ಲದೆ ಸೋಹೋ ಎಂಬ ಸೌರವೀಕ್ಷಣಾಲಯ (ಬಾಹ್ಯಾಕಾಶದಲ್ಲಿರುವುದು) ಕಳಿಸಿದ ಚಿತ್ರಗಳಲ್ಲಿ ಮೂಡಿದ್ದ ಚುಕ್ಕೆಯನ್ನು ಧೂಮಕೇತು ಎಂದು ಗುರುತಿಸಿದ್ದು ಇನ್ನೊಂದು ವಿಶೇಷ. ಈ ಎರಡೂ ಬರಿಗಣ್ಣಿಗೆ ಕಾಣಲಿಲ್ಲವಾದರೂ ಹವ್ಯಾಸೀ ವೀಕ್ಷಕರ ತೃಷೆಯನ್ನು ನೀಗಿಸಿದವು.

### ಖಗೋಳ ದಿನಚರಿ

೧ ಯುರೇನಸ್ - ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
೩ ಚಂದ್ರ-ಭೂಮಿ ದೂರ ಕನಿಷ್ಠ
೫ ಹುಣ್ಣಿಮೆ ೧೮:೨೮ಕ್ಕೆ
೬ ಕೃತ್ತಿಕಾ – ಆಚ್ಛಾದನೆ * (ಸುಮಾರು ೭:೩೦ರಿಂದ ೯:೩೦ರವರೆಗೆ)
೭ ಬುಧ-ಶುಕ್ರ ಜೋಡಿ
೮ ಬುಧಗ್ರಹದ ಸಂಕ್ರಮ (ಭಾರತಕ್ಕೆ ಕಾಣುವುದಿಲ್ಲ)
೧೧ ಬುಧ-ಮಂಗಳ ಜೋಡಿ
೧೨ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೧೩ ಶನಿ-ಚಂದ್ರ ಜೋಡಿ *
೧೫ ಶುಕ್ರ-ಗುರು ಜೋಡಿ* ಭೂಮಿ-ಚಂದ್ರ ಗರಿಷ್ಠ ದೂರದಲ್ಲಿ
೧೭ ಬುಧಗ್ರಹದ ಹಿನ್ನಡೆ ಮುಕ್ತಾಯ
೧೮ ಲಿಯೋನಿಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ* ಚಂದ್ರ-ಚಿತ್ತಾ ಜೋಡಿ *
೧೯ ಚಂದ್ರ-ಬುಧ ಜೋಡಿ*
೨೦ ಮಂಗಳ-ಚಂದ್ರ ಜೋಡಿ
೨೧ ಅಮಾವಾಸ್ಯೆ ೦೩:೪೮ಕ್ಕೆ ಗುರು, ಶುಕ್ರ, ಚಂದ್ರ, ಸೂರ್ಯ ೫ ಡಿಗ್ರಿ ಅಂತರದಲ್ಲಿ. ಗುರುಗ್ರಹದ ಯುತಿ
೨೫ ಬುಧಗ್ರಹದ ಗರಿಷ್ಠ ಕೋನೋನ್ನತಿ * (೨೦ ಡಿಗ್ರಿ)
೨೮ ಚಾಂದ್ರಮಾಸದ ಪ್ರಥಮಪಾದ (ಚಂದ್ರಾಸ್ತ ನಡುರಾತ್ರಿಗೆ) ಯುರೇನಸ್ ಗ್ರಹದ ಆಚ್ಛಾದನೆ* ೨೧:೨೮ರಿಂದ ೨೨:೨೧ರವರೆಗೆ
ಡಿಸೆಂಬರ್ ೨ ಚಂದ್ರ-ಭೂಮಿ ದೂರ ಕನಿಷ್ಠ
೫ ಹುಣ್ಣಿಮೆ ೫:೫೫ಕ್ಕೆ
೬ ಶನಿಗ್ರಹದ ಹಿನ್ನಡೆ ಆರಂಭ

* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ

ಡಾ॥ ಬಿ. ಎಸ್. ಶೈಲಜಾ

# ಸುಲಿದ ಬಾಳೆಯ ಹಣ್ಣಿನಂದದಿ

■ ವಿಜಯಾ ಶ್ರೀಧರ್



ಬಂಗಾರ ಬಣ್ಣದ ಸಿಪ್ಪೆಯನ್ನು ಸುಲಿದು ಬಿಳಿಯ ಬಣ್ಣದ ಬಾಳೆ ಹಣ್ಣನ್ನು ಲೀಲಾಜಾಲವಾಗಿ 'ಗುಳುಂ' ಮಾಡುವಾಗಲೆಲ್ಲ ''ಸುಲಿದ ಬಾಳೆಯ ಹಣ್ಣಿನಂದದಿ'' ಎಂದು ನಮ್ಮ ಕನ್ನಡ ಪಂಡಿತರು ೪೦ ವರ್ಷಗಳ ಹಿಂದೆ ಹಾಡುತ್ತಿದ್ದುದು ನೆನಪಿಗೆ ಬರುತ್ತದೆ. ಪಾಪ ! ಕನ್ನಡ ಪಂಡಿತರು ಆ ಹಾಡು ಹೇಳುತ್ತಿದ್ದುದು ಕನ್ನಡದ ಬಗ್ಗೆ– ಕನ್ನಡ ಕಾವ್ಯ-ಕಥೆ-ಕಾದಂಬರಿಗಳ ಬಗ್ಗೆ. ಆದರೆ ಈಗ ಕನ್ನಡದ ಸ್ಥಿತಿ-ಗತಿಯ ಬಗ್ಗೆ ಆಗುತ್ತಿರುವ ವಾದ-ವಿವಾದ ನೋಡಿದರೆ ಯಾಕೋ ನಾವು ಓದಿದ ಬಾಲ್ಯದ ಶಾಲಾ-ಹೈಸ್ಕೂಲ್‌ಗಳ ದಿನಗಳು ನೆನಪಾಗುತ್ತಿವೆ.

ನಾವು ಓದಿದ್ದು ನಾಲ್ಕು ದಶಕಗಳ ಹಿಂದೆ. ಮಲೆನಾಡಿನ ಶಿರಸಿಯಲ್ಲಿ. ಅಲ್ಲಿ ಆಗ, ಇಂಗ್ಲಿಷ್ ಮಾಧ್ಯಮವೇನು ಅಂದರೆ ಯಾರಿಗೂ ಗೊತ್ತಿರಲಿಲ್ಲ. ೭ನೇ ತರಗತಿಯವರೆಗೆ ಕನ್ನಡ ಶಾಲೆ, ೪ ವರ್ಷಗಳ ಹೈಸ್ಕೂಲ್ ಅಂದರೆ ಇಂಗ್ಲಿಷ್ ಶಾಲೆ. ನನಗಿಂತ ೫ ವರ್ಷ ಮುಂದಿದ್ದ ಅಣ್ಣ ಓದುವಾಗ ಮೆಟ್ರಿಕ್ ಪರೀಕ್ಷೆ, ಅವನಿಗಿಂತ ಎರಡು ವರ್ಷ ಕಿರಿಯಳಾದ ಅಕ್ಕ ಓದುವಾಗ ಅದು ಎಸ್.ಎಸ್.ಸಿ. ಆಯ್ತು. ಅವಳಿಗಿಂತ ಮೂರು ವರ್ಷಗಳ ನಂತರ ಆ ಪರೀಕ್ಷೆ ನಾನು ಮಾಡುವಾಗ ಎಸ್.ಎಸ್.ಎಲ್.ಸಿ. ಆಯ್ತು. ನನ್ನ ನಂತರ ಒಂದೇ ವರ್ಷದ ನಂತರ ತಮ್ಮನೂ ಎಸ್.ಎಸ್.ಎಲ್.ಸಿ. ಪರೀಕ್ಷೆ ಮಾಡಿದ. ಆದರೆ ಅದರ ಮರುವರ್ಷದಿಂದ ಹೈಸ್ಕೂಲ್ ೩ ವರ್ಷವಾಯ್ತು. ಕೆಲ ವರ್ಷ ಪಿ.ಯು.ಸಿ. ಒಂದು ವರ್ಷ. ಡಿಗ್ರಿಗೆ ಮತ್ತೆ ಮೂರು ವರ್ಷ ಇತ್ತು. ಹಲವರಿಗೆ ಒಂದು ವರ್ಷ ವ್ಯಾಸಂಗದ ಅವಧಿ ಕಡಿಮೆಯಾಗಿ ಪದವೀಧರರಾದರು. ನಂತರ ೨ ವರ್ಷದ ಪಿ.ಯು.ಸಿ. ಬಂತು ! ಕಳೆದ ಅರ್ಧ ಶತಮಾನದಲ್ಲಿ ನಮ್ಮ ಶಿಕ್ಷಣ ಕ್ಷೇತ್ರದಲ್ಲಿ ಆಗುತ್ತಿರುವ ಬದಲಾವಣೆಯ ಬಗ್ಗೆ ತಿಳಿಸಲು ಇದನ್ನು ಬರೆಯುತ್ತಿದ್ದೇನೆ.

ಇದು ವರ್ಷಗಳ ಬದಲಾವಣೆಯಾದರೆ, ಇನ್ನು ನಾವು ಓದುವಾಗ ನರ್ಸರಿಗಳಿರಲಿಲ್ಲ. ಆದರೆ ಬಾಲವಾಡಿಗಳು ಪ್ರಾರಂಭವಾಗಿದ್ದವು. ಅದಕ್ಕೂ ಮೊದಲು ಅಕ್ಕ - ಅಣ್ಣ ಓದುತ್ತಿದ್ದ ಹಳ್ಳಿಯ ಒಂದೇ ಮಾಸ್ತರರ (ವಂದೇ ಮಾತರಂ ಅಲ್ಲ!) ಶಾಲೆಯಲ್ಲಿ 'ಬಿನ್ನತ್ತೆ' ಅಂತ ಇತ್ತು!!

ನಾವು ೫ನೇ ತರಗತಿಗೆ ಬಂದಾಗ A.B.C.D.... ಕಲಿತದ್ದು ಸಂಡೇ, ಮಂಡೇ (ಆದರೆ ಸ್ಪೆಲಿಂಗ್ ನೋಡಿ ಮುಂಡೆ ಅಂತ ಹೇಳಿ ನಕ್ಕಿದ್ದು, ಬೈಸಿಕೊಂಡಿದ್ದು...!)... ಕಲಿತದ್ದು ಆಗಲೇ ! ಹೈಸ್ಕೂಲಿಗೆ ಬಂದಾಗ ಇಂಗ್ಲಿಷ್ ವ್ಯಾಕರಣ ನಮ್ಮ ತಲೆ ತಿನ್ನತೊಡಗಿತು. 'ರೆನ್ ಮಾರ್ಟಿನ್' ಇಟ್ಟುಕೊಂಡು ಕಲಿತದ್ದೇ ಕಲಿತದ್ದು. ''To be'' ನಡೆಸುವುದು ದೊಡ್ಡ ಕಗ್ಗಂಟಾಗಿತ್ತು. ಹಾಗೂ-ಹೀಗೂ ಉಳಿದ ವಿಷಯಗಳಲ್ಲಿ ೮೦ರ ಮೇಲೆ ಗಳಿಸುತ್ತ, ಇಂಗ್ಲಿಷ್‌ನಲ್ಲಿ ೫೦-೫೫ ಪಡೆಯುತ್ತ ಎಸ್.ಎಸ್.ಎಲ್.ಸಿ. ಮುಗಿಸಿದ್ದೆವು.

ಕಾಲೇಜಿಗೆ ಬಂದಾಗ ಇಂಗ್ಲಿಷ್ ಮಾಧ್ಯಮದ ಭೂತ ! ಆದರೆ ನಾವೆಲ್ಲರೂ ಕನ್ನಡ ಮಾಧ್ಯಮದಿಂದ ಬಂದವರೇ ! ಹಾಗಾಗಿ ಕೀಳರಿಮೆ ಇರಲಿಲ್ಲ. ಅಧ್ಯಾಪಕರು ಏನೋ ಕೇಳಿದರೆ, ನಾವು ಏನೋ ಉತ್ತರ ಕೊಡುತ್ತ ಮುಂದೆಸಾಗಿದೆವು. ನಿಧಾನವಾಗಿ ಇಂಗ್ಲಿಷ್ ಜ್ಞಾನಾರ್ಜನೆಗೆ ಒಂದು ಸಾಧನ ಮಾತ್ರ ಎಂದು ಅರಿವಾಗಿತ್ತು. ನಮ್ಮೆಲ್ಲರ ವಿದ್ಯಾಭ್ಯಾಸಕ್ಕಾಗಲಿ, ಜೀವನದಲ್ಲಾಗಲಿ ಇಂಗ್ಲಿಷ್ ತೊಂದರೆ ಕೊಡಲಿಲ್ಲ. ಆದರೆ ಮಾತೃಭಾಷೆಯಲ್ಲಿ, ಅಂದರೆ ಕನ್ನಡದ ಬಗ್ಗೆ ನಮಗಿದ್ದ ಪ್ರೀತಿಯನ್ನು ಅಂದಿನ ಕನ್ನಡ ಪಾಠಗಳು, ಅದನ್ನು ಕಲಿಸಿದ ಗುರುಗಳು ಹೇಗೆ ಪೋಷಿಸಿ ಬೆಳೆಸಿದರು ಅನ್ನುವುದನ್ನು ಈಗ ನೆನೆಸಿಕೊಳ್ಳುವುದೇ ಸೊಗಸು.

ಮೇ ಕಳೆಯುತ್ತಿದ್ದಂತೆ ಹೊಸ ಕನ್ನಡ ಪುಸ್ತಕ ಓದುವ ತವಕ. ಜನ್ಮಜಾತವಾಗಿಯೇ ಈ ಕನ್ನಡ ಭಾಷೆ, ಉಳಿದ ವಿಷಯಗಳಿಗಿಂತ ನಮಗೆ ಸುಲಿದ ಬಾಳೆಯ ಹಣ್ಣಿನಂದದಿ ಪ್ರಿಯ – ಸುಲಭವಾಗಿತ್ತು. ಬಾಲ್ಯ ಸಹಜವಾದ ಬುದ್ಧಿಯಿಂದ ಪುಸ್ತಕ ಬದಲಾದರೆ ಮಕ್ಕಳಿಗೆ ಖುಷಿ, ತಂದೆ-ತಾಯಿಗೆ ಬಿಸಿ ! ನಮಗೆ ಹೊಸ ಪುಸ್ತಕ ಸಿಗುವ ಸಂಭ್ರಮ. ಹಳೇ ಪುಸ್ತಕವಾದರೆ ಅರ್ಧ ಬೆಲೆಗೆ ಸಿಗುತ್ತಿತ್ತು ಅಂತ ಬಡ ತಂದೆ-ತಾಯಿಗೆ ಕಳವಳ. ಯಾವುದೋ ಒಂದು ಪುಸ್ತಕ ಸಿಕ್ಕ ಕೂಡಲೇ ಅದನ್ನು ಓದುವ ಹಂಬಲ. ಅದಕ್ಕೆ ಸರಿಯಾದ ಬೈಂಡ್ ಹಾಕಿ, ಹೆಸರು ಬರೆದು ನಂತರವೇ ಓದಬೇಕೆಂದು ಅಪ್ಪನ ಕಟ್ಟಪ್ಪಣೆ ! ನಮ್ಮನ್ನು ಮೊದಲಿಗೆ ಆಕರ್ಷಿಸುತ್ತಿದ್ದುದೇ ಕನ್ನಡ ಪುಸ್ತಕಗಳು !

ಸುಮಾರು ೫ನೇ ತರಗತಿಯಿಂದ ಎಸ್.ಎಸ್.ಎಲ್.ಸಿ. ಮುಗಿಯುವವರೆಗೆ ೭ ವರ್ಷಗಳ ಕಾಲ ನಾವು ಓದಿದ, ವ್ಯಾಸಂಗ ಮಾಡಿದ ಈ ಕನ್ನಡ ಪುಸ್ತಕಗಳು ನಮ್ಮ ಮೇಲೆ ಅಚ್ಚಳಿಯದ ಪ್ರಭಾವ ಬೀರಿದವು. ನನ್ನ ಜೊತೆಗೆ ಓದಿದವರು ಹಲವರು ವೈದ್ಯರು, ಇಂಜಿನಿಯರ್, ಶಿಕ್ಷಕರು, ಇನ್ನೂ ಏನೇನೋ ಆಗಿದ್ದಾರೆ. ಆದರೆ ನಮ್ಮೆಲ್ಲರ ಮೇಲೆ ಈ ಕನ್ನಡ ಪಾಠಗಳು ಮಾಡಿದ ಪ್ರಭಾವ, ನೀಡಿದ ಸಂತೋಷ ಶಬ್ದಗಳಿಗೆ ನಿಲುಕಲಾರದ್ದು.

ಮೇ ತಿಂಗಳ ರಜೆಯಲ್ಲಿಯೇ ಪುಸ್ತಕ ತೆರೆದರೆ ಮಧ್ಯದ ಒಂದು ಪಾಠದಲ್ಲಿ ಬಣ್ಣದ ಸುಂದರ ಚಿತ್ರ. ಪಾಠಕ್ಕೆ ಸಂಬಂಧಿಸಿದ ವರ್ಣಮಯ ಚಿತ್ರ. ೬, ೭ನೇ ತರಗತಿಗೆ ೨, ೩ ಆ ಥರದ ಪುಟದ ತುಂಬ ಇರುವ ಬಣ್ಣದ ಚಿತ್ರಗಳಿರುತ್ತಿದ್ದವು. ಅವು ಇಡೀ ಪಾಠದ ಸಾರಾಂಶವನ್ನು ಎಷ್ಟು ಚೆನ್ನಾಗಿ ಹಿಡಿದಿಡುತ್ತಿದ್ದವು ಎಂದು ಚಿತ್ರ ನೋಡಿದರೇ ಇಡೀ ಪಾಠ ನೆನಪಾಗುತ್ತಿತ್ತು.

ಒಂದು ಪಾಠ, ಸರ್ವದಮನ. ಅದು ಕಾಳಿದಾಸನ ಶಾಕುಂತಲೆಯನ್ನು ಕನ್ನಡಕ್ಕೆ ಭಾಷಾಂತರಿಸಿದ್ದು ಬಸಪ್ಪ ಶಾಸ್ತ್ರಿಗಳು. ಅದರ ಒಂದು ಮಹತ್ವದ ಭಾಗ, ಸರ್ವದಮನ. ಸರ್ವದಮನ ನಂದನವನದಲ್ಲಿ ಬೆಳೆಯುತ್ತಿದ್ದಾನೆ. ತುಂಬಾ ತುಂಟ, ಧೈರ್ಯಶಾಲಿ. ಅವನಿಗೆ ಅಪಾಯವಾಗಬಾರದೆಂದು ಕಣ್ವರು 'ಅಪರಾಜಿತ' ಎಂಬ ಮೂಲಿಕೆಯ ರಕ್ಷಾಬಂಧನವನ್ನು

ಕಾಲೇಜಿಗೆ ಬಂದಾಗ ಇಂಗ್ಲಿಷ್ ಮಾಧ್ಯಮದ ಭೂತ ! ಆದರೆ ನಾವೆಲ್ಲರೂ ಕನ್ನಡ ಮಾಧ್ಯಮದಿಂದ ಬಂದವರೇ ! ಹಾಗಾಗಿ ಕೀಳರಿಮೆ ಇರಲಿಲ್ಲ. ಅಧ್ಯಾಪಕರು ಏನೋ ಕೇಳಿದರೆ, ನಾವು ಏನೋ ಉತ್ತರ ಕೊಡುತ್ತ ಮುಂದೆಸಾಗಿದೆವು. ನಿಧಾನವಾಗಿ ಇಂಗ್ಲಿಷ್ ಜ್ಞಾನಾರ್ಜನೆಗೆ ಒಂದು ಸಾಧನ ಮಾತ್ರ ಎಂದು ಅರಿವಾಗಿತ್ತು. ನಮ್ಮೆಲ್ಲರ ವಿದ್ಯಾಭ್ಯಾಸಕ್ಕಾಗಲಿ, ಜೀವನದಲ್ಲಾಗಲಿ ಇಂಗ್ಲಿಷ್ ತೊಂದರೆ ಕೊಡಲಿಲ್ಲ. ಆದರೆ ಮಾತೃಭಾಷೆಯಲ್ಲಿ, ಅಂದರೆ ಕನ್ನಡದ ಬಗ್ಗೆ ನಮಗಿದ್ದ ಪ್ರೀತಿಯನ್ನು ಅಂದಿನ ಕನ್ನಡ ಪಾಠಗಳು, ಅದನ್ನು ಕಲಿಸಿದ ಗುರುಗಳು ಹೇಗೆ ಪೋಷಿಸಿ ಬೆಳೆಸಿದರು ಅನ್ನುವುದನ್ನು ಈಗ ನೆನೆಸಿಕೊಳ್ಳುವುದೇ ಸೊಗಸು.

ಕಟ್ಟಿರುತ್ತಾರೆ. ಅದನ್ನು ಸರ್ವದಮನನ ತಂದೆ-ತಾಯಿಯಲ್ಲದೆ ಬೇರೆ ಯಾರಾದರೂ ಮುಟ್ಟಿದರೆ ಹಾವಾಗಿ ಕಚ್ಚುತ್ತದೆ. ಈ ಪಾಠದ ಮಧ್ಯಭಾಗದ ಹಾಳೆಯಲ್ಲಿ ಬಣ್ಣದ ಚಿತ್ರ, ಸುಂದರ - ಪುಟ್ಟ ಬಾಲಕ ಸಿಂಹದ ಮರಿಯ ಬಾಯಿಯನ್ನು ಅಗಲಿಸಿ ಹಲ್ಲನ್ನು ಎಣಿಸುತ್ತಿದ್ದಾನೆ. ಮೂಕವಿಸ್ಮಿತನಾದ ರಾಜಾ ದುಷ್ಯಂತ ಅದನ್ನು ನೋಡುತ್ತಿದ್ದಾನೆ. ಇಬ್ಬರು ಸಖಿಯರು ಸರ್ವದಮನನ ತುಂಟಾಟವನ್ನು ತಡೆಯಲು ಹರಸಾಹಸ ಮಾಡುತ್ತಿದ್ದಾರೆ. ಪಾಠದಲ್ಲಿ ಕೊನೆಗೆ ಶಕುಂತಲೆ-ದುಷ್ಯಂತರ ಸಮಾಗಮ – ಸರ್ವದಮನ ಮುಂದೆ 'ಭರತ' ಎಂಬ ಕೀರ್ತಿಗೆ ಪಾತ್ರನಾಗುವ ಭವಿಷ್ಯ ನುಡಿಯೊಂದಿಗೆ ಮುಕ್ತಾಯವಾಗುತ್ತದೆ.

ಪುಣ್ಯಕೋಟಿಯ ಹಾಡನ್ನು (ಗೋವಿನ ಹಾಡು – ಅಜ್ಞಾತ ಕವಿ) ಪಂಡಿತರು ರಾಗವಾಗಿ ಹಾಡುತ್ತಿದ್ದರೆ ಕಣ್ಣೀರು ತನ್ನಿಂದ ತಾನೇ ಸುರಿಯುತ್ತಿತ್ತು. ಅದೊಂದು ಕಥೆ ಅಂತ ಅನಿಸುತ್ತಲೇ ಇರಲಿಲ್ಲ. ನಿಜವಾಗಿ ನಡೆದದ್ದೇ ಅಂತ ಭಾವಿಸಿದ್ದೆವು. ಸಾಧಾರಣವಾಗಿ ಆಗ ಎಲ್ಲರ ಮನೆಯಲ್ಲಿ ಕೊಟ್ಟಿಗೆ-ಆಕಳು-ಕರುಗಳು ಇದ್ದುವಲ್ಲ! ಶಿರಸಿಯ ಸುತ್ತಲೂ ಕಾಡೂ ಇತ್ತು. ಅಲ್ಲಿ ಹುಲಿ-ಚಿರತೆ-ಕಿರುಬ ಇವೆ ಎಂದು ಎಲ್ಲರೂ ಹೆದರುತ್ತಿದ್ದರು. ಹಳ್ಳಿಗಳಲ್ಲಂತೂ ಹಲವು ಬಾರಿ ಕಾಡಿಗೆ ಮೇಯಲು ಹೋದ ಆಕಳು ತಿರುಗಿ ಬಾರದಿದ್ದಾಗ ಕಿರುಬ ಹಿಡಿದಿರಬೇಕು ಅಂತ ಆಳುಗಳು ಮಾತನಾಡುತ್ತಿದ್ದರು. ಇವೆಲ್ಲದರಿಂದ ಪ್ರಭಾವಿತವಾದ ಮುಗ್ಧ ಮನಸ್ಸುಗಳಿಗೆ ಪುಣ್ಯಕೋಟಿಯ ಕತೆ ಸತ್ಯವೇ ಆಗಿತ್ತು.

ಇನ್ನೊಂದು ಪಾಠ, ಮಹಾಭಾರತದಲ್ಲಿ ಬರುವ ಒಂದು ಕಥೆ. ಪಾಂಡವರ ಗರ್ವಭಂಗ ಮಾಡಲು ಮಾಯಾವಿ ಕೃಷ್ಣ ಮಾಡಿದ ತಂತ್ರದ ಕಥೆ. ಅಶ್ವಮೇಧ ಯಾಗ ಮಾಡಿದ ಪಾಂಡವರು ಸೊಕ್ಕಿನಿಂದ ಬೀಗುತ್ತಿದ್ದಾಗ ಅರ್ಧ ಚಿನ್ನದ ಬಣ್ಣದ ಮುಂಗುಸಿಯೊಂದು, ಯಾಗದ ಬೂದಿಯಲ್ಲಿ ಹೊರಳಾಡುತ್ತ, ಪಾಂಡವರಿಗೆ ಬುದ್ಧಿ ಕಲಿಸಿತು. ತಮಗಿಂತ ಪುಣ್ಯಶಾಲಿಗಳು ಬೇಕಾದಷ್ಟು ಜನರಿದ್ದಾರೆ ಎಂಬ ಸತ್ಯ ಅರಿವಾದ ಪ್ರಸಂಗ. ಅದಕ್ಕೂ ಒಂದು ಸುಂದರ ಚಿತ್ರವಿರುತ್ತಿತ್ತು.

ಪುಸ್ತಕದ ಮಧ್ಯೆ ಮಧ್ಯೆ ಕೆಲವು ಹಾಡುಗಳಿರುತ್ತಿದ್ದವು. ಆದರೆ ದೊಡ್ಡ ತರಗತಿಗೆ ಬಂದ ಮೇಲೆ ಮೊದಲಿಗೆ ಗದ್ಯಭಾಗ – ಕೊನೆಗೆ ಪದ್ಯಭಾಗ ಇರುತ್ತಿತ್ತು. ಆ ಪದ್ಯಗಳಾದರೂ ಎಷ್ಟು ಸುಂದರ! ಒಂದು ಜನಪದ ಹಾಡು, ''ಅಲಕ್ಕೆ ಹೂವಿಲ್ಲ, ಸಾಲಕ್ಕೆ ಕೊನೆಯಿಲ್ಲ ತಾಯಿಯ ಮನೆಯು ಸ್ಥಿರವಲ್ಲ'' ಎನ್ನುವ ಪದ್ಯ. ನಮ್ಮ ತರಗತಿಯ ಸುಶೀಲಾ ಅದನ್ನು ಭಾವಪೂರ್ಣವಾಗಿ ಹಾಡಿದರೆ ಇಡೀ ತರಗತಿಗೆ ಅದರರ್ಥ – ಭಾವ ಸ್ಫುಟವಾಗುತ್ತಿತ್ತು.

ಪರೀಕ್ಷೆ ಹತ್ತಿರ ಬಂತು ಅಂದರೆ ಪಂಡಿತರು ಕಲಿಸುತ್ತಿದ್ದ ಕವನ

*ಶಕ್ತಿಯ ಕೊಡು*
*ಶಕ್ತಿಯ ಕೊಡು*
*ಶಕ್ತಿಯ ಕೊಡು ಹೇ ಪ್ರಭು !*
*ಸತ್ಯಕ್ಕಾಗಿ ನಿಲುವ ಛಲವ*
*ದೀಪ್ತಗೊಳಿಸು ನನ್ನೊಳು*

ಕವನ ಯಾರು ಬರೆದಿದ್ದು ಅಂತ ಮರತೇಹೋಗಿದೆ. ಆದರೆ ಕವನವು ಈಗಲೂ ನೆನಪಿನಲ್ಲಿ ಉಳಿದಿದೆ.

ಶಿವರಾಮ ಕಾರಂತರ ಪ್ರಬಂಧವೊಂದರಲ್ಲಿ ಬಡ ಶಾಲಾ ಮಾಸ್ತರರೊಬ್ಬರು ಕಳಲೆಗೆ ಆಸೆ ಪಡುವ ಪರಿಪಾಠ ಎಷ್ಟು ನಗು ಉಕ್ಕಿಸುತ್ತಿತ್ತು! ಕೆಲವೊಂದು ಸುಂದರ ಪ್ರಬಂಧಗಳನ್ನು ಬರೆದವರ ಬಗ್ಗೆ ಮರೆತುಹೋಗಿದ್ದರೂ, ಆ ಪ್ರಬಂಧಗಳು ನೀಡಿದ ಸಂತೋಷ ಈಗಲೂ ಮಧುರ ನೆನಪಾಗಿ ಉಳಿದುಕೊಂಡಿವೆ. 'ಬಿಸಿಲಲ್ಲಿ ಬೆಳದಿಂಗಳ ನೆನಪು' ಅಂತ ಒಂದು ಲಲಿತ ಪ್ರಬಂಧ. ಅದೇ ರೀತಿ ಕೆ. ವಿ. ಅಯ್ಯರ್ ಬರೆದ ಶಾಂತಲಾ ಕಾದಂಬರಿಯ ಒಂದು ಭಾಗ. ಕುವರ ವಿಷ್ಣು ಶಾಂತಲೆಯ ಬಳಿ ಬಂದು, ''ಕನಸೆಂದನೆನೆ, ಕನಸಲ್ಲ ಅಕ್ಕ...'' ಎಂದು ವರ್ಣಿಸುವ ಭಾಗ. ಅದನ್ನು ಓದಿ ಮನಸ್ಸು ಎಷ್ಟು ಹುಚ್ಚಾಗಿತ್ತೆಂದರೆ, ಎಂದು ಬೇಲೂರು ಹಳೇಬೀಡು ನೋಡುತ್ತೇನೆ ಎಂದು ಸದಾ ಹಂಬಲಿಸುವಷ್ಟು! ಆ ಪಾಠ ಓದಿದ ೨೦ ವರ್ಷಗಳ ನಂತರ ಬೇಲೂರು-ಹಳೇಬೀಡು ನೋಡಿದಾಗ, ನಿಜವಾಗಿ ಹೇಳಬೇಕೆಂದರೆ ನಿರಾಶೆಯಾಯ್ತು! ಕಾರಣ ಬಾಲ್ಯದ ನನ್ನ ಮನಸ್ಸು ಆ ಪಾಠ ಓದಿದಾಗ ಕಲ್ಪಿಸಿಕೊಂಡ ದೇವಾಲಯಗಳು ಅವಾಗಿರಲಿಲ್ಲ. ಇತ್ತೀಚೆಗೆ ಮತ್ತೆ 'ಶಾಂತಲಾ' ಕೃತಿಯನ್ನು ಸಂಪೂರ್ಣವಾಗಿ ಓದಿ, ಮತ್ತೆ ಬೇಲೂರು-ಹಳೇಬೀಡಿಗೆ ಹೋದಾಗ ಅದರ ನೈಜ ಸೌಂದರ್ಯ ಅರಿಯುವ ಶಕ್ತಿ ಬಂದಿತ್ತು.

ಬಾಣಭಟ್ಟನ ಕಾದಂಬರಿಯ ಒಂದು ಭಾಗ ನಮಗೆ ಪಠ್ಯವಾಗಿತ್ತು. ಶೂದ್ರಕನ ಆಸ್ಥಾನಕ್ಕೆ ಚಂಡಾಳ ಕನ್ನೆ ಮುದ್ದು ಗಿಳಿಮರಿಯನ್ನು ತರುವ ಸನ್ನಿವೇಶ ಪಾಠದ ಕೊನೆಗೆ ಆ ಗಿಳಿಮರಿ ರಾಜನಿಗೆ ತನ್ನ ಕಥೆ ಹೇಳಲು ಪ್ರಾರಂಭ ಮಾಡುವುದರೊಂದಿಗೆ ಮುಗಿಯುತ್ತಿತ್ತು. ನಮಗೆಲ್ಲ ನಿರಾಶೆ! ಆ ವರ್ಷ ಬೇಸಿಗೆ ರಜೆಯಲ್ಲಿ 'ಕಾದಂಬರಿ'ಯನ್ನು ಗ್ರಂಥಾಲಯದಲ್ಲಿ ಹುಡುಕಿ ಪೂರ್ತಿ ಓದಿದಾಗಲೇ ತೃಪ್ತಿಯಾಗಿತ್ತು.

ಈಗಲೂ ಮಳೆಗಾಲ ಬಂತು ಅಂದರೆ ನನ್ನ ಮನಸ್ಸು ಹಾಡುತ್ತದೆ.

''ಕಾರ್ಗಾಲ ಬಂತು ಕಾಶ್ಮೀರ ಶ್ರೀಗೆ
ಶ್ರೀಗಂಧ ಸ್ನಾನವಾಗಿ...'' ಎನ್ನುವ ಸಿದ್ಧಯ್ಯ ಪುರಾಣಿಕರ ಕವನವನ್ನು!

'ಬಾರೆಲೆ ಹಕ್ಕಿ', 'ಹಾವೊಳು ಹೂವೆ', 'ಡೊಂಕು ಬಾಲದ ನಾಯಕರೆ' ಮುಂತಾದ ಪದ್ಯಗಳನ್ನು ಎಂದಾದರೂ ಮರೆಯಬಹುದೇ ?

ಕಾಲೇಜಿನಲ್ಲಿ ವಿಜ್ಞಾನ ಓದುತ್ತಿದ್ದ ಅಣ್ಣನಿಗೂ ಕನ್ನಡ ಕಾದಂಬರಿ ಕಡ್ಡಾಯವಾಗಿತ್ತು. ಆತ ತನ್ನ ಪಠ್ಯ 'ಬಾಳಿನ ಗಿಡ' (ದಕ್ಷಿಣ ಕನ್ನಡದ ಸ್ವಾತಂತ್ರ್ಯ ಹೋರಾಟದ ಕಥೆ!) ಓದಿ ಹೇಳುತ್ತಿದ್ದುದು, ಅಮ್ಮ, ನಾವೆಲ್ಲಾ ಕುಳಿತು ಕೇಳುತ್ತಿದ್ದುದು ಎಷ್ಟು ಚೆನ್ನಾಗಿತ್ತು! ನಾವು ಕಾಲೇಜಿಗೆ ಬಂದಾಗ 'ಧರ್ಮಶ್ರೀ' ಪಠ್ಯವಾಗಿತ್ತು. ನಾವೇನು ಕನ್ನಡ ಮೇಜರ್ ವಿದ್ಯಾರ್ಥಿನಿಯರಾಗಿರಲಿಲ್ಲ. ಕನ್ನಡ ಮೈನರ್ ಆಗಿ ತೆಗೆದುಕೊಂಡಿದ್ದೆವು. ಮುಂದೆ ಶ್ರೀ ಭೈರಪ್ಪನವರ ಎಲ್ಲ ಕಾದಂಬರಿಗಳನ್ನೂ ಓದುವ ಹುಚ್ಚು ಪ್ರಾರಂಭವಾಗಿತ್ತು.

ನಮ್ಮ ಮುಂದಿನ ಮಕ್ಕಳು ಕನ್ನಡದ ಈ ಎಲ್ಲ ಮಧುರ ಫಲಗಳಿಂದ ವಂಚಿರಾಗುತ್ತಾರೆಯೇ ? ಅಥವಾ ಅವರ ಅಭಿರುಚಿಗೆ ತಕ್ಕಂತೆ, ಈ ಕಾಲಕ್ಕೆ ತಕ್ಕಂತಹ ವಿದ್ಯಾಭ್ಯಾಸವನ್ನು ಅವರು ಪಡೆಯುತ್ತಿದ್ದಾರೆ, 'ಕಾಲಾಯ ತಸ್ಮೈ ನಮಃ' ಎಂದು ಸುಮ್ಮನಿರಬೇಕೆ ?


ವಿಜಯಾ ಶ್ರೀಧರ್
ಕೋಂ. ಡಾ|| ಕೆ. ಆರ್ ಶ್ರೀಧರ್, ೮ನೇ ಮುಖ್ಯ ರಸ್ತೆ
ರಾಜೇಂದ್ರನಗರ, ಶಿವಮೊಗ್ಗ - ೫೭೭ ೨೦೪


ಶ್ರದ್ಧಾಂಜಲಿ

## ಕಾನ್ಶಿರಾಮ್



ಸುಮಾರು ಎರಡು ವರ್ಷಗಳಿಂದ ತೀವ್ರ ಅನಾರೋಗ್ಯದಿಂದ ನರಳುತ್ತಿದ್ದ ಬಹುಜನ ಸಮಾಜ ಪಕ್ಷದ ಸ್ಥಾಪಕ, ನೇತಾರ ಕಾನ್ಶಿರಾಮ್ ಕಳೆದ ಅಕ್ಟೋಬರ್ ೮ರಂದು ನಿಧನರಾಗಿದ್ದಾರೆ. ಉತ್ತರ ಪ್ರದೇಶದ ರಾಜಕಾರಣದಲ್ಲಿ ಅವರದು ದೊಡ್ಡ ಹೆಸರು. ದಿನನಿತ್ಯದ ರಾಜಕೀಯದಲ್ಲಿ ಕಾನ್ಶಿರಾಮ್ ಅನುಸರಿಸುತ್ತಿದ್ದ ನೀತಿಗಳು, ಹೊಂದಾಣಿಕೆ ತಂತ್ರಗಳ ಬಗ್ಗೆ ಅನೇಕರಲ್ಲಿ ತೀವ್ರ ಭಿನ್ನಾಭಿಪ್ರಾಯಗಳಿದ್ದರೂ ಸಮಾಜದ ಹಿಂದುಳಿದ ಸಮುದಾಯಗಳಲ್ಲಿ, ಅದರಲ್ಲೂ ದಲಿತರಲ್ಲಿ ಸ್ವಾಭಿಮಾನ ಮೂಡಿಸುವಲ್ಲಿ ಅವರು ನೀಡಿದ ಕೊಡುಗೆಯನ್ನು ಯಾರೂ ಅಲ್ಲಗಳೆಯಲಾರರು. ರಾಜಕೀಯ ಕ್ಷೇತ್ರದಲ್ಲಿ ಸ್ವಂತ ಅಸ್ತಿತ್ವ ಮತ್ತು ಶಕ್ತಿಯನ್ನು ಬೆಳೆಸಿಕೊಳ್ಳದೆ ದಲಿತರು ಯಾವುದೇ ಬಗೆಯ ಪ್ರಗತಿಯನ್ನೂ ಸಾಧಿಸಲಾರರು ಎಂಬುದು ಅವರ ನಿಲುವಾಗಿದ್ದಿತು. ಅಂಬೇಡ್ಕರ್ ಅವರ ಅನುಯಾಯಿಗಳು ಹತ್ತು ಹಲವು ಗುಂಪುಗಳಾಗಿ ಚದುರಿಹೋದದ್ದು ಈಗ ಇತಿಹಾಸ. ಕಾನ್ಶಿರಾಮ್ ಅವರ ಅನುಯಾಯಿಗಳು ಅಭಿಮಾನಿಗಳು ಮುಂದಿನ ದಿನಗಳಲ್ಲಿ ದಲಿತ ಚಳುವಳಿಯನ್ನು ಒಗ್ಗೂಡಿಸಿಕೊಂಡು ಹೆಜ್ಜೆ ಹಾಕುತ್ತಾರೆಯೇ ಎಂಬುದನ್ನು ಕಾದುನೋಡಬೇಕು.

ಮೃತರಿಗೆ 'ಹೊಸತು' ಗೌರವ ಸೂಚಿಸುತ್ತದೆ.

ಭಾರತವು ಪ್ರಜಾಪ್ರಭುತ್ವ ವ್ಯವಸ್ಥೆ ಹೊಂದಿ ಅರ್ಧಶತಮಾನ ಕಳೆದರೂ ಜನತೆಯ ಮೂಲಭೂತ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಯಶಸ್ವಿ ಪಡೆಯಲಾಗಲಿಲ್ಲ. ಆದ್ದರಿಂದ ಇದರಲ್ಲಿದ್ದ ಕೇಂದ್ರೀಕೃತ ವ್ಯವಸ್ಥೆಯ ಇತಿಮಿತಿಗಳನ್ನು ತೊಡೆದುಹಾಕಿ ವಿಕೇಂದ್ರೀಕರಣದ ಸಂಪೂರ್ಣ ಲಾಭ ಪಡೆಯುವ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ೧೯೯೨ರಲ್ಲಿ ಇದರ ಬಗ್ಗೆ ಚರ್ಚೆ ನಡೆಸಿ ಭಾರತೀಯ ಸಂವಿಧಾನದ ೭೩ನೇ ತಿದ್ದುಪಡಿಯ ನಂತರ ದೇಶದಾದ್ಯಂತ ಏಕರೂಪವಾದ ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದಿತು. ಅದರಂತೆ ಕರ್ನಾಟಕ ರಾಜ್ಯದಲ್ಲಿ ೧೯೯೩ರಲ್ಲಿ ಪಂಚಾಯತ್ ರಾಜ್ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿತು. ಇದು ಮೂರು ಹಂತದ ಪಂಚಾಯತ್ ರಾಜ್ ವ್ಯವಸ್ಥೆಯಾಗಿದ್ದು, ಅದು ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಎಂಬ ಹಂತಗಳನ್ನೊಳಗೊಂಡಿದೆ. ಇದು ವಿಕೇಂದ್ರೀಕರಣದ ಸಂಪೂರ್ಣ ಸದುಪಯೋಗ ಪಡೆದುಕೊಳ್ಳುವಲ್ಲಿ ಅತ್ಯಂತ ಸೂಕ್ತವಾದ ಹೆಜ್ಜೆಯಾಗಿದ್ದು ನಮ್ಮ ರಾಜಕೀಯ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿದೆ. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯಿತಿ ಪ್ರಮುಖವಾದ ಹಂತವಾಗಿದ್ದು, ಇದು ಜನರನ್ನು ಅಭಿವೃದ್ಧಿಪಡಿಸುವಲ್ಲಿ ಮುಖ್ಯವಾದುದಾಗಿದೆ. ಈ ನಿಟ್ಟಿನಲ್ಲಿ ಗ್ರಾಮ ಪಂಚಾಯಿತಿಯು ತೆರಿಗೆಗಳು, ದರಗಳು, ಹಣಕಾಸು ನಿಯಂತ್ರಣ ಮತ್ತು ಲೆಕ್ಕಪರಿಶೋಧನೆ, ಶಿಕ್ಷಣ, ಆರೋಗ್ಯ, ಪರಿಸರ, ನೀರು ಮತ್ತು ಕೃಷಿಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸುತ್ತಿದ್ದು, ಅವುಗಳನ್ನು ಜನರಿಗೆ ತಲುಪಿಸುವಲ್ಲಿ ಸಂಪೂರ್ಣ ಯಶಸ್ಸು ಪಡೆಯ ದಿದ್ದರೂ ಕೆಲವೊಂದು ಪ್ರದೇಶಗಳಲ್ಲಿ ಯಶಸ್ವಿಯಾಗಿ ಶ್ರಮಿಸಿರುವುದು ಪ್ರಶಂಸನೀಯವಾದ ಅಂಶ. ಆದರೆ ಶಿಕ್ಷಣ ಕ್ಷೇತ್ರದಲ್ಲಿ, ನಿರ್ದಿಷ್ಟವಾಗಿ ಅದರಲ್ಲೂ ಗ್ರಾಮೀಣ ಪ್ರತಿಭೆ ಗುರ್ತಿಸುವಿಕೆ, ತಾಂತ್ರಿಕ ಮತ್ತು ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿದ ವಿಚಾರದಲ್ಲಿ ಆಸಕ್ತಿ / ಅವಕಾಶ ಇಲ್ಲದಿರುವುದು ಕಂಡುಬರುತ್ತದೆ.



# ವೃತ್ತಿಪರ ಶಿಕ್ಷಣದಲ್ಲಿ ಗ್ರಾಮ ಪಂಚಾಯಿತಿಗಳ ಪಾತ್ರ

ಡಾ|| ಚಂದ್ರಶೇಖರ್ ಯು. ಪಿ.
ಗೋವಿಂದರಾಜ

**ಗ್ರಾಮ ಪಂಚಾಯಿತಿ ಮತ್ತು ವೃತ್ತಿಪರ ಶಿಕ್ಷಣ**

ಗ್ರಾಮ ಪಂಚಾಯಿತಿ ನಿರ್ವಹಿಸಬೇಕಾದ ಅಭಿವೃದ್ಧಿ ಕಾರ್ಯಗಳಲ್ಲಿ ಶಿಕ್ಷಣವು ಒಂದು ಪ್ರಮುಖವಾದ ಅಂಶವಾಗಿದೆ. ಇಂದು ಗ್ರಾಮ ಪಂಚಾಯಿತಿಯ ಶಿಕ್ಷಣದ ಕಾರ್ಯಕ್ರಮಗಳು ಕೇವಲ ಪ್ರಾಥಮಿಕ ಶಿಕ್ಷಣ ಮತ್ತು ವಯಸ್ಕರ ಶಿಕ್ಷಣಕ್ಕೆ ಮಾತ್ರ ಸೀಮಿತವಾಗಿದ್ದು, ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣಗಳು ಅದರ ವ್ಯಾಪ್ತಿಯಲ್ಲಿ ಬರದಿರುವುದು ಕಂಡುಬರುತ್ತದೆ. ಕಾನೂನುಬದ್ಧವಾಗಿ ಇದರ ವ್ಯಾಪ್ತಿಯಲ್ಲಿ ವೃತ್ತಿಪರ ಶಿಕ್ಷಣ ಅಭಿವೃದ್ಧಿ ಇಲ್ಲದಿದ್ದರೂ ಈ ಕುರಿತು ಮೂಲಸೆಲೆಯನ್ನು ಅಭಿವೃದ್ಧಿಪಡಿಸುವುದು ಇಂದು ಗ್ರಾಮ ಪಂಚಾಯಿತಿಯ ಆದ್ಯ ಕರ್ತವ್ಯಗಳಲ್ಲಿ ಒಂದಾಗಬೇಕು. ಇದರ ಬಗ್ಗೆ ಇಂದು ಗ್ರಾಮ ಪಂಚಾಯಿತಿಗಳು ಗಂಭೀರ ವಾಗಿ ಚಿಂತಿಸಬೇಕು. ಮತ್ತು ಅದಕ್ಕೆ ಸೂಕ್ತವಾದ ಕಾರ್ಯಕ್ರಮಗಳ ಬಗ್ಗೆ ಯೋಜನೆ ರೂಪಿಸಿ ಗ್ರಾಮೀಣ ಪ್ರದೇಶದ ಬಡ ಮತ್ತು ಹಿಂದುಳಿದ ವರ್ಗಗಳ ಜನರನ್ನು ವೃತ್ತಿಪರ ಶಿಕ್ಷಣದ ಮುಖ್ಯವಾಹಿನಿಗೆ ಸಂಪೂರ್ಣವಾಗಿ ತರುವಲ್ಲಿ ಇಂದು ಶ್ರಮಿಸಬೇಕಾಗಿದೆ. ಏಕೆಂದರೆ, ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದು ಎರಡು ದಶಕಗಳು ಕಳೆದು ಮೂರನೇ ದಶಕಕ್ಕೆ ಕಾಲಿಡುತ್ತಿರುವ ಈ ಘಟ್ಟದಲ್ಲಿ ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿದ ಯಾವುದೇ ಕಾರ್ಯಕ್ರಮಗಳನ್ನು ಹಾಕಿಕೊಳ್ಳದಿರುವುದು ಎದ್ದು ಕಾಣುತ್ತಿದೆ. ವೃತ್ತಿಪರ ಶಿಕ್ಷಣಗಳಾದ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಪದವಿ ಶಿಕ್ಷಣಗಳು ಗ್ರಾಮೀಣ ಪ್ರದೇಶದ ಬಹುತೇಕ ಮಂದಿಗೆ ಮರೀಚಿಕೆಯಾಗಿಯೇ ಉಳಿದಿವೆ. ಅವರ ಕೈಗೆಟುಕದ ವಸ್ತುವಾಗಿದೆ. ಕೇವಲ ಕೆಲವರಿಗೆ (ವಿದ್ಯಾವಂತ ಮತ್ತು ಹಣವಂತ ಕುಟುಂಬದ ಮಕ್ಕಳು) ಮಾತ್ರ ಲಭ್ಯವಾಗಿದ್ದು ಬಹುಸಂಖ್ಯಾತರು ಅದರಿಂದ ವಂಚಿತ ರಾಗಿರುವುದು ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಸೂಕ್ಷ್ಮ ಅವಲೋಕನ ಮಾಡಿದಾಗ ಅದಕ್ಕೆ ಪ್ರಮುಖ ಕಾರಣಗಳೆಂದರೆ : (೧) ವೃತ್ತಿಪರ ಶಿಕ್ಷಣಗಳಾದ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಪದವಿ ಶಿಕ್ಷಣಗಳ, ಕಾಲೇಜುಗಳ ಪ್ರವೇಶ ನೀತಿ ನಿಯಮಗಳು, ಶುಲ್ಕ, ಸೌಲಭ್ಯಗಳು, ಸಿ.ಇ.ಟಿ. ಪರೀಕ್ಷೆಯ ಸಿದ್ಧತೆಯ ಬಗ್ಗೆ ಗ್ರಾಮೀಣ ಪ್ರದೇಶದ ಪೋಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಮಾಹಿತಿ ಕೊರತೆ. (೨) ವೃತ್ತಿಪರ ಶಿಕ್ಷಣಗಳಾದ ಇಂಜಿನಿಯರಿಂಗ್ ಮತ್ತು ಮೆಡಿಕಲ್ ಶಿಕ್ಷಣಗಳು ವಿದ್ಯಾವಂತ ಮತ್ತು ಶ್ರೀಮಂತ ಕುಟುಂಬದ ಮಕ್ಕಳಿಗೆ ಮಾತ್ರ, ತಮ್ಮಂತಹವರಿಗಲ್ಲ ಎಂಬ ತಪ್ಪು ತಿಳುವಳಿಕೆ ಬಡ ಮತ್ತು ಹಿಂದುಳಿದ ವರ್ಗಗಳ ಜನರ ಮನಸ್ಸಿನಲ್ಲಿ ಮನೆಮಾಡಿಕೊಂಡಿರುವುದು. (೩) ವಿಜ್ಞಾನ ವಿಭಾಗದ ಪದವಿಪೂರ್ವ ಶಿಕ್ಷಣ ಇಂಗ್ಲಿಷ್ ಮಾಧ್ಯಮ ದಲ್ಲಿರುವುದರಿಂದ ಬಹುತೇಕ ಗ್ರಾಮೀಣ ವಿದ್ಯಾರ್ಥಿಗಳು ಅದನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವೆಂಬ ಭಯ-ಭೀತಿ, ಕೀಳರಿಮೆ ಭಾವನೆಗಳು ಮಕ್ಕಳಲ್ಲಿ ಮತ್ತು ಪೋಷಕರಲ್ಲಿ ಇರುವುದು. (೪) ವಿಜ್ಞಾನ ವಿಭಾಗದ ಪದವಿ ಪೂರ್ವ ಶಿಕ್ಷಣದ ವೆಚ್ಚ ದುಬಾರಿಯಾಗಿದ್ದು ಇದು ಸಾಮಾನ್ಯ ಜನರಿಗೆ ಕೈಗೆಟುಕದಿರುವುದು. (೫) ಗ್ರಾಮೀಣ ವಿದ್ಯಾರ್ಥಿ ಮತ್ತು ಪೋಷಕರಿಗೆ ವೃತ್ತಿಪರ ಶಿಕ್ಷಣದ ಸೂಕ್ತ ಸಲಹೆ, ಮಾರ್ಗದರ್ಶನ, ತರಬೇತಿ ನೀಡುವ ಯಾವುದೇ ಸಮಿತಿ ಗ್ರಾಮೀಣ ಪ್ರದೇಶಗಳಲ್ಲಿ ಇಲ್ಲದಿರುವುದು. ಈ ಕಾರಣಗಳಿಂದ ಬಹುತೇಕ ಗ್ರಾಮೀಣ ಪ್ರದೇಶದ ಬಡ ಮತ್ತು ಹಿಂದುಳಿದ ವರ್ಗಗಳ ಮಕ್ಕಳು ವೃತ್ತಿಪರ ಶಿಕ್ಷಣದಿಂದ ದೂರ ಉಳಿದಿರುವುದು ಕಂಡುಬರುತ್ತದೆ. ಇದರಿಂದ ಭವಿಷ್ಯತ್ ಕಾಲದಲ್ಲಿ ಗಂಭೀರ ಸಮಸ್ಯೆಯಾಗಿ ನಿರುದ್ಯೋಗದ ಹೆಚ್ಚಳ, ಉತ್ತಮ ಪ್ರತಿಭೆಗಳು ಅವಕಾಶದಿಂದ ವಂಚಿತರಾಗುವುದು, ಗ್ರಾಮೀಣ ಜನತೆಯ ಅಭಿವೃದ್ಧಿ ಕುಂಠಿತವಾಗಿ ರಾಷ್ಟ್ರಾಭಿವೃದ್ಧಿ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಗಂಭೀರ ಸಮಸ್ಯೆ ಯಾಗುವುದರಿಂದ ಗ್ರಾಮ ಪಂಚಾಯಿತಿಗಳು ಇದರ ಬಗ್ಗೆ ಚಿಂತಿಸಿ ಯೋಜನೆ ರೂಪಿಸಬೇಕು. ಏಕೆಂದರೆ, ಗ್ರಾಮೀಣ ಶಿಕ್ಷಣಕ್ಕೂ ಮತ್ತು ಗ್ರಾಮ ಪಂಚಾಯಿತಿಗೂ ನಿಕಟವಾದ ಸಂಬಂಧವಿದೆ. ಅಲ್ಲದೆ ಯಾವುದೇ ವ್ಯಕ್ತಿ, ಗ್ರಾಮ, ದೇಶದ ಸರ್ವತೋಮುಖವಾದ ಬೆಳವಣಿಗೆಗೆ ಉತ್ತಮ ಶಿಕ್ಷಣ ಅವಶ್ಯಕ ಹಾಗೂ ಪಂಚಾಯತ್ ರಾಜ್ ವ್ಯವಸ್ಥೆ ಯಶಸ್ಸು ಸಹ ಪರಿಣಾಮಕಾರಿ ಶಿಕ್ಷಣವನ್ನು ಅವಲಂಬಿಸಿರುವುದರಿಂದ ಇಂದು ಗ್ರಾಮ ಪಂಚಾಯಿತಿ ವಯಸ್ಕರ ಮತ್ತು

> ಗ್ರಾಮ ಪಂಚಾಯಿತಿ ನಿರ್ವಹಿಸಬೇಕಾದ ಅಭಿವೃದ್ಧಿ ಕಾರ್ಯಗಳಲ್ಲಿ ಶಿಕ್ಷಣವು ಒಂದು ಪ್ರಮುಖವಾದ ಅಂಶವಾಗಿದೆ. ಇಂದು ಗ್ರಾಮ ಪಂಚಾಯಿತಿಯ ಶಿಕ್ಷಣದ ಕಾರ್ಯಕ್ರಮಗಳು ಕೇವಲ ಪ್ರಾಥಮಿಕ ಶಿಕ್ಷಣ ಮತ್ತು ವಯಸ್ಕರ ಶಿಕ್ಷಣಕ್ಕೆ ಮಾತ್ರ ಸೀಮಿತವಾಗಿದ್ದು, ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣಗಳು ಅದರ ವ್ಯಾಪ್ತಿಯಲ್ಲಿ ಬರದಿರುವುದು ಕಂಡು ಬರುತ್ತದೆ. ಕಾನೂನುಬದ್ಧವಾಗಿ ಇದರ ವ್ಯಾಪ್ತಿಯಲ್ಲಿ ವೃತ್ತಿಪರ ಶಿಕ್ಷಣ ಅಭಿವೃದ್ಧಿ ಇಲ್ಲದಿದ್ದರೂ ಈ ಕುರಿತು ಮೂಲಸೆಲೆಯನ್ನು ಅಭಿವೃದ್ಧಿಪಡಿಸುವುದು ಇಂದು ಗ್ರಾಮ ಪಂಚಾಯಿತಿಯ ಆದ್ಯ ಕರ್ತವ್ಯಗಳಲ್ಲಿ ಒಂದಾಗಬೇಕು. ಇದರ ಬಗ್ಗೆ ಇಂದು ಗ್ರಾಮ ಪಂಚಾಯಿತಿಗಳು ಗಂಭೀರವಾಗಿ ಚಿಂತಿಸಬೇಕು. ಮತ್ತು ಅದಕ್ಕೆ ಸೂಕ್ತವಾದ ಕಾರ್ಯಕ್ರಮಗಳ ಬಗ್ಗೆ ಯೋಜನೆ ರೂಪಿಸಿ ಗ್ರಾಮೀಣ ಪ್ರದೇಶದ ಬಡ ಮತ್ತು ಹಿಂದುಳಿದ ವರ್ಗಗಳ ಜನರನ್ನು ವೃತ್ತಿಪರ ಶಿಕ್ಷಣದ ಮುಖ್ಯವಾಹಿನಿಗೆ ಸಂಪೂರ್ಣವಾಗಿ ತರುವಲ್ಲಿ ಇಂದು ಶ್ರಮಿಸಬೇಕಾಗಿದೆ.

ಪ್ರಾಥಮಿಕ ಶಿಕ್ಷಣಗಳಿಗೆ ಮಾತ್ರ ಸೀಮಿತವಾಗಿದೆ. ಅದರ ಮೇಲ್ಮಟ್ಟ ಉನ್ನತ ಶಿಕ್ಷಣ ಅದರಲ್ಲೂ ವೃತ್ತಿಪರ ಶಿಕ್ಷಣಗಳ ಮೂಲಸೆಲೆಗಳನ್ನು ಗುರ್ತಿಸಿ, ಈ ಪ್ರತಿಭೆಗಳು ಚಿಗುರು ವಾಗಲೇ ಗುರ್ತಿಸಿ ಸೂಕ್ತವಾಗಿ ಪೋಷಿಸುವ ಪ್ರೋತ್ಸಾಹಿಸುವ ಕಾರ್ಯ ಗ್ರಾಮ ಪಂಚಾಯಿತಿಗಳಿಂದ ಪ್ರಾರಂಭವಾಗಬೇಕಿರುವುದು ಇಂದಿನ ಅವಶ್ಯಕತೆಯಾಗಿದೆ. ಈ ಕುರಿತು ಮಾಹಿತಿ, ತರಬೇತಿ ನೀಡುವ ಜವಾಬ್ದಾರಿ ಗ್ರಾಮ ಪಂಚಾಯಿತಿ ನಿರ್ವಹಿಸಬೇಕಾದ ಅನಿವಾರ್ಯತೆ ಇದೆ. ಆದ್ದರಿಂದ ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯಿತಿಗಳು ಹಾಕಿಕೊಳ್ಳಬೇಕಾದ ಪ್ರಮುಖ ಕಾರ್ಯಕ್ರಮಗಳು ಹೀಗಿರಬೇಕು :

೧. ಪ್ರತಿ ಗ್ರಾಮ ಪಂಚಾಯಿತಿ ಅಡಿಯಲ್ಲೊಂದು 'ಪ್ರತಿಭಾ ಅನ್ವೇಷಣೆ, ಪೋಷಣೆ ಹಾಗೂ ಸಮನ್ವಯ ಸಲಹಾ ಕೇಂದ್ರ' ಎಂಬುದನ್ನು ಸ್ಥಾಪಿಸಬೇಕು. ಇದರಲ್ಲಿ ಅಧೀಕ್ಷಕರು ಅಥವಾ ಸಮನ್ವಯಾಧಿಕಾರಿಯೊಬ್ಬರಿರ ಬೇಕು. ಇವರು ಇದರ ಆಡಳಿತ ಮತ್ತು ದಾಖಲಾತಿ ನಿರ್ವಹಣೆ ಕಾರ್ಯಕ್ರಮಗಳ ನಿರ್ವಹಣೆ ಮಾಡಬೇಕು ಹಾಗೂ ಇದಕ್ಕೆ ಐದು ಜನ ಆಸಕ್ತಿಯುತ ಹಾಗೂ ಗಣ್ಯವ್ಯಕ್ತಿಗಳ ಸಮಿತಿ ಇರಬೇಕು. ಇದು ಸಂಪೂರ್ಣವಾಗಿ ಶಿಕ್ಷಣದ ಪ್ರತಿ ಹಂತದ ವ್ಯವಸ್ಥೆಯ ಬಗ್ಗೆ ಮತ್ತು ಕಾಲ ಕಾಲಕ್ಕೆ ಬದಲಾದ ಶಿಕ್ಷಣದ ವ್ಯವಸ್ಥೆ ನೀತಿ-ನಿಯಮಗಳ ಬಗ್ಗೆ ಶಿಕ್ಷಣ ಪಡೆಯುವಲ್ಲಿ ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳ ಸೌಲಭ್ಯಗಳ ಬಗ್ಗೆ ಅದರಲ್ಲೂ ವೃತ್ತಿ ಶಿಕ್ಷಣಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿ, ತರಬೇತಿ, ಶುಲ್ಕ, ಪ್ರವೇಶ, ಸಿ.ಇ.ಟಿ. ಪರೀಕ್ಷೆ, ಕಾಲೇಜುಗಳ ಸಂಪೂರ್ಣ ವಿವರವನ್ನು ಗ್ರಾಮ ಪಂಚಾಯಿತಿಯ ಜನಪ್ರತಿನಿಧಿಗಳಿಗೆ ಮೊದಲು ನೀಡಬೇಕು. ನಂತರ ಪ್ರತಿಯೊಂದು ಗ್ರಾಮ ಪಂಚಾಯಿತಿಯಡಿಯಲ್ಲಿ ಬರುವ ಗ್ರಾಮ-ಉಪಗ್ರಾಮ ಗಳ ಜನತೆಗೆ ಸೂಕ್ತ ಸಮಯದಲ್ಲಿ ಅಗತ್ಯ ಮಾಹಿತಿ ನೀಡಿ ಅದರ ಬಗೆಗೆ ಸಂಪೂರ್ಣ ಅರಿವು ಮೂಡಿಸ ಬೇಕು. ಆಗ ಮಾತ್ರ ವೃತ್ತಿಪರ ಶಿಕ್ಷಣ ಗ್ರಾಮೀಣ ಪ್ರದೇಶದ ಬಡ ಮತ್ತು ಹಿಂದುಳಿದ ವರ್ಗಗಳ ಮಕ್ಕಳಿಗೆ ತಲುಪಲು ಸಹಕಾರಿಯಾಗಿ ವೃತ್ತಿಪರ ಶಿಕ್ಷಣ ಅವರ ಕೈಗೆಟುಕುವ ವಸ್ತುವಾಗುತ್ತದೆ.

೨. ಗ್ರಾಮ ಪಂಚಾಯಿತಿಯ ಜನಪ್ರತಿನಿಧಿಗಳು ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿದ ಸಮಗ್ರ ಮಾಹಿತಿ ಪಡೆದ ನಂತರ ಅವರವರ ಗ್ರಾಮಗಳಲ್ಲಿ ಗ್ರಾಮಸಭೆ ಅಥವಾ ಸಮುದಾಯ ಸಭೆಗಳಲ್ಲಿ ಪೋಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ವೃತ್ತಿಪರ ಶಿಕ್ಷಣದ ಸಮಗ್ರ ಮಾಹಿತಿ ನೀಡುವಷ್ಟು ನಿಪುಣತೆ ಹೊಂದಬೇಕಿದೆ.

೩. ಶೈಕ್ಷಣಿಕ ಸಮಗ್ರ ಮಾಹಿತಿ ಮತ್ತು ತರಬೇತಿ ಸಲಹಾ ಕೇಂದ್ರದಲ್ಲಿ ಪ್ರತಿ ಶೈಕ್ಷಣಿಕ ವರ್ಷ ಪ್ರಾರಂಭಕ್ಕಿಂತ ಎರಡು/ಮೂರು ತಿಂಗಳು ಮುಂಚಿತವಾಗಿ ಪದವಿ ಪೂರ್ವ ಶಿಕ್ಷಣದ ವಿಜ್ಞಾನ ವಿಭಾಗದ ವಿದ್ಯಾರ್ಥಿಗಳ ಮನೋಭಾವನೆ, ಆಕಾಂಕ್ಷೆ, ಸಾಮರ್ಥ್ಯಗಳನ್ನು ಗುರ್ತಿಸುವ ಪರೀಕ್ಷೆಗಳನ್ನು ಪ್ರತ್ಯೇಕವಾಗಿ ಮಾಡಿ ಅವರ ಪ್ರತಿಭೆ, ವೃತ್ತಿ ಕೌಶಲ್ಯ, ಮನೋಭಾವನೆ, ಆಕಾಂಕ್ಷೆ, ಅಭಿರುಚಿ, ಸಾಮರ್ಥ್ಯಗಳನ್ನು ಗುರುತಿಸಿ ಅದಕ್ಕೆ ಅನುಗುಣವಾದ ಹೊಸ ಕೋರ್ಸ್‌ಗಳ ವಿಷಯಗಳ ಆಯ್ಕೆ ಹಾಗೂ ಇಂಜನಿಯರಿಂಗ್ ಮತ್ತು ಮೆಡಿಕಲ್ ಪದವಿಗಳಲ್ಲಿ ಸೂಕ್ತ ಪದವಿ ಕೋರ್ಸ್‌ಗಳ ಆಯ್ಕೆ ಮಾಡಿಕೊಳ್ಳಲು ಸಮರ್ಪಕವಾದ ಸಲಹೆ, ಮಾರ್ಗ ದರ್ಶನ ಮಾಹಿತಿ ನೀಡಬೇಕು ಹಾಗೂ ಸಿ.ಇ.ಟಿ. ಪ್ರವೇಶ ಪರೀಕ್ಷೆಗೆ ಸಿದ್ಧತೆಯ ತರಬೇತಿ ಒದಗಿಸಬೇಕು.

೪. ಗ್ರಾಮ ಪಂಚಾಯಿತಿಯ ಜನಪ್ರತಿನಿಧಿಗಳು ಗ್ರಾಮಸಭೆಯಲ್ಲಿ ಸಮಕಾಲೀನ ಬದುಕಿನ ಶಿಕ್ಷಣದ ಸಮಸ್ಯೆಗಳು ಮತ್ತು ಪರಿಹಾರಗಳ ಬಗ್ಗೆ ಆಗಾಗ್ಗೆ ಸಂವಾದವನ್ನು ಏರ್ಪಡಿಸಬೇಕು.

೫. ಸರ್ಕಾರ ಮತ್ತು ಶಿಕ್ಷಣ ವ್ಯವಸ್ಥೆಯಲ್ಲಿ ವೃತ್ತಿಪರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕಾಲ ಕಾಲಕ್ಕೆ ಬದಲಾದ ಅಂಶಗಳ ಬಗ್ಗೆ ಗ್ರಾಮಗಳ ಜನರಿಗೆ ಅರಿವು ಮೂಡಿಸುವ ಕಾರ್ಯಕ್ರಮ ಹಾಕಿಕೊಳ್ಳಬೇಕು.

೬. ಪ್ರತಿ ಗ್ರಾಮಗಳ ಮಕ್ಕಳಿಗೆ ವರ್ಷಕ್ಕೆ ಎರಡು ಬಾರಿ ವ್ಯಕ್ತಿತ್ವ ವಿಕಸನದ ಶಿಬಿರಗಳನ್ನು ಗ್ರಾಮ ಪಂಚಾಯಿತಿಯ ಶೈಕ್ಷಣಿಕ ಸಮಗ್ರ ಮಾಹಿತಿ ಮತ್ತು ತರಬೇತಿ ಸಲಹಾ ಕೇಂದ್ರದಿಂದ ಹಮ್ಮಿಕೊಂಡು ಪೋಷಕರು ಮತ್ತು ಶಿಕ್ಷಕರು ಮಕ್ಕಳ ವ್ಯಕ್ತಿತ್ವ ವಿಕಸನದಲ್ಲಿ ವಹಿಸಬೇಕಾದ ಕ್ರಮಗಳ ಬಗ್ಗೆ ಸೂಕ್ತ ಸಲಹೆ ನೀಡಬೇಕು.

೭. ಗ್ರಾಮೀಣ ಪ್ರದೇಶದ ಬಹುತೇಕ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. ನಂತರ ಪದವಿಪೂರ್ವ ಶಿಕ್ಷಣದ ವಿಜ್ಞಾನ ವಿಭಾಗದಲ್ಲಿ ಶಿಕ್ಷಣ ಪಡೆಯುವ ಆಸೆ ಇದ್ದರೂ ಇಂಗ್ಲಿಷ್ ಮಾಧ್ಯಮದಲ್ಲಿರುವುದರಿಂದ ಕೀಳರಿಮೆ ಭಾವನೆ ತಾಳಿ ಕನ್ನಡ ಮಾಧ್ಯಮದಲ್ಲಿ ಸಿಗುವ ಕಲಾ ವಿಭಾಗಕ್ಕೆ ಹೆಚ್ಚಿನ ವಿದ್ಯಾರ್ಥಿಗಳು ಸೇರುತ್ತಾರೆ. ಇದರಿಂದ ವೃತ್ತಿಪರ ಶಿಕ್ಷಣದಿಂದ ಪ್ರಥಮ ಹಂತ ದಲ್ಲಿಯೇ ಈ ವಿದ್ಯಾರ್ಥಿಗಳು ಜಾರುವುದರಿಂದ ಇದನ್ನು ತಪ್ಪಿಸಲು ಅವರಿಗೆ ಸೂಕ್ತ ತಿಳಿವಳಿಕೆ ನೀಡಿ ಇಂಗ್ಲಿಷ್‌ನಲ್ಲಿ ಮಾತನಾಡುವ ಕೌಶಲ್ಯವನ್ನು ಪ್ರೌಢಶಾಲಾ ಹಂತದಲ್ಲಿಯೇ ಬೆಳೆಸುವುದಕ್ಕೆ ಪ್ರಯತ್ನಿಸ ಬೇಕು. ಇದಕ್ಕೆ ಸಂಬಂಧಪಟ್ಟ ತರಬೇತಿ ಸೂಕ್ತ ವಿಷಯ ಪರಿಣಿತರಿಂದ ನೀಡುವುದರಿಂದ ಈಗ ಹೆಚ್ಚಿನ ಮಕ್ಕಳು ಕೀಳರಿಮೆ ಬಿಟ್ಟು ವಿಜ್ಞಾನ ವಿಭಾಗಕ್ಕೆ ಹೆಚ್ಚು ಸೇರಲು ಅವಕಾಶವಾಗುತ್ತದೆ. ಅದರಿಂದ ವೃತ್ತಿಪರ ಶಿಕ್ಷಣದಿಂದ ದೂರ ಉಳಿಯುವುದು ತಪ್ಪುತ್ತದೆ. ಅಷ್ಟೇ ಅಲ್ಲ, ಇದರಿಂದ ಶೈಕ್ಷಣಿಕ ಮುಖ್ಯವಾಹಿನಿಯಲ್ಲಿ ಗ್ರಾಮೀಣ ಪ್ರತಿಭೆಗಳು ಭಾಗವಹಿಸಲು ಪೂರಕವಾಗುತ್ತದೆ.

೮. ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಬರುವ ಪ್ರೌಢಶಾಲಾ ಮಕ್ಕಳು ಅದರಲ್ಲೂ ೧೦ನೇ ತರಗತಿಯ ಮಕ್ಕಳು ಮುಂದಿನ ಸುಂದರ ಭವಿಷ್ಯದ ಕನಸು ಕಾಣುತ್ತಿರುತ್ತಾರೆ. ಆದ್ದರಿಂದ ಈ ಮಕ್ಕಳಲ್ಲಿನ ಮನೋಭಾವನೆ, ವೃತ್ತಿಕೌಶಲ್ಯ, ಅಭಿರುಚಿ, ಪ್ರವೃತ್ತಿ, ಆಕಾಂಕ್ಷೆ, ಸಾಮರ್ಥ್ಯಗಳನ್ನು ಗುರ್ತಿಸಿ ಅವುಗಳಿಗೆ ಅನ್ವಯವಾಗಿ ಬದುಕು ರೂಪಿಸಲು ಪೂರಕ ಹಾಗೂ ಸೂಕ್ತ ಹೊಸ ಕೋರ್ಸ್-ವಿಷಯಗಳ ಆಯ್ಕೆಗೆ ಸಹಕಾರಿಯಾಗಬೇಕಿದೆ. ಈ ನಿಟ್ಟಿನಲ್ಲಿ ಅರಿವು ಮೂಡಿಸುವುದರಿಂದ ಅದರಲ್ಲಿ ಕ್ರಮಬದ್ಧತೆ, ಶಿಸ್ತು, ಸೂಕ್ತ ಗ್ರಂಥಗಳ ಅಧ್ಯಯನಕ್ಕೆ ಪ್ರೇರೇಪಣೆ ನೀಡಿದಂತಾಗಿ ಮುಂದೆ ವೃತ್ತಿಪರ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾಗುತ್ತಾರೆ.

ಪ್ರಸ್ತುತದಲ್ಲಿ ಈ ಮೇಲ್ಕಂಡ ಕಾರ್ಯಕ್ರಮಗಳನ್ನು ಗ್ರಾಮ ಪಂಚಾಯಿತಿಗಳೆಲ್ಲಾ ಹಾಕಿಕೊಂಡು ಗ್ರಾಮೀಣ ಪ್ರದೇಶದ ಬಡ ಮತ್ತು ಹಿಂದುಳಿದ ವರ್ಗಗಳ ಏಳಿಗೆಗೆ ಶ್ರಮಿಸುವುದಾದರೆ ವೃತ್ತಿಪರ ಶಿಕ್ಷಣ ಪಡೆಯುವಲ್ಲಿ ಗ್ರಾಮೀಣ ಪ್ರದೇಶದ ಮಕ್ಕಳು ವಂಚಿತರಾಗದೆ ಅವರ ಸುವರ್ಣ ಅವಕಾಶ ಪಡೆಯಲು ಸಾಧ್ಯವಾಗಿ ಅವರ ಪ್ರತಿಭೆ ಬೆಳಗುತ್ತದೆ. ನಿರುದ್ಯೋಗ ಅಳಿಯುತ್ತದೆ. ಗ್ರಾಮೀಣ ಪ್ರದೇಶಗಳ ಅಭಿವೃದ್ಧಿ ಸಾಧ್ಯವಾಗುತ್ತದೆ. ಇದರಿಂದ ಶಿಕ್ಷಣ ವ್ಯವಸ್ಥೆಯ ಭದ್ರತೆ ಮತ್ತು ರಾಷ್ಟ್ರದ ಅಭಿವೃದ್ಧಿಗೆ ನಾಂದಿಯಾಗುತ್ತದೆ. ಒಟ್ಟಾರೆ ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳ ಹಿನ್ನೆಲೆಯಲ್ಲಿ, ಬದಲಿತ ಪರಿಸ್ಥಿತಿ ಮಾರುಕಟ್ಟೆ ಶಕ್ತಿಗಳ ತಾಕಲಾಟದಲ್ಲಿ ನಡೆಯಲ್ಪಡುವ ವ್ಯವಸ್ಥೆಯನ್ನು ಸಮರ್ಥವಾಗಿ ಎದುರಿಸಲು ಸೂಕ್ತವಾದ ಶಿಕ್ಷಣವನ್ನು ಆಯ್ಕೆ ಮಾಡಿ ಕೊಳ್ಳುವ ನಿಟ್ಟಿನಲ್ಲಿ ಗ್ರಾಮೀಣ ವಿದ್ಯಾರ್ಥಿಗಳನ್ನು, ಮುಂದಿನ ಪೀಳಿಗೆಯನ್ನು ಸಿದ್ಧಗೊಳಿಸುವುದು ಗ್ರಾಮೀಣ ಸ್ಥಳೀಯ ಸರಕಾರಗಳ ಆದ್ಯ ಕರ್ತವ್ಯವಾಗಬೇಕಿದೆ. ಆದ್ದರಿಂದ ಗ್ರಾಮ ಪಂಚಾಯಿತಿ ಆಡಳಿತ ವರ್ಗದವರು, ಪಂಚಾಯತ್ ರಾಜ್ ವ್ಯವಸ್ಥೆಗೆ ಸಂಬಂಧಪಟ್ಟ ಅಧಿಕಾರಿ ಗಳು ಇದರ ಬಗ್ಗೆ ಗಮನಹರಿಸಿ ಸೂಕ್ತ ಕ್ರಮ ತೆಗೆದುಕೊಳ್ಳುವುದು ಇಂದು ಆದ್ಯತೆಯ ವಿಷಯವಾಗಿದೆ.

ಡಾ|| ಚಂದ್ರಶೇಖರ್ ಯು.ಪಿ.
ಕಾರ್ಯದರ್ಶಿ, ಕರ್ನಾಟಕ ರಾಜ್ಯ ಅನುಸೂಚಿತಜಾತಿ,
ಅನುಸೂಚಿತ ಬುಡಕಟ್ಟುಗಳ ಆಯೋಗ
ಕರ್ನಾಟಕ ಸರ್ಕಾರ, ಬೆಂಗಳೂರು

ಗೋವಿಂದರಾಜ
[illegible]
[illegible]

# ಶಾಂತಿನಾಥರ ಪಾತ್ರಗಳ ಪಯಣ

## ಪ್ರಕ್ಷುಬ್ಧತೆಯಿಂದ ಮಾಗುವಿಕೆಯೆಡೆಗೆ

ಆಧುನಿಕ ಬರಹಗಾರರಲ್ಲಿ, ಅದರಲ್ಲೂ ನವ್ಯದ ಲೇಖಕರಲ್ಲಿ ಭಿನ್ನಶೈಲಿಯಲ್ಲಿ ಬರೆದು ಪರಂಪರೆಯನ್ನು ವಿರೋಧಿಸಿದವರೆಂದರೆ ಶಾಂತಿನಾಥ ದೇಸಾಯಿಯವರು. ಅವರೇ, ''ನನಗೆ ಲಾರೆನ್ಸ್, ಡಿಕನ್ಸ್, ಎಲಿಯಟ್ ಮುಂತಾದ ಪಾಶ್ಚಿಮಾತ್ಯ ಬರಹಗಾರರು ಗೊತ್ತಿರುವ ಹಾಗೆ ಕನ್ನಡದ ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶ ಗೊತ್ತಿಲ್ಲ'' ಎಂದಿದ್ದಾರೆ. ಆದರೆ ಚಿತ್ತಾಲ, ಅನಂತಮೂರ್ತಿ, ಲಂಕೇಶ್, ತೇಜಸ್ವಿ ಇವರೆಲ್ಲಾ ಒಂದಲ್ಲ ಒಂದು ಕಾರಣಕ್ಕೆ ಪರಂಪರೆಯ ಜಾಡನ್ನು ಹಿಡಿಯಬೇಕಾಯಿತು ಮತ್ತು ಅದರೊಂದಿಗೆ ಗುದ್ದಾಡಬೇಕಾಯಿತು. ಆದರೆ ದೇಸಾಯಿ ಅವರ ಚಿಂತನಾಕ್ರಮಗಳೆಲ್ಲಾ ಬಹುಮಟ್ಟಿಗೆ ಪಾಶ್ಚಾತ್ಯ ಸಿದ್ಧಾಂತಗಳಿಂದ ಕೂಡಿದ್ದವು. ಅವರ ಒಟ್ಟು ಕಾದಂಬರಿಗಳ ಪ್ರಮುಖ ಪಾತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೇಲಿನ ಮಾತು ಸ್ಪಷ್ಟವಾಗುತ್ತದೆ.

■ ಎನ್. ಸುರೇಶ್ ನಾಗಲಮಡಿಕೆ



ನವ್ಯ ಸಾಹಿತ್ಯದ ಪ್ರಭಾವ ಕುಗ್ಗತೊಡಗಿದೆ. ಅಂದರೆ ಸಂಪೂರ್ಣವಾಗಿ ಅದರ ನೆಲೆ - ಬೆಲೆಗಳು ನಾಶವಾಗಿವೆ ಎಂದರ್ಥವಲ್ಲ. ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಪಶ್ಚಿಮ ಸಾಹಿತ್ಯದಿಂದ ಪ್ರೇರಣೆಗೊಂಡ ನವ್ಯತೆ ಅರವತ್ತರ ದಶಕದ ಸತ್ವವನ್ನು ಮತ್ತು ಅದರ ಸಂಕೀರ್ಣತೆಯನ್ನು ಉಳಿಸಿಕೊಂಡು ಬರುವಲ್ಲಿ ಬಹುಮಟ್ಟಿಗೆ ವಿಫಲವಾಗಿದೆ ಎನ್ನಬಹುದು. ಇದಕ್ಕೆ ಕಾಲದ ಮತ್ತು ಪರಂಪರೆಯ ಮುಂದುವರಿಕೆಯ ಕಾರಣವಿರಬಹುದು, ನವ್ಯದ ನಂತರ ಹುಟ್ಟಿಕೊಂಡ ನಮ್ಮ ನೆಲದಲ್ಲೇ ಫಲಬಿಟ್ಟ ದಲಿತ-ಬಂಡಾಯದ ವಿರೋಧವಿರಬಹುದು. ಮಾನವೀಯ ನೆಲೆಯಲ್ಲಿ ತನ್ನದೇ ಆದ ತಾತ್ವಿಕ ನಿಲುವುಗಳನ್ನು ಅಭಿವ್ಯಕ್ತಿಸುವ ದಲಿತ ಬಂಡಾಯಗಳು ನವ್ಯದ ಧೋರಣೆಗಳನ್ನು ಪ್ರಬಲವಾಗಿ ಖಂಡಿಸಿದುವು.

ಆದರೂ ಈಗ ನಾವು ಜನಸಾಮಾನ್ಯರಿಂದ ದೂರವಾದ ಸಾಹಿತ್ಯ 'ನವ್ಯತೆ' ಎಂದು ಕೇಳಿದ್ದಾಯಿತು. ದಲಿತ ಬಂಡಾಯ ತನ್ನ ಸೈದ್ಧಾಂತಿಕ ನಿಲುವುಗಳನ್ನು ಎಷ್ಟರ ಮಟ್ಟಿಗೆ ಶ್ರೀಸಾಮಾನ್ಯನಿಗೆ ಸಂಪೂರ್ಣವಾಗಿ ತಲುಪಿಸಿವೆ ? ಪ್ರಸ್ತುತ ದಲಿತ ಸಾಹಿತ್ಯ ಚಿಂತನೆ ಯಾವ ದಿಕ್ಕಿನಲ್ಲಿದೆ ? ಜಾಗತೀಕರಣ, ಕೋಮುವಾದ, ವರ್ಗಸಂಘರ್ಷ, ಭ್ರಷ್ಟರಾಜಕೀಯಗಳ ಆರ್ಭಟ ಇವುಗಳನ್ನು ಅದು ಹೇಗೆ ಎದುರಿಸುತ್ತಿದೆ? ಇಂತಹ ಅಂಶಗಳನ್ನು ಈಗಾಗಲೇ ದಲಿತ-ಬಂಡಾಯ ಸಮಗ್ರವಾಗಿಯೋ ಆಂಶಿಕವಾಗಿಯೋ ತಂದು ಅನಾವರಣಗೊಳಿಸಿದೆ. ಆದರೆ ಅವು ಇಂದು ನಾವು ಎದುರಿಸುತ್ತಿರುವ ಬಹುದೊಡ್ಡ ಸವಾಲುಗಳಾಗಿ ಮಾರ್ಪಟ್ಟಿವೆ. ಮನುಷ್ಯ ಮತ್ತೆ ಅಂತರ್ಮುಖಿಯಾಗಿ ಉಳಿಯುತ್ತಿದ್ದಾನೆಯೇ ? ಎಂಬ ಪ್ರಶ್ನೆ ನನ್ನನ್ನು ಕಾಡಿದೆ. ಅಂದರೆ ಪುನಃ ನವ್ಯಕ್ಕೆ ಅಥವಾ ಅದರ ಮಾನದಂಡಗಳಿಗೆ ಹಿಂತಿರುಗಬೇಕು ಎಂದೇನೂ ವಾದಿಸುತ್ತಿಲ್ಲ. ಇವುಗಳಾಚೆ ನಿಂತು ನಮ್ಮ ಪರಂಪರೆಯ ಹಿನ್ನೆಲೆಯಲ್ಲಿಯೇ ಅಸಂಗತಗೊಳ್ಳುತ್ತಿರುವ ವಿಹ್ವಲತೆಯಲ್ಲಿ ನರಳುತ್ತಿರುವ ಬದುಕನ್ನು ಸುಸಂಗತವಾಗಿ ಚಿತ್ರಿಸುವುದಕ್ಕೆ ಸೃಜನಶೀಲ ಮನಸ್ಸುಗಳು ಪ್ರಯತ್ನಮಾಡಬೇಕಿನಿಸುತ್ತದೆ. ಪ್ರಕೃತಿ, ಮನುಷ್ಯ ಸಂಬಂಧಗಳು, ಸಮಾಜ, ಧರ್ಮ ಮುಂತಾದ ಅಂಶಗಳು ಈಗ ನೇತ್ಯಾತ್ಮಕ ಸ್ವರೂಪವನ್ನು ಪಡೆದುಕೊಳ್ಳುವ ಹಾದಿಯಲ್ಲಿವೆ ಎಂಬುದನ್ನು ಪುನಃ ಪುನಃ ಹೇಳಬೇಕಾಗಿಲ್ಲ.

ನವ್ಯ ಸಾಹಿತ್ಯದ ಉಚ್ಛ್ರಾಯದ ಕಾಲದಲ್ಲಿ ಕವಿಯಾಗಬಯಸಿದ ಶಾಂತಿನಾಥ ದೇಸಾಯಿಯವರು ಮಿಂಚಿದ್ದು ಕಥೆಗಾರರಾಗಿ, ಕಾದಂಬರಿಕಾರರಾಗಿ ಮಾತ್ರ. ಇವರ ಜೊತೆ ಜೊತೆಯಲ್ಲೇ ಬರೆಯ ಹೊರಟ ತೇಜಸ್ವಿ, ಲಂಕೇಶ್, ಯಶವಂತ್ ಚಿತ್ತಾಲ, ಅನಂತಮೂರ್ತಿ ಮುಂತಾದವರು ಅಪ್ಪಟ ವೈದಿಕ ಅಥವಾ ಶೂದ್ರ ಪ್ರಜ್ಞೆಯ ಹಿನ್ನೆಲೆಯಲ್ಲಿ ಬಂದವರಾಗಿದ್ದರು. ಅನಂತಮೂರ್ತಿಯವರಂತೂ ಇಂದಿಗೂ ತಮ್ಮ ಕಾದಂಬರಿ, ಕತೆಗಳಲ್ಲಿ ಬ್ರಾಹ್ಮಣ - ಶೂದ್ರ (ದಲಿತ) ಈ ಸಂಬಂಧಗಳ ಮೂಲಕವೇ ಬದುಕಿನ ವಾಸ್ತವ ಬೇರುಗಳನ್ನು ಹುಡುಕುತ್ತಿದ್ದಾರೆ. ಇತ್ತೀಚೆಗೆ ಬಂದ ಅವರ ಕಾದಂಬರಿ 'ದಿವ್ಯ'ದಲ್ಲಿ ಕೂಡ ಈ ದ್ವಂದ್ವವನ್ನು ನೋಡಬಹುದು. ಇನ್ನು ಲಂಕೇಶ್, ತೇಜಸ್ವಿಯವರಂತೂ ತೆರೆದ ಮನಸ್ಸುಗಳಿಂದಲೇ ತಮ್ಮ ಬರವಣಿಗೆಯ ಕ್ರಮವನ್ನು ಬದಲಾಯಿಸಿಕೊಂಡರು. ಒಂದು ರೀತಿಯಲ್ಲಿ ಕುವೆಂಪು ಅವರು ಪ್ರಕೃತಿಯನ್ನು ಆಧ್ಯಾತ್ಮಿಕ ಮನೋಭಾವದಿಂದ ವರ್ಣಿಸಿ ಕೊನೆಗೆ ಅದರಲ್ಲೇ ಜೀವನ ಸೌಂದರ್ಯವನ್ನು ಕಾಣುತ್ತಾರೆ. ತೇಜಸ್ವಿ ಅದೇ ನಿಸರ್ಗವನ್ನು ಆಧುನಿಕ ವೈಜ್ಞಾನಿಕ ಮನೋಭಾವದಿಂದ ಛಾಯಾಗ್ರಹಣ ದೃಷ್ಟಿಯಿಂದ ನೋಡುತ್ತಾರೆ. ಅಂತಿಮವಾಗಿ ತಮ್ಮ ಅಬಚೂರಿನ ಪೊಸ್ಟಾಫೀಸು ಕಥಾಸಂಕಲನದ ಮೂಲಕವೇ ತಮ್ಮ ನಿಲುವುಗಳನ್ನು ಬದಲಿಸಿಕೊಂಡರು. ಲಂಕೇಶ್‌ರ ಕಥೆಗಳ ಬೆಳವಣಿಗೆಯ ಸ್ವರೂಪವೇ ಮೆಚ್ಚುವಂತದ್ದು. ಕ್ರಮೇಣ ಅವರು ಅಂತರಂಗ ಮತ್ತು ಬಹಿರಂಗದ ಮೂಲಭೂತ ಪ್ರಶ್ನೆಗಳಿಗೆ ಒತ್ತುಕೊಟ್ಟರು. ಈ ಮೂವರಿಗಿಂತ ತೀರಾ ಭಿನ್ನವಾಗಿ ತಮ್ಮ ಸಾಹಿತ್ಯವನ್ನು ರೂಪಿಸಿಕೊಂಡವರು ಯಶವಂತ ಚಿತ್ತಾಲರು. ಗಟ್ಟಿಯಾದ ಬಂಧ, ಶಿಲ್ಪ, ನಿರೂಪಣೆಯ ಚೌಕಟ್ಟು, ವಿಶಿಷ್ಟವಾದ ಭಾಷಾಶೈಲಿಯಿಂದಲೇ ಕನ್ನಡ ಕಥಾಸಾಹಿತ್ಯದಲ್ಲಿ ಅವರು ಅಪರೂಪದ ಸ್ಥಾನವನ್ನು ಪಡೆದುಕೊಂಡಿದ್ದಾರೆ.

ಹೀಗೆ ಆಧುನಿಕ ಬರಹಗಾರರಲ್ಲಿ, ಅದರಲ್ಲೂ ನವ್ಯದ ಲೇಖಕರಲ್ಲಿ, ಭಿನ್ನಶೈಲಿಯಲ್ಲಿ ಬರೆದು ಪರಂಪರೆಯನ್ನು ವಿರೋಧಿಸಿದವರೆಂದರೆ ಶಾಂತಿನಾಥ ದೇಸಾಯಿಯವರು. ಅವರೇ ನನಗೆ ಲಾರೆನ್ಸ್, ಡಿಕನ್ಸ್, ಎಲಿಯಟ್ ಮುಂತಾದ ಪಾಶ್ಚಿಮಾತ್ಯ ಬರಹಗಾರರು ಗೊತ್ತಿರುವ ಹಾಗೆ ಕನ್ನಡದ ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶ ಗೊತ್ತಿಲ್ಲ ಎಂದಿದ್ದಾರೆ. ಆದರೆ ಚಿತ್ತಾಲ, ಅನಂತಮೂರ್ತಿ, ಲಂಕೇಶ್, ತೇಜಸ್ವಿ ಇವರೆಲ್ಲಾ ಒಂದಲ್ಲ ಒಂದು ಕಾರಣಕ್ಕೆ ಪರಂಪರೆಯ ಜಾಡನ್ನು ಹಿಡಿಯಬೇಕಾಯಿತು ಮತ್ತು ಅದರೊಂದಿಗೆ ಗುದ್ದಾಡಬೇಕಾಯಿತು. ಆದರೆ ದೇಸಾಯಿ ಅವರ ಚಿಂತನಾಕ್ರಮಗಳೆಲ್ಲಾ ಬಹುಮಟ್ಟಿಗೆ ಪಾಶ್ಚಾತ್ಯ ಸಿದ್ಧಾಂತಗಳಿಂದ ಕೂಡಿದ್ದವು. ಅವರ ಒಟ್ಟು ಕಾದಂಬರಿಗಳ ಪ್ರಮುಖ ಪಾತ್ರಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೇಲಿನ ಮಾತು ಸ್ಪಷ್ಟವಾಗುತ್ತದೆ. ಭಾರತದಲ್ಲಿ ಜಿಡ್ಡು ಕೃಷ್ಣಮೂರ್ತಿ, ಎಂ. ಎನ್. ರಾಯ್, ಲೋಹಿಯಾ ಮುಂತಾದವರು ಇವರ ಮೇಲೆ ಪ್ರಭಾವ ಬೀರಿದ್ದರು ಎಂಬುದನ್ನೂ ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಸಾಹಿತ್ಯದ ದೃಷ್ಟಿಯಿಂದ ಇದು ಆನುಷಂಗಿಕವೆಂದೇ ಹೇಳಬೇಕು.

ಮೊದಲು ಕವಿಯಾಗಿ ಪ್ರವೇಶ ಮಾಡಿದರೂ ಅವರು ಚರ್ಚೆಗೆ ಒಳಗೊಂಡದ್ದು ಮಾತ್ರ 'ಮುಕ್ತಿ' ಕಾದಂಬರಿಯ

ಮೂಲಕ ಹಾಗೂ ಕೆಲವು ಕತೆಗಳ ಮೂಲಕ. 'ಮುಕ್ತಿ' ನವ್ಯದ ಅಬ್ಬರದ ಸ್ಥಿತಿಯಲ್ಲಿ ಬಂದು ಸಾರ್ಥಕವಾದ ಕೆಲಸ ಮಾಡಿತು. ಸಾಮಾನ್ಯವಾಗಿ ದೇಸಾಯಿ ಅವರನ್ನು ಅಧ್ಯಯನ ಮಾಡಬೇಕಾದಾಗ ಕೆಲವು ಪ್ರಶ್ನೆಗಳನ್ನು ಎತ್ತಿಕೊಳ್ಳಬೇಕಾಗುತ್ತದೆ.

೧. ಶಾಂತಿನಾಥರು ನವ್ಯದ ಇತರ ಬರಹಗಾರರಗಿಂತ ಹೇಗೆ ಭಿನ್ನ ?

೨. ಬಹುಮಟ್ಟಿಗೆ ಅವರು ನವ್ಯಮಾರ್ಗವನ್ನೇ ಸ್ವೀಕರಿಸಿದ್ದು ಏಕೆ ?

೩. ದೇಸಾಯಿ ಅವರ ದೃಷ್ಟಿಯಲ್ಲಿ ಮಾನವೀಯ ಸಂಬಂಧಗಳು ಯಾವುವು ?

ಈಗಾಗಲೇ ನಾನು ಕ್ವಚಿತ್ತಾಗಿ ಮೊದಲ ಮತ್ತು ಎರಡನೇ ಪ್ರಶ್ನೆಗಳಿಗೆ ನನ್ನದೇ ಆದ ಅನಿಸಿಕೆಗಳನ್ನು ನಿರ್ದಿಷ್ಟವಾಗಿ ವ್ಯಕ್ತಪಡಿಸಿದ್ದೇನೆ. ಮುಖ್ಯವಾಗಿ ಎಲ್ಲಾ ಕಾದಂಬರಿಗಳನ್ನು ಸಮಗ್ರವಾಗಿ ಅನುಸಂಧಾನ ಮಾಡುವ ಮಹತ್ವಾಕಾಂಕ್ಷೆ ಈ ಲೇಖನಕ್ಕೆ ಸಾಧ್ಯವಾಗಿಲ್ಲ. ಇದೇನಿದ್ದರೂ ದೇಸಾಯಿ ಅವರ ನಾಯಕರ ನಾಯಕಿಯರ ಮನಸ್ಸಿನ ಪಲ್ಲಟಗಳನ್ನು ಮಾತ್ರ ಗುರುತಿಸುವ ಪ್ರಯತ್ನವಷ್ಟೆ.

ಶಾಂತಿನಾಥರ ಎಲ್ಲ ಕಾದಂಬರಿಗಳಲ್ಲಿ ಇರುವಿಕೆ - ಆಗುವಿಕೆಯ ಸಮನ್ವಯದ ಹಾದಿಯು ದಟ್ಟವಾಗಿ ಗೋಚರಿಸುತ್ತದೆ. ಗೌರೀಶ, ವಿಕ್ರಮ, ರೇವತಿ, ರೋಜಾ, ರಾಹುಲ, ಶ್ರೇಯಾಂಸ ಮುಂತಾದವರು ತಮ್ಮ ಬದುಕಿನ ಹಲವು ಘರ್ಷಣೆಗಳಿಂದ ಮುಕ್ತವಾಗಿ ಹೊರಬಂದು ತಮ್ಮತನಗಳನ್ನು ಶೋಧಿಸುತ್ತಾ ಹುಡುಕಾಡುತ್ತಾ ಜೀವನದಲ್ಲಿ ನಿರ್ಣಾಯಕ ಹಂತವನ್ನು ತಲುಪಲು ಹಾತೊರೆಯುತ್ತಾರೆ. ಗೌರೀಶ, ಕಾಮಿನಿ - ಶ್ರೀಕಾಂತರಿಂದ ಬಿಡುಗಡೆಯಾಗುವುದೇ ಕಷ್ಟವೆನಿಸಿ ಅಂತಿಮವಾಗಿ ಡಾಲಿಯ ಬೆಚ್ಚನೆಯ ಎದೆಯಲ್ಲಿ ಆಶ್ರಯ ಪಡೆಯುತ್ತಾನೆ. ಶ್ರೇಯಾಂಸ ಜೀವನದಲ್ಲಿ ಅಥೆಂಟಿಕ್‌ಅನ್ನು ವಿಶಿಷ್ಟ ನೆಲೆಯಲ್ಲಿ ಕಾಣಲು ಪ್ರಯತ್ನಿಸುತ್ತಾನೆ. ಶೀತಲಕುಮಾರ ಕಾದಂಬರಿಕಾರನಾದರೂ ಪರಮನ ಪ್ರವೇಶ ಮಾಡುವ ಸಾಮರ್ಥ್ಯವಿದ್ದರೂ ಸ್ವಂತ ವ್ಯಕ್ತಿತ್ವ ಇಲ್ಲದವನು. ರೇವತಿಗೆ ಬದುಕು ಒಂದು ಪ್ರಯೋಗಶಾಲೆಯಂತೆ ಕಾಣುತ್ತದೆ. ವಿಕ್ರಮ ಗೊಂದಲಗಳ ತೀವ್ರತೆಯಲ್ಲಿ ಕನಸುಗಾರನಾಗಿಯೇ ಉಳಿಯುತ್ತಾನೆ. ಶಕುಂತಲೆ, ದೇವಧರ ಇವರು ಬದುಕಿನಲ್ಲಿ ಹೊಸ ಸೃಷ್ಟಿಗೋಸ್ಕರ ಕಾದು ನೋಡುತ್ತಾರೆ.

ಕಾಮಿನಿಯಂತೆ ಎಡಪಂಥೀಯ ವಿಚಾರಧಾರೆಯಲ್ಲಿ ತೊಡಗಿಕೊಂಡ ರೋಜಾ ತನ್ನ ಬದುಕಿನ ಒಂದು ಮುಖ್ಯ ಘಟ್ಟದಲ್ಲಿ ಭವಿಷ್ಯದ ಕುರಿತಾದ ತೀರ್ಮಾನಗಳನ್ನು ತೆಗೆದುಕೊಳ್ಳುವಾಗ ಗೊಂದಲಗಳಿಗೆ ಸಿಲುಕುತ್ತಾಳೆ. ಆಧುನಿಕತೆಯ ಅಬ್ಬರದಲ್ಲಿ ಏಕಾಕಿತನದ ಒತ್ತಡದಲ್ಲಿ ಎಲ್ಲರೂ ಬದುಕಿನ ಹೊಸ ಜಗತ್ತಿಗೆ ಪ್ರವೇಶಿಸುವಾಗ ಪರಸ್ಪರ ಮುಖಾಮುಖಿಯಾಗುವ ಸಮಸ್ಯೆಗಳ ಬಣ್ಣ ಯಾವ ರೀತಿಯದು ? ತಲುಪುವ ನಿಲುವುಗಳ ಸ್ವರೂಪ ಎಂತಹುದು ?

ನಾನು ಇವರ ಕಾದಂಬರಿ ವಸ್ತುವನ್ನು ಚರ್ಚೆಯ ಅನುಕೂಲಕ್ಕಾಗಿ ವಿವಾಹಪೂರ್ವ ಅಡೊಲೆಸೆಂಟ್ ಯುವಕರ ತಲ್ಲಣಗಳು ಹಾಗೂ ವಿವಾಹದ ನಂತರ ಯುವಕರ ತಳಮಳಗಳ ಚಿತ್ರಣ ಎಂಬುದಾಗಿ ವಿಂಗಡಿಸಿದ್ದೇನೆ.

ವಿವಾಹಪೂರ್ವದ ಅಡೊಲೆಸೆಂಟ್ ಯುವಕರ ತಳಮಳ ಮತ್ತು ತಲ್ಲಣಗಳನ್ನು ಮುಖ್ಯವಾಗಿ ಮುಕ್ತಿ, ವಿಕ್ಷೇಪ, ಓಂಣಮೋ (ಕ್ವಚಿತ್ತಾಗಿ ಎಲ್ಲ ಕಾದಂಬರಿ)ಗಳಲ್ಲಿ ದೇಸಾಯಿವರು ಸಾಕಷ್ಟು ಮಾರ್ಮಿಕವಾಗಿ ಅನಾವರಣ ಗೊಳಿಸಿದ್ದಾರೆ. ಮುಕ್ತಿಯ ಗೌರೀಶ ಭೂತಕಾಲದ ಭೂತಗಳಾದ ಪ್ರೇಯಸಿ, ಕಾಮಿನಿ ಮತ್ತು ವೈಚಾರಿಕ ನಿಲುವುಗಳುಳ್ಳ ಸ್ನೇಹಿತ ಶ್ರೀಕಾಂತ ಇವರ ಪ್ರಭಾವದಿಂದ ತಪ್ಪಿಸಿಕೊಂಡು ಡಾಲಿಯೊಡನೆ ವಿವಾಹವಾಗುವ ಸೂಚನೆಗಳಿದ್ದರೂ ಅವನ ಮನಸ್ಸು ಕಾಮಿನಿಯನ್ನು ಬಿಟ್ಟುಕೊಡುವುದಿಲ್ಲ. ಹಾಗೆಯೇ ವಿಕ್ಷೇಪದ ರಾಹುಲ, ''ನನಗೆ ನಾನಾಗಿ ಜೀವಿಸಬೇಕಾಗಿದೆ. ಹೀಗೆ ಜೀವಿಸುವುದಕ್ಕೆ ಇಲ್ಲಿ ನನಗೆ ಸಾಧ್ಯವಾಗಿಲ್ಲ'' ಎನ್ನುತ್ತಾನೆ. ಸ್ವತಂತ್ರ ಮನೋಭಾವ ವಿದ್ದರೂ ತನ್ನ ಮನಸ್ಸಿನ ವಿಕ್ಷಿಪ್ತತೆಯಿಂದ ಬದುಕಿನಲ್ಲಿ ದೊಡ್ಡ ತಹತಹಗಳು ಎದುರಾಗುತ್ತವೆ. ಪ್ರಾರಂಭದಲ್ಲಿ ಇವನ ಸುತ್ತ ಅನೇಕ ಹುಡುಗಿಯರು ಸುತ್ತಿದ್ದರೂ ಮನಸ್ಸು ಮಾತ್ರ ಮಾಧವಿಯನ್ನು ಕೇಂದ್ರೀಕರಿಸಿಕೊಂಡಿರುತ್ತದೆ. ಇಲ್ಲಿ ರಾಹುಲ - ಗೌರೀಶರೊಡನೆ ಕಾಣುವ ಹೋಲಿಕೆಗಳೆಂದರೆ ಗೌರೀಶನಿಗೆ ಕಾಮಿನಿ, ಶ್ರೀಕಾಂತರಿಂದ ತಪ್ಪಿಸಿಕೊಂಡು ಹೊಸ ಬದುಕಿನತ್ತ ತುಡಿಯುವುದು ಅನಿವಾರ್ಯವಾಗಿತ್ತು ಎಂಬುದು.

ಆದರೆ ರಾಹುಲ ಮಾಧವಿಯಿಂದ ಬಹು ದೂರ ಬರುವುದಕ್ಕೆ ಅವನ ವಿಕ್ಷಿಪ್ತ ಮನಸ್ಸೇ ಕಾರಣ. ಪ್ರೊ॥ ವಿಲಿಯಮ್ಸ್ ಹೇಳುವ ಹಾಗೆ, ''ನೀನೊಬ್ಬ ಹುಚ್ಚ ರಾಹುಲ್. ನೀನೊಬ್ಬ ವಿಕ್ಷಿಪ್ತ ಮನುಷ್ಯ. ನಿನಗೆ ತಿಳಿದಂತೆಯೇ ನೀನು ಮಾಡುವವ.'' ವೈದೇಹಿ, ರೋಜಿ ಇವರೊಡನೆ ನೈತಿಕ ಸಂಬಂಧ ಹೊಂದಲು ಪ್ರಯತ್ನಿಸುತ್ತಾನೆ. ನಿಜವಾದ ಪ್ರೀತಿಗೆ ಹುಡುಕುತ್ತಾನೆ. ಅಪ್ಪಟ ಆಧುನಿಕ ಸಂವೇದನೆಯ ಮಾಧವಿ ಸ್ವತಂತ್ರ ಮನೋಭಾವದವಳು. ಬದುಕಿನ ಬಗ್ಗೆ ನಿರ್ಣಾಯಕ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ವಿಶಿಷ್ಟ ಮಾರ್ಗಗಳನ್ನು ಅನ್ವೇಷಿಸುತ್ತಾಳೆ. ಈ ದೃಷ್ಟಿಯಿಂದ ಕಾಮಿನಿಗಿಂತ ಮಾಧವಿ ಒಂದು ಹೆಜ್ಜೆ ಮುಂದೆ ಎನ್ನಬಹುದು. ಕಾಮಿನಿಯಾದರೋ ತನ್ನ ಸ್ವಂತ ಬದುಕನ್ನೇ ಮರೆತುಹೋಗುತ್ತಾಳೆ. ಆದರೆ ಮಾಧವಿ ಶ್ರೀಮಂತ ಹುಡುಗಿಯಾದರೂ, ''ರಾಹುಲ ತನಗೇನೂ ಬೇಡ, ತಾಯಿ ಬೇಡ, ಹಣ ಬೇಡ, ಕಾರು ಬೇಡ, ಮನೆ ಬೇಡ, ನೀನು ಬೇಕು ನನ್ನ ರಾಜ ನನಗೆ ಬೇಕು'' ಎಂಬ ತೀರ್ಮಾನಕ್ಕೆ ಬರುತ್ತಾಳೆ. ದುರ್ಬಲನಾದ ರಾಹುಲ ಇವುಗಳನ್ನು ಅರಿಯದೇ ಹೋಗುತ್ತಾನೆ. ''ನಾನವಳನ್ನು ಲಗ್ನವಾದರೆ ನನ್ನ ಅಂತಃಸತ್ವವನ್ನೇ ನಾಶಮಾಡಿಬಿಡುವಳು'' ಎನ್ನುತ್ತಾನೆ. ಒಂದು ರೀತಿಯಲ್ಲಿ ದೇಸಾಯಿಯವರ ನಾಯಕರು ಅಸೂಯೆ ಬೆರೆತ ಕುರೂಪಿ ಮನಸ್ಸಿನವರು. ಸೂಕ್ತವಾದ, ಗಟ್ಟಿಯಾದ ನಿರ್ಧಾರಗಳನ್ನು ತೆಗೆದುಕೊಳ್ಳುವಲ್ಲಿ ಎಡವುತ್ತಾರೆ. ಇದಕ್ಕೆ ಕಾರಣ ಪ್ರಾಯಶಃ ತೀರ್ಮಾನದ ದೋಷ ಎಂದು ಬಹುಮಟ್ಟಿಗೆ ಹೇಳಬಹುದು.

ಶ್ರೀಕಾಂತ ಜೀವನದಲ್ಲಿ ಮುಕ್ತಿ ಸಿಗಬೇಕೆಂದರೆ ಆತ್ಮಹತ್ಯೆಯೇ ಒಂದು ಪರಿಪೂರ್ಣ ಮಾರ್ಗವೆಂದು ತಿಳಿದು ಸಾಯುತ್ತಾನೆ. ವಿಚಾರವಂತನಾದರೂ ಪಲಾಯನವಾದಿಯಾಗಿ ಗೋಚರವಾಗುತ್ತಾನೆ. ಡಾಲಿಯ ಆಶ್ರಯ ಪಡೆದ ಗೌರೀಶನಾಗಲೀ, ಕುಂದಾಳ ಆಶ್ರಯ ಪಡೆದ ರಾಹುಲನಾಗಲೀ ಬದುಕಿನಲ್ಲಿ ಪರಿಪೂರ್ಣ ವ್ಯಕ್ತಿತ್ವ ಪಡೆದುಕೊಳ್ಳುವರೆ ? ಎಂಬ ಪ್ರಶ್ನೆಗೆ ವಿವಾಹವಾದ ನಂತರ ಇವರ ಮನಸ್ಸನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಸಾಧ್ಯವಿಲ್ಲವೇನೋ ಅನ್ನಿಸಿಬಿಡುತ್ತದೆ. ಗೌರೀಶ ಕಾಮಿನಿಯನ್ನು ರಾಹುಲ ಮಾಧವಿಯನ್ನು ಎಂದೂ ಮರೆಯುವುದಕ್ಕೆ ಸಾಧ್ಯವಿಲ್ಲ. ಮನೋವಿಶ್ಲೇಷಣೆಗೆ ತೊಡಗಿದಾಗಲೂ ಭೂತಕಾಲವನ್ನು ಬಿಡುವ ಸಂಭವಗಳು ಕಡಿಮೆ.

ಓಂ ಣಮೋ ಕಾದಂಬರಿಯು ಒಂದು ರೀತಿಯಲ್ಲಿ ಎರಡು-ಮೂರು ತಲೆಮಾರುಗಳ ಕಥೆ ಇದ್ದರೂ ದೇಸಾಯಿಯವರ ದೃಷ್ಟಿ ರೋಗ ಯುವ ಮನಸ್ಸುಗಳ ಮೇಲಿದೆ ಎನ್ನಬಹುದು. ಜೈನ ಧರ್ಮದ ಸಂಶೋಧನೆಗೆಂದು ಭಾರತಕ್ಕೆ ಬಂದ ಆ್ಯನ್ ವಿಶಿಷ್ಟವಾದ ಗೊಂದಲಕ್ಕೆ ತುತ್ತಾಗುತ್ತಾಳೆ. ಇಲ್ಲಿನ ಮಣ್ಣಿನ ವಾಸನೆಗೆ ಒಗ್ಗಿಕೊಳ್ಳುವುದಕ್ಕೆ ಇವರಿಬ್ಬರೂ ಸ್ವಲ್ಪಮಟ್ಟಿಗೆ ಪ್ರಯಾಸಪಡಬೇಕಾಗುತ್ತದೆ. ಆ್ಯಡೆಂ ಆ್ಯನ್‌ಳೊಡನೆ ಮಾನಸಿಕ - ವೈವಾಹಿಕ ಸಂಬಂಧವನ್ನು ಕೂಡ ಇಟ್ಟುಕೊಂಡಿರುತ್ತಾನೆ. ಆದರೆ ಇವನ ಮನಸ್ಸು ಕೂಡ ಗೌರೀಶ, ರಾಹುಲರಂತೆ ರೋಜಾ ಕಡೆ ವಾಲುತ್ತದೆ. ಇತ್ತ ಆ್ಯನ್ ಮಾತ್ರ ಜೈನಧರ್ಮದ ತತ್ವಗಳನ್ನು ಶೋಧಿಸುತ್ತಲೆ ಅಪ್ರಜ್ಞಾಪೂರ್ವಕವಾಗಿಯೇ ಪ್ರೀತಿಯ ಹುಡುಕಾಟದಲ್ಲಿ ಇರುತ್ತಾಳೆ. ರೋಜಾ ಎಡಪಂಥೀಯ ವಿಚಾರಧಾರೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಅಲ್ಲಿಯೇ ಒಬ್ಬ ಯುವಕನನ್ನು ಪ್ರೀತಿಸುತ್ತಾಳೆ. ಆದರೆ ಇದು ಕೊನೆಯಲ್ಲಿ ಫಲಿಸದೇ ಹೋಗುತ್ತದೆ. ಕಾಮಿನಿಗೂ ಇದೇ ವರ ಸಿಗುತ್ತದೆ. ಈ ದ್ವಂದ್ವವನ್ನು ಚ. ಸರ್ವಮಂಗಲಾ ಅವರು ಸರಿಯಾಗಿಯೇ ಗುರುತಿಸುವಂತೆ, ''ದೇಸಾಯಿ ಯವರಿಗೆ ಈ ತತ್ವಗಳ ಬಗ್ಗೆ ಮೆಚ್ಚುಗೆಯಿದ್ದರೂ ಈ ತತ್ವಗಳೂ ಆಧುನಿಕ ಬದುಕಿನ ಒತ್ತಡಗಳನ್ನು ಸಂಪೂರ್ಣವಾಗಿ ಎದುರಿಸಲು ಅಸಮರ್ಥ ಎಂಬ ತಿಳುವಳಿಕೆ ಇರುವುದೇ ಬಹುಶಃ ಇದಕ್ಕೆ ಕಾರಣ ವಿರಬೇಕು'' ಎಂದು ಸ್ಪಷ್ಟವಾಗಿ ಗುರುತಿಸುತ್ತಾರೆ. ಅಂದರೆ, ಇವರ ಪ್ರಕಾರ ಸಾಮಾಜಿಕವಾಗಿ ಇಂತಹ ತತ್ವಗಳು ಆಸಕ್ತಿ ಹುಟ್ಟಿಸಿದರೂ ವೈಯಕ್ತಿಕ ಮತ್ತು

ಸರ್ಕಾರಿ ಯೋಜನೆಗಳ ಲಾಭ:
ರೈತರಿಗೆ ಅರಿವು ಮೂಡಿಸಲು ಕರೆ

ಏನು ಹೇಳಿಕೊಟ್ರು ಅಂಡ...
ಅದೇ ಯಾರ್‍ಯಾರಿಗೆ ಕೈ ಬಿಸಿ ಮಾಡಿದ್ರೆ
ಯಾವ್ಯಾವ ಲಾಭ ನಮಗೆ ಸಿಗುತ್ತೆ ಅಂತ ಹೇಳಿಕೊಟ್ರು...!!!?

ಕೌಟುಂಬಿಕ ಒತ್ತಡಗಳಿಗೆ ಸ್ಪಂದಿಸುವುದಿಲ್ಲ ಎಂದಾಯಿತು. ಅಂತಿಮವಾಗಿ ಈ ಕಾದಂಬರಿಯ ನಾಯಕ ನಾಯಕಿಯರಾದ ಆ್ಯಡೆಂ ಮತ್ತು ಕ್ರಿಸ್ ಒಂದಾಗುತ್ತಾರೆ. ಅವಳೇ ಉದ್ಧರಿಸುವ ಹಾಗೆ, ''ಆ್ಯಡೆಂ ನನಗೆ ನೆಲಕ್ಕೆ ಕಟ್ಟಿಹಾಕಲು ನೀನೆ ಬೇಕು ಆದರೆ ಕನಸು ತುಂಬಾ ಸುಂದರವಾಗಿರುತ್ತದೆ, ಆಕರ್ಷಕವಾಗುತ್ತದೆ. ಕನಸು ಒಮ್ಮೊಮ್ಮೆ ಅಸ್ತಿತ್ವದ ನೋವುಗಳಿಂದ ದೂರಹೋಗಲು ಸಹಾಯ ಮಾಡುತ್ತದೆ'' ಎಂಬ ಅರ್ಥಪೂರ್ಣ ಮಾತುಗಳನ್ನು ಆಡುತ್ತಾಳೆ. ಕೊಂಚಮಟ್ಟಿಗೆ ಈ ಜೋಡಿ ಉಳಿದ ಜೋಡಿ ಹಕ್ಕಿಗಳಿಗಿಂತ ಮುಕ್ತವಾಗಿ ಲೀಲಾಜಾಲವಾಗಿ ಹಾರಾಡುತ್ತದೆ.

## ಹಕ್ಕು

ಕೆಡುವ ಹಕ್ಕು<br>
ಈಗ ರಾಜಕಾರಣಿಗಳಿಗೆ<br>
ಮಾತ್ರವಲ್ಲ;<br>
ಶಿಕ್ಷಕರು, ಮಠಾಧೀಶರು,<br>
ಸಾಹಿತಿಗಳು ಮುಂತಾದವರಿಗೂ !

ಸಿ.ಪಿ.ಕೆ.<br>
ಮೈಸೂರು

'ದೃಷ್ಟಿ' ಕಾದಂಬರಿಯ ಶಕುಂತಲೆಯಂತೂ ನೈತಿಕತೆಯ, ಅದರ ಅನುಭವದ, ತೀವ್ರತೆಯ ಹೊಣೆಯನ್ನಾಗಲಿ ಹೊರಲು ಸಾಧ್ಯವಿಲ್ಲದೆ ಹೋದಾಗ, ''ಜೀವನಕ್ಕೆ ಕೇಂದ್ರವೇ ಇಲ್ಲ'' ಎಂಬ ನಿರ್ಣಯಕ್ಕೆ ಬಂದು ಕೊನೆಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದರಲ್ಲಿ ಒಂದು ಕಡೆ ಬರಹಗಾರನ ಬದುಕನ್ನು ಅನಾವರಣಗೊಳಿಸಿದರೆ ಇನ್ನೊಂದು ಕಡೆ ಅದೇ ಬರಹಗಾರ ಇನ್ನೊಬ್ಬನಿಗೆ ತನ್ನ ಪಾತ್ರಗಳ ಅಂತರಂಗವನ್ನು ಬಿಚ್ಚಿಡುತ್ತಾ, ಅದರ ವ್ಯಾಪ್ತಿಯನ್ನು ವಿಸ್ತರಿಸುತ್ತಾ ಹೋಗುತ್ತಾನೆ. ಶಕುಂತಲೆ ಸುರೇಶನನ್ನ ಮದುವೆಯಾದರೂ ಆಕೆಗೆ ಡಾ॥ ದೇವಧರನ ಮೇಲೆ ಪ್ರೀತಿ ಇರುತ್ತದೆ. ಕೊನೆಗೂ ದೇವಧರನ ಹಂಬಲ ಯಶಸ್ವಿಯಾಗುವುದಿಲ್ಲ. ಈ ಕಾದಂಬರಿಯ ಪ್ರಮುಖ ಪಾತ್ರಗಳಲ್ಲಿ ಇನ್ನಿಬ್ಬರು ಸುರೇಶ ಮತ್ತು ಗೌರಿ. ಗೌರಿ ಸುರೇಶನಿಂದ ಮೋಸ ಹೋಗಿ ಬಸಿರಾಗುತ್ತಾಳೆ. ಸಮಾಜದ ದೃಷ್ಟಿಯಿಂದ ಅನೈತಿಕ ಸಂಬಂಧವಾದರೂ ಡಾ॥ ದೇವಧರ ಅದನ್ನು ಸಹಜ ಎಂದು ಸ್ವೀಕರಿಸುತ್ತಾನೆ. 'ಸಂಬಂಧ' ಕಾದಂಬರಿ ಹೆಸರೇ ಸೂಚಿಸಿದ ಹಾಗೆ ಇದು ಶೀತಲಕುಮಾರ - ರಾಧಿಕಾ, ರಾಧಿಕಾ - ರಮೇಶ, ರಾಧಿಕಾ - ಶೇಖರ ಇವರ ಸಂಬಂಧಗಳ ಕಕ್ಷೆಯಲ್ಲಿಯೇ ಸುತ್ತುತ್ತದೆ. ಅಂತಿಮವಾಗಿ ನಮಗೆ ಮುಖ್ಯವಾಗಿರುವುದು ಶೀತಲಕುಮಾರ - ರಾಧಿಕಾರ ಸಂಬಂಧ. ರಾಧಿಕಾ ತನ್ನ ಮನಸ್ಸಿನ ಎಲ್ಲಾ ಪಲ್ಲಟಗಳನ್ನು ಬಿಚ್ಚಿ ಹೇಳುತ್ತಾಳೆ. ಗತಿಸಿದ ರಮೇಶ (ಗಂಡ) ಪ್ರಿಯಕರ ಶ್ರೀಧರ ಇವಳ ಪಾಲಿಗೆ ಇಲ್ಲವಾಗಿದ್ದಾರೆ. ರಾಧಿಕಾಳ ಅತಿಯಾದ ತಾಯ್ತನದ ತುಡಿತ ಶುದ್ಧ ಪ್ರೇಮದ ಹುಡುಕಾಟ ಸ್ಪಷ್ಟವಾಗಿ ಗೋಚರಿಸುತ್ತದೆ. ಶೀತಲಕುಮಾರ ರಾಧಿಕಾಳ ಸ್ನೇಹವನ್ನು ಹೇಗೆ ಸ್ವೀಕರಿಸಬೇಕೆಂದು ತಿಳಿಯದೆ ಗೊಂದಲಕ್ಕೆ ಸಿಕ್ಕಿ ಒದ್ದಾಡುತ್ತಾನೆ. ''ನೀನು ನನ್ನವಳು ರಾಧಾ ನನ್ನವಳು'' ಎಂದು ಕೊನೆಯಲ್ಲಿ, ''ರಾಧಿಕೆ ಇಲ್ಲದ ಮನೆ ಭಣ ಭಣವೆನಿಸತೊಡಗಿತು. ನನಗೊಬ್ಬ ಮಗಳಿದ್ದರೆ'' ಎಂಬ ಮಾತುಗಳಲ್ಲಿ ಅವನ ಮನದ ವಿಕ್ಷಿಪ್ತತೆಯನ್ನು ಸಮರ್ಥಿಸಬಹುದು. ಅಂತಿಮವಾಗಿ ರಾಧಿಕೆ ಶೀತಲಕುಮಾರ ಕಾದಂಬರಿಗಳ ನಾಯಕ ನಾಯಕಿಯರನ್ನು ಕುರಿತ ಮಾತುಗಳು ದೇಸಾಯಿಯವರ ಎಲ್ಲಾ ಕಾದಂಬರಿಗಳಿಗೂ ಅನ್ವಯಿಸುತ್ತವೆ. ''ನಿಮ್ಮ ನಾಯಕ ನಾಯಕಿಯರೆಲ್ಲ ಯಾವುದೇ ಭವಿಷ್ಯತ್ತಿನ ಕನಸಿನ ರಾಜ್ಯದ ವ್ಯಕ್ತಿಗಳಂತೆ ಕಾಣಿಸುತ್ತಾರೆ ಅಥವಾ ಪಾಶ್ಚಾತ್ಯರಂತೆ ತೋರುತ್ತಾರೆ.''

ವಿವಾಹದ ನಂತರ ಯುವಕರ ತಲ್ಲಣ, ತಹತಹ, ವಿಹ್ವಲತೆಗಳನ್ನು ನಾವು ಬೀಜ, ಅಂತರಾಳ, ಕಾದಂಬರಿಗಳಲ್ಲಿ ಪರಿಶೀಲಿಸಬಹುದು. ಬೀಜ ಕಾದಂಬರಿಯ ಶ್ರೇಯಾಂಸ ಕಿರಸ್ತಾನ ಸ್ತ್ರೀ ಲಿಝಿಯೊಡನೆ ಲಗ್ನವಾಗಿ ಕೃಷ್ಣಾಪುರ ಬಿಟ್ಟು ಮುಂಬಯಿಯಲ್ಲಿ ನೆಲೆನಿಲ್ಲುತ್ತಾನೆ. ಅಂತರಾಳದ ವಿಕ್ರಮ ಕೂಡ ಬ್ರಾಹ್ಮಣರ ಯಶೋದೆಯನ್ನು ವಿವಾಹವಾಗುತ್ತಾನೆ. ಇವರು ಕೂಡ ಗೌರೀಶ, ರಾಹುಲರಂತೆ ವಿವಾಹವಾದ ನಂತರ ಪ್ರೇಯಸಿಯರ ವಿಷಯದಲ್ಲಿ ವಿಶಿಷ್ಟವಾದ ಒತ್ತಡಗಳಿಗೆ ಸಿಕ್ಕಿಕೊಳ್ಳುವುದನ್ನು ನೋಡಬಹುದು. ವಿಕ್ರಮ ಯಶೋದೆಯನ್ನು ಮದುವೆಯಾದರೂ ಕೆಲಸದಾಕೆ ಅಶ್ವಿನಿಯೊಂದಿಗೆ ಕೂಡುತ್ತಾನೆ. ಆದರೆ ಅವನ ಮನಸ್ಸು ಮಾತ್ರ ಯಶೋದೆಯ ಮೇಲೆಯೇ ಇರುತ್ತದೆ. ಕೆಲವು ದಿನಗಳ ನಂತರ ವಿಕ್ರಮನ ಮನಸ್ಸು ಅಶ್ವಿನಿ ಕಡೆ ತಿರುಗುತ್ತದೆ. ಈ ನೈತಿಕ - ಅನೈತಿಕ ಎಂಬುದು ಸಂಬಂಧಗಳ ಪಾಪಪ್ರಜ್ಞೆ ಎಂದು ಅವನಿಗೆ ಗೊತ್ತಿದ್ದರೂ ಸುಮ್ಮನಿರುತ್ತಾನೆ. ತನ್ನ ಮಕ್ಕಳನ್ನು ಸ್ವತಂತ್ರದಿಂದ ಬೆಳೆಸುತ್ತಾನೆ. ಅಸ್ತಿತ್ವವಾದಿಯಾಗಿಯೇ ಇರುತ್ತಾನೆ. ಆದರೆ ವಿಕ್ರಮ-ಯಶೋದ ಇಬ್ಬರೂ ದಾಂಪತ್ಯದಲ್ಲಿ ಸುಖವಾಗಿದ್ದರು ಎಂಬುದಕ್ಕೆ ಪ್ರತಿಕ್ರಿಯೆ ಸೂಚಿಸುವುದು ಕಷ್ಟ. ಬಹುಶಃ ದಾಂಪತ್ಯ ವಿರಸವು ಕಾರಂತರನ್ನು ಕಾಡಿದಂತೆ ಶಾಂತಿನಾಥರನ್ನು ಕಾಡಿರಬೇಕು. ಕಾರಂತರು ಇದನ್ನು ಪಕ್ವಗೊಂಡ ಮನಸ್ಸುಗಳ ಮೂಲಕವೇ ಬಹಳ ಸೂಕ್ಷ್ಮವಾಗಿ ಮುಖಾಮುಖಿಯಾಗಿಸುತ್ತಾರೆ. ಇದಕ್ಕೆ ತದ್ವಿರುದ್ಧವಾಗಿ ಶಾಂತಿನಾಥರು ಪ್ರತೀಕಾರ, ವಿಕ್ಷಿಪ್ತ ಮನಸ್ಸುಗಳ ಮೂಲಕ ನೇರವಾಗಿ ಎದುರುಬದಿರಾಗಿಸುತ್ತಾರೆ. ಇವರನ್ನು ಕಾಡುವ ಅತ್ಯಂತ ನಿಬಿಡವಾದ ಪ್ರಶ್ನೆಗಳೆಂದರೆ ನೈತಿಕ-ಅನೈತಿಕ ಸಂಬಂಧಗಳು. ಇವುಗಳ ಪಾತಳಿಯ ಮೇಲೆ ಬದುಕನ್ನು ಶೋಧಿಸುತ್ತಾರೆ. ಶ್ರೇಯಾಂಸನಿಗಂತೂ ತನ್ನ ಬೇರುಗಳಿಂದ ಕಳಚಿಕೊಳ್ಳುವುದಕ್ಕೆ ಸಾಧ್ಯವೇ ಆಗುವುದಿಲ್ಲ. ಇವನ ಮನಸ್ಸನ್ನು ರೇವತಿ ಸಂಪೂರ್ಣ ಆವರಿಸಿಕೊಳ್ಳುತ್ತಾಳೆ. ಎಲ್ಲಾ ಸಂಸ್ಕೃತಿಗಳೂ ಎಲ್ಲಾ ನಾಗರಿಕತೆಗಳಿಂದಲೂ ಬೆಳೆದ ಮುಂಬಯಿನಂತಹ ನಗರದಲ್ಲಿ ಶ್ರೇಯಾಂಸನ ವೈಯಕ್ತಿಕ ಬದುಕು ಚಂಚಲವಾಗಿಬಿಡುತ್ತದೆ. ಸತ್ವಯುತ ಅಸ್ತಿತ್ವಕ್ಕೆ ಒದ್ದಾಡುತ್ತಾನೆ. ಇದಕ್ಕೆ ನಿದರ್ಶನವಾಗಿ ಕಿರಸ್ತಾನ ಸ್ತ್ರೀಯನ್ನು ವಿವಾಹವಾಗಿದ್ದರ ಬಗ್ಗೆ ಮತ್ತು ಲಿಝಿಯೊಡನೆಯ ದಾಂಪತ್ಯದ ಬಗ್ಗೆ ತನ್ನ ಮಗಳೊಡನೆ ನಡೆಸುವ ಸಂಭಾಷಣೆಯೇ ಸಾಕ್ಷಿ.

ಶ್ರೇಯಾಂಸ ತನ್ನ ಮಗಳ ಮೂಲಕವೇ ಅಂತರಂಗ ತುಡಿತಗಳನ್ನು ಬಿಚ್ಚುವುದು, ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಆದ್ದರಿಂದಲೇ ರೇವತಿ ಇವನಿಗೆ ಇಷ್ಟವಾಗುತ್ತಾಳೆ. ಯಶೋದೆಯಾಗಲಿ (ಅಂತರಾಳ) ಲಿಝಿಯಾಗಲೀ (ಬೀಜ) ವಿಕ್ರಮ ಮತ್ತು ಶ್ರೇಯಾಂಸರ ವೈಯಕ್ತಿಕ ತುಯ್ತಗಳನ್ನ ಅರಿಯದೇ ಹೋಗುತ್ತಾರೆ. ಇವರಿಗೆ ತಮ್ಮ ತಮ್ಮ ಸ್ವಾಯತ್ತತೆ ಪ್ರಧಾನವಾಗುತ್ತದೆ. ಶ್ರೇಯಾಂಸನ ಮೇಲಿನ ಕೊನೆಯ ಮಾತನ್ನು ಗಮನಿಸಿದರೆ ನನ್ನ ಮಾತಿನ ಯಥಾರ್ಥತೆ ಹೊಳೆದೀತು. ತನ್ನ ತಂದೆಯ ಸಾವಿನ ನಂತರ ಕೃಷ್ಣಾಪುರದಲ್ಲಿಯೇ ಉಳಿದುಬಿಡುವುದು ಲಿಝಿಯ ಅಸಹನೆಯಿಂದ ಹಾಗೂ ಅವಳ ಸ್ವೇಚ್ಛಾಚಾರದಿಂದ ಎಂದರೆ ತಪ್ಪಾಗುವುದಿಲ್ಲ. ಅವನ ನಿರ್ಧಾರಗಳ ಬಗ್ಗೆ ಡಾ॥ ಎಚ್. ಎಸ್. ರಾಘವೇಂದ್ರರಾವ್ ಅವರು ತಮ್ಮ ಒಂದು ಲೇಖನದಲ್ಲಿ ಮೂರು ಮುಖ್ಯವಾದ ತೀರ್ಮಾನಗಳನ್ನು ದಾಖಲಿಸುತ್ತಾರೆ. ಶ್ರೇಯಾಂಸನ ದೃಷ್ಟಿಯಿಂದ ಎರಡು ತೀರ್ಮಾನಗಳು ಮುಖ್ಯವಾಗುತ್ತವೆ.

೧. ಶ್ರೇಯಾಂಸನು ಕೃಷ್ಣಾಪುರದಲ್ಲಿಯೇ ಉಳಿದಿದ್ದಕ್ಕೆ ಸಾಮಾಜಿಕ - ರಾಜಕೀಯ ಪ್ರೇರಣೆಗಳಿಗಿಂತ ಆಂತರಂಗಿಕವಾದ ವೈಯಕ್ತಿಕವಾದ ತುಡಿತಗಳೇ ಕಾರಣ.

೨. ರೇವತಿಯನ್ನು ಕುರಿತ ಒಲವು ಪ್ರತಿಭಟನೆಯನ್ನು ಎದುರಿಸಲೇಬೇಕೆಂಬ ಹಟಮಾರಿತನ, ತನ್ನ ಕರ್ತೃತ್ವ ಶಕ್ತಿಗೆ ಹೊಸ ಅವಕಾಶಗಳು ದೊರಕಬಹುದೆಂಬ ನಿರೀಕ್ಷೆ, ಲಿಝಿಯೊಂದಿಗೆ ಹೊಸದಾಗಿ ಬೆಳೆಸಿಕೊಳ್ಳುವ ಘರ್ಷಣೆ ಇವು ಅಂತಹ ತುಡಿತಗಳಲ್ಲಿ ಮುಖ್ಯವಾದವು.

ವಿಕ್ರಮ ಕೂಡ ಇದೇ ನಿರ್ಧಾರಕ್ಕೆ ಬರುತ್ತಾನೆ. ''ನನ್ನ ಮೇಲೆ ಹಲವಾರು ವಿಚಾರಸರಣಿಗಳು ತಮ್ಮ ಪ್ರಭಾವ ಬೀರಿದ್ದರೂ ನಾನು ಮುಖ್ಯವಾಗಿ ಜೀವಿಸುವುದು ಬುದ್ಧಿಯ ಮತ್ತು ಸಂವೇದನೆಯ ಪಾತಳಿಯ ಮೇಲೆ.''

ಇನ್ನು ಇವರ ಕಾದಂಬರಿಗಳ ತಂತ್ರವನ್ನು ಕುರಿತಂತೆ ಈಗಾಗಲೇ ಪ್ರಮುಖ ವಿಮರ್ಶಕರು ವಿಸ್ತಾರವಾಗಿ ಚರ್ಚೆ ಮಾಡಿರುವುದರಿಂದ ಆ ಬಗ್ಗೆ ಚರ್ಚೆ ಮಾಡುವುದು ಅನಗತ್ಯ ಎಂದು ತಿಳಿದಿದ್ದೇನೆ. ಸಮಾರೋಪವಾಗಿ ಕೆಲವು ಮಾತುಗಳನ್ನು ಹೇಳಬಹುದು.

ಇವರ ಒಟ್ಟು ಕಾದಂಬರಿಗಳಲ್ಲಿ ಸಂವೇದನೆಯ ವಿದಳನ ಪ್ರಕ್ರಿಯೆಯ ಸ್ವರೂಪವನ್ನು ಕಾಣಬಹುದು. ಹಾಗೆಯೇ ಪ್ರೀತಿಯ ವಿಘಟನೆಯ ಸ್ವರೂಪವನ್ನೂ ನೋಡಬಹುದು. ಇವರ ನಾಯಕರೆಲ್ಲಾ ಅಖಂಡ ಪ್ರೀತಿಯ ಹುಡುಕಾಟದಲ್ಲಿ ತೊಡಗಿರುತ್ತಾರೆ. ಅದು ನಮಗೆ ಸಂವೇದನೆಯ ದೃಷ್ಟಿಯಿಂದ ಪ್ರಜ್ಞಾಪೂರ್ವಕವಾಗಿಯೇ ಗೋಚರಿಸುತ್ತದೆ. ಗೌರೀಶ ಆಗಲೀ, ರಾಹುಲ, ವಿಕ್ರಮರಾಗಲೀ ಇವರೆಲ್ಲಾ ಕೊನೆಯ ಹಂತದಲ್ಲಿ ಪ್ರಕ್ಷುಬ್ಧತೆಯಿಂದ ಮಾಗುವಿಕೆಯೆಡೆಗೆ ಮುಖಮಾಡುವುದನ್ನು ನೋಡಬಹುದು. ಈ ಮಾತು ಶಾಂತಿನಾಥರ ಪಾತ್ರಗಳ ಮಟ್ಟಿಗೆ ಎಷ್ಟು ವಾಸ್ತವವೋ ಇವರ ಕಾದಂಬರಿಗಳ ಬೆಳವಣಿಗೆಯ ಮಟ್ಟಿಗೆ ಅಷ್ಟೇ ವಾಸ್ತವವಾದುದು. ಒಟ್ಟಿನಲ್ಲಿ ನವ್ಯ ಸಾಹಿತ್ಯದ ಎಲ್ಲ ಅಂಶಗಳೂ ಇವರ ಬರಹಗಳಲ್ಲಿ ಅಡಕವಾಗಿವೆ. ಶಾಂತಿನಾಥರು ಇವುಗಳಿಗೆ ತಮ್ಮನ್ನು ಸೀಮಿತಗೊಳಿಸಿಕೊಂಡಿದ್ದು ಸಾಧನೆಯೂ ಹೌದು, ಮಿತಿಯೂ ಹೌದು. ಆದರೆ ಅವರು ಕನ್ನಡದ ನವ್ಯಕ್ಕೆ ಗಟ್ಟಿಯಾದ ದನಿ ಸೇರಿಸಿದವರು ಎಂಬುದನ್ನು ನಾವು ಮರೆಯಬಾರದು.

ಎನ್. ಸುರೇಶ್ ನಾಗಲಮಡಿಕೆ<br>
ಪಾವಗಡ

# ಪರಿಸರ ಮತ್ತು ಶಕ್ತಿ

ಜಿ. ಎನ್. ಹೆಗಡೆ ಉಳ್ಳಿಕೊಪ್ಪ



ಶಕ್ತಿ ಉತ್ಪಾದನೆಯ ಕಾರ್ಯವನ್ನು ಸ್ವತಂತ್ರವಾಗಿ ಪರಿಶೀಲಿಸಲು ಸಾಧ್ಯವಾಗದು. ಯಾವುದೇ ಶಕ್ತಿ ಉತ್ಪಾದನೆಯ ಯೋಜನೆಯನ್ನು ಪೂರ್ಣಗೊಳಿಸುವ ಮೊದಲು ಪರಿಸರದ ಮೇಲೆ ಅಂತಹ ಯೋಜನೆಯಿಂದಾಗುವ ಪರಿಣಾಮವನ್ನು ಕೂಲಂಕಷವಾಗಿ ಪರೀಕ್ಷಿಸಬೇಕು. ಆದರೆ ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ಶಕ್ತಿ ಮೂಲಗಳೆರಡನ್ನೂ ಸೂಕ್ತ ಪ್ರಮಾಣದಲ್ಲಿ ಬಳಸಿಕೊಂಡು ಪರಿಸರದ ಮೇಲೆ ಕನಿಷ್ಠ ಮಟ್ಟದ ಪರಿಣಾಮವನ್ನು ಉಂಟುಮಾಡುವಂತಹ ಯೋಜನೆಯನ್ನು ರೂಪಿಸುವುದು ಸಾಧ್ಯವಿದೆ. ಅಭಿವೃದ್ಧಿಗೆ ಅತ್ಯಂತ ಅವಶ್ಯವಾದ ಶಕ್ತಿಯನ್ನು ಉತ್ಪಾದಿಸುವ ಯೋಜನೆಯಲ್ಲಿ ಪರಿಸರದ ಮೇಲೆ ಉಂಟಾಗುವ ದುಷ್ಪರಿಣಾಮವನ್ನು ಗಣನೆಗೆ ತೆಗೆದುಕೊಳ್ಳದಿದ್ದರೆ ಶಕ್ತಿಯ ಉತ್ಪಾದನೆಯಿಂದ ಉಂಟಾಗುವ ಅಭಿವೃದ್ಧಿಯನ್ನು ಪರಿಸರದ ನಾಶ ಸಂಪೂರ್ಣವಾಗಿ ಕಬಳಿಸಬಹುದಾಗಿದೆ.

ಕೈಗಾರಿಕೆಗಳು ಮತ್ತು ಉದ್ಯಮಗಳು ಅಭಿವೃದ್ಧಿ ಹೊಂದುತ್ತಿರುವಂತೆ ಒಂದಿಲ್ಲೊಂದು ಶಕ್ತಿಗೆ ಬೇಡಿಕೆ ಹೆಚ್ಚುತ್ತಿದೆ. ಇತ್ತೀಚಿನವರೆಗೆ ಶಕ್ತಿಯ ಉತ್ಪಾದನೆಯನ್ನು ಕುರಿತು ಯೋಜನೆಗಳನ್ನು ರೂಪಿಸುವಾಗ ಪರಿಸರದ ಮೇಲೆ ಅದರ ಪ್ರಭಾವವನ್ನು ಅಷ್ಟೊಂದು ಚಿಂತಿಸಲಾಗುತ್ತಿರಲಿಲ್ಲ. ಆದರೆ ಈ ಅಂಶವು ಅತ್ಯಂತ ಗಣನೀಯವಾದುದು ಎಂದು ಈಗೀಗ ಮನಗಾಣಲಾಗಿದೆ. ಈಗ ೧೫-೧೮ ವರ್ಷಗಳಲ್ಲಿ ಪರಿಸರದ ಅವನತಿಯ ಬಗ್ಗೆ ಉಂಟಾಗಿರುವ ಜನಜಾಗೃತಿ, ಶಕ್ತಿ ಸಂಬಂಧಿತ ಯೋಜನೆಗಳನ್ನು ರೂಪಿಸುವಾಗ ಪರಿಸರದ ಬಗ್ಗೆ ಸಾಕಷ್ಟು ಕಾಳಜಿ ವಹಿಸುವಂತೆ ಯೋಜಕರನ್ನು ಒತ್ತಾಯಿಸುತ್ತ ಕೇರಳದ ಮೌನಕಣಿವೆ ಯೋಜನೆ, ಮಧ್ಯಪ್ರದೇಶದ ಭೋಡಘಾಟ್ ಮತ್ತು ಕರ್ನಾಟಕದಲ್ಲಿನ ಕೈಗಾ ಅಣುಸ್ಥಾವರ ಮುಂತಾದ ಯೋಜನೆಗಳಿಗೆ ಸಾರ್ವಜನಿಕರಿಂದ, ಪರಿಸರವಾದಿಗಳಿಂದ ದೊರೆತ ಉಗ್ರ ಪ್ರತಿಕ್ರಿಯೆ ಪರಿಸರದ ಜಾಗೃತಿಗೆ ಪ್ರಬಲ ಸಾಕ್ಷಿಯಾಗಿದೆ.

ಮೊದಲನೆಯದಾಗಿ, ಪರಿಸರ ಮತ್ತು ಶಕ್ತಿ ನಡುವಿನ ಸಂಬಂಧ ಈ ಹಿನ್ನೆಲೆಯಲ್ಲಿ ಪರಿಶೀಲಿಸಬೇಕಾಗಿರುವದು ಉರುವಲಿನ ಸಮಸ್ಯೆ. ನಮ್ಮ ದೇಶದ ಶೇಕಡ ೭೦ರಷ್ಟು ಜನ ಹಳ್ಳಿಗಳಲ್ಲಿ ವಾಸಿಸುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ಶಕ್ತಿಯ ಬಳಕೆಯಿಂದಾಗುವ ಒಂದು ಮುಖ್ಯ ಚಟುವಟಿಕೆ ಎಂದರೆ ಅಡಿಗೆ ಮಾಡುವದು.

ಇದಕ್ಕೆ ಬೇಕಾಗುವ ಸೌದೆಯ ಪೂರೈಕೆಗೆ ನಮ್ಮ ಗ್ರಾಮಸ್ಥರಿಗಿರುವ ಏಕೈಕ ಮಾರ್ಗ ಎಂದರೆ ಹತ್ತಿರದ ಬೆಟ್ಟ ಅಥವಾ ಕಾಡು. ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ವ್ಯಯವಾಗುವ ಒಟ್ಟು ಉರುವಲಿನ ಶೇಕಡ ೮೫ ಭಾಗ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ಅಡುಗೆಗಾಗಿ ಬಳಸಲಾಗುತ್ತದೆ. ಹಿಂದಿನ ಕಾಲದಲ್ಲಿ ಅಂದರೆ ದೇಶದ ಜನಸಂಖ್ಯೆ ಹತೋಟಿಯಲ್ಲಿದ್ದು, ಅರಣ್ಯದ ವಿಸ್ತಾರ ಸಾಕಷ್ಟಿದ್ದಾಗ ಉರುವಲಿಗಾಗಿ ಸೌದೆಯ ಬಳಕೆಯ ಪರಿಮಾಣ ಗಣನೀಯವಾಗಿರಲಿಲ್ಲ. ಇತ್ತೀಚೆಗೆ ಜನಸಂಖ್ಯೆಯೂ ಹೆಚ್ಚಾಗಿ, ಅರಣ್ಯೀಕರಣ ಚಟುವಟಿಕೆಗಳು ಕುಂಠಿತವಾದಂತೆ ಸೌದೆಯ ಬಳಕೆ ಅರಣ್ಯ ಪ್ರದೇಶವನ್ನು ಸಾಕಷ್ಟು ಮಟ್ಟಿಗೆ ನಾಶಮಾಡಿ ಪರಿಸರದ ಮೇಲೆ ಗಂಭೀರ ಪರಿಣಾಮ ಉಂಟಾಗುತ್ತಿದೆ. ಇಂದಿನ ಭೂ ಸವೆತ, ಅತಿವೃಷ್ಟಿ ಮತ್ತು ಅನಾವೃಷ್ಟಿಯಿಂದಾಗುತ್ತಿರುವ ಹಾವಳಿಗೆ ಸೌದೆ ಮತ್ತು ಮರದ ಉತ್ಪನ್ನಗಳ ಅತಿಯಾದ ಬಳಕೆ ಬಹುಮಟ್ಟಿಗೆ ಕಾರಣ ಎನ್ನಬಹುದು.

ಅಡುಗೆಗೆ ಸೌದೆ ಬಳಕೆಯನ್ನು ಸಂಪೂರ್ಣವಾಗಿ ನಿಲ್ಲಿಸುವುದು ಸಾಧ್ಯವಿಲ್ಲ ಎಂಬ ಅಂಶ ಸರ್ವವಿದಿತ. ಆದರೆ ಸೌದೆ ಬಳಕೆಯನ್ನು ಕನಿಷ್ಠ ಪ್ರಮಾಣಕ್ಕೆ ತರಲು ಸಮಗಿರುವ ಮಾರ್ಗವೇ ಸುಧಾರಿತ ಮತ್ತು ದಕ್ಷ ಒಲೆಗಳನ್ನು ರೂಪಿಸಿ ಬಳಕೆಗೆ ತರುವದು ಮತ್ತು ಪರ್ಯಾಯ ಶಕ್ತಿ ಮೂಲಗಳನ್ನು ಸಾರ್ವಜನಿಕ ಬಳಕೆಗಾಗಿ ಒದಗಿಸುವದು. ಈ ದಿಶೆಯಲ್ಲಿ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರಜ್ಞಾನ ಮಂಡಳಿ ಮತ್ತು ಅಸ್ತ್ರ ಸಂಸ್ಥೆಯ ಸಹಯೋಗವು 'ಅಸ್ತ್ರ ಒಲೆ' ಎಂದೇ ಜನಪ್ರಿಯವಾಗಿರುವ ಸುಧಾರಿತ ಸೌದೆ ಒಲೆಯನ್ನು ರೂಪಿಸಿದ್ದು, ಇದು ಈಗಾಗಲೇ ಜನಪ್ರಿಯಗೊಂಡಿದೆ. ಸುಧಾರಿತ ಒಲೆಯ ರಾಷ್ಟ್ರೀಯ ಕಾರ್ಯಕ್ರಮದ ಅಂಗವಾಗಿ ಗ್ರಾಮೀಣ ಅಭಿವೃದ್ಧಿ ಇಲಾಖೆಯು ಈಗಾಗಲೇ ರಾಜ್ಯಾದ್ಯಂತ ೩,೦೦,೦೦೦ಕ್ಕೂ ಹೆಚ್ಚು ಅಸ್ತ್ರ ಒಲೆಗಳನ್ನು ರೂಪಿಸಿದೆ. ಈ ಪೈಕಿ ಶೇಕಡ ೭೦ರಷ್ಟು ಒಲೆಗಳು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತಿವೆ. ಅಸ್ತ್ರ ಒಲೆಗಳಿಂದ ವರ್ಷಕ್ಕೆ ೫೦,೦೦೦ ಟನ್‌ಗಳಷ್ಟು ಸೌದೆ ಉಳಿತಾಯವಾಗುತ್ತದೆ ಎಂಬುದು ಗಮನಾರ್ಹ ಸಂಗತಿ. ಸೌದೆಯ ಉಳಿತಾಯವಲ್ಲದೆ ಅಡಿಗೆಮನೆ ನಿರ್ಮಲ ವಾತಾವರಣ, ಗೃಹಿಣಿಯ ಆರೋಗ್ಯ ಇವು ಇತರ ಅನುಕೂಲಗಳಾಗಿವೆ. ಹೀಗಾಗಿ ಈ ಯೋಜನೆಯು ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯತಿಗಳ ಮೂಲಕ ರಾಜ್ಯದ ಮನೆಮನೆಗೂ ವಿಸ್ತರಿಸಲು ಅರ್ಹವಾಗಿದೆ. ನಗರ ಮತ್ತು ಪಟ್ಟಣಗಳ ಅವಶ್ಯಕತೆಯನ್ನು ಪೂರೈಸಲು ಕೆ.ಎಸ್.ಸಿ.ಎಸ್.ಟಿ ಮತ್ತು ಅಸ್ತ್ರ ಸಂಸ್ಥೆಗಳ ಸಹಯೋಗವು ಶೇಕಡ ೪೦ರಷ್ಟು ದಕ್ಷತೆಯುಳ್ಳ ಒಂದು ಕಡೆಯಿಂದ ಮತ್ತೊಂದು ಕಡೆಗೆ ಒಯ್ಯಬಹುದಾದ ಲೋಹದ ಒಲೆಯನ್ನು ರೂಪಿಸಿ ಅದಕ್ಕೆ 'ಸ್ವಸ್ತಿ' ಎಂದು ಕರೆದಿದೆ. ಈಗಾಗಲೇ ಎಲ್ಲಾ ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸೌದೆಯ ಬದಲಾಗಿ ಎಲ್.ಪಿ.ಜಿ. ಗ್ಯಾಸ್ ಬಳಕೆಯಲ್ಲಿದೆ.

ಸೌದೆ ಕೇವಲ ಅಡುಗೆಗೆ ಮಾತ್ರವಲ್ಲದೆ ಇಟ್ಟಿಗೆ, ಹೆಂಚು ಮುಂತಾದವುಗಳನ್ನು ಸುಡಲು, ಅಡಿಕೆ ಬೇಯಿಸಲು, ಆಲೇಮನೆ, ಫಲಹಾರ ಮಂದಿರಗಳಲ್ಲಿ, ವಿದ್ಯಾರ್ಥಿನಿಲಯಗಳು ಮುಂತಾದ ಕಡೆಗಳಲ್ಲಿ ಭಾರಿ ಪ್ರಮಾಣದಲ್ಲಿ ವ್ಯಯವಾಗುತ್ತದೆ. ಈ ಸ್ಥಳಗಳಲ್ಲಿಯೂ ಸಹ ದೊಡ್ಡ ಅಳತೆಯ ಮಣ್ಣಿನ ಒಲೆಗಳನ್ನು ರಚಿಸಿ ಬಳಸುವುದರ ಮೂಲಕ ಸೌದೆಯ ಬಳಕೆಯನ್ನು ಗಣನೀಯವಾಗಿ ಕಡಿಮೆ ಮಾಡಬಹುದು. ಈ ದಿಸೆಯಲ್ಲಿ ಇಂತಹ ೫೦ ಒಲೆಗಳನ್ನು ರಾಜ್ಯದಾದ್ಯಂತ ಪ್ರಾತ್ಯಕ್ಷಿಕೆಗಾಗಿ ರಚಿಸುವ ಯೋಜನೆಯನ್ನು ಕೆ.ಎಸ್.ಸಿ.ಎಸ್.ಟಿ. ಈಗಾಗಲೇ ಕೈಗೊಂಡಿದೆ. ಬೆಂಗಳೂರಿನ ಶ್ರೀ ಜಯಚಾಮರಾಜೇಂದ್ರ ಪಾಲಿಟೆಕ್ನಿಕ್‌ನಲ್ಲಿ ರೂ. ೨,೫೦೦ಗಳ ವೆಚ್ಚದಲ್ಲಿ ರಚಿಸಲಾದ ಒಂದು ದೊಡ್ಡ ಮಣ್ಣಿನ ಒಲೆಯು ಈಗಾಗಲೇ ಪ್ರತಿ ತಿಂಗಳು ರೂ. ೬೦೦ಕ್ಕೂ ಹೆಚ್ಚು ಸೌದೆಯ ಉಳಿತಾಯ ಸಾಧಿಸಿದೆ.

ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಇಂಧನಕ್ಕಾಗಿ ಬೆರಣಿಯ ರೂಪದಲ್ಲಿ ಸಗಣಿಯನ್ನು ಬಳಸಲಾಗುತ್ತಿದೆ. ಇದರಿಂದ ವಾಯುಮಾಲಿನ್ಯ ಉಂಟಾಗುವದಲ್ಲದೆ ಮಣ್ಣಿಗೆ ಬೇಕಾದ ಪೌಷ್ಟಿಕಾಂಶಗಳು ಪೋಲಾಗುತ್ತವೆ. ಇದರ ಬದಲಾಗಿ ಸಗಣಿಯನ್ನು ಜೈವಿಕ ಅನಿಲದ ಉತ್ಪಾದನೆಗೆ ಬಳಸಿದರೆ ಅನಿಲ ರೂಪದ ಇಂಧನ ಪ್ರಾಪ್ತಿಯಾಗುವದಲ್ಲದೆ ಚರಟವನ್ನು ಉತ್ತಮ ಗೊಬ್ಬರವಾಗಿ ಬಳಸಲು ಸಾಧ್ಯವಿದೆ. ಈಗಾಗಲೇ ರಾಜ್ಯದಲ್ಲಿ ಜೈವಿಕ ಅನಿಲ ಘಟಕಗಳು ಸಾಕಷ್ಟು ಸಂಖ್ಯೆಯಲ್ಲಿ ಕಾರ್ಯಾಚರಣೆಯಲ್ಲಿದ್ದು ಇವುಗಳ ಸಂಖ್ಯೆಯನ್ನು ಮತ್ತಷ್ಟು ಹೆಚ್ಚಿಸಲು ಕ್ರಮ ಕೈಗೊಳ್ಳಬೇಕಾಗಿದೆ.

ರಾಜ್ಯದಲ್ಲಿ ತೈಲ ಮತ್ತು ಕಲ್ಲಿದ್ದಲಿನ ನಿಕ್ಷೇಪಗಳು ಇಲ್ಲದೇ ಇರುವದರಿಂದ ವಿದ್ಯುತ್ ಶಕ್ತಿಯ ಉತ್ಪಾದನೆಗಾಗಿ

೫೭ನೇ ಪುಟಕ್ಕೆ

# ಸಾಹಿತ್ಯ ವಿಮರ್ಶೆಯ ಕಾರ್ಯ

ಆಧುನಿಕ ಯುಗದಲ್ಲಿ ಸಾಹಿತ್ಯ ವಿಮರ್ಶೆಯು ಬಹುಮುಖ್ಯವಾದ ಸಾಹಿತ್ಯ ಸಂಕಥನವಾಗಿದೆ. ಆಧುನಿಕ ಯೂರೋಪಿನ ವಿಮರ್ಶೆಯು ಹುಟ್ಟಿರುವುದು ಪ್ರಭುತ್ವದ ಸರ್ವೋಚ್ಚ ಅಧಿಕಾರವನ್ನು ಪ್ರಶ್ನಿಸುವುದರ ಮೂಲಕ. ಭಾರತದಲ್ಲಿ ಸಾಹಿತ್ಯ ವಿಮರ್ಶೆಯು ಹುಟ್ಟಿರುವುದು ವಸಾಹತುಶಾಹಿ ಪ್ರಭುತ್ವದ ಸಂದರ್ಭದಲ್ಲಿ. ಉದಾರವಾದಿ ಚಿಂತನೆಯ ಮಾನವತಾವಾದದ ಚಿಂತನೆ ಮತ್ತು ಸ್ವ-ಸಂಸ್ಕೃತಿಯ ಆರಾಧನೆ ಹಾಗೂ ಪಶ್ಚಿಮದ ಸಾಹಿತ್ಯಕ ರೂಪಗಳೊಂದಿಗೆ ವಿಶಿಷ್ಟ ಸಂವಾದದ ಕಾರಣದಿಂದ (ವಸಾಹತು ಪ್ರಭುತ್ವದ ಸಂದರ್ಭ) ಸಾಹಿತ್ಯ ವಿಮರ್ಶೆಯು ಹುಟ್ಟಿಕೊಂಡಿತು. ನಮ್ಮಲ್ಲಿ ಅಲ್ಲಿಯತನಕ ಸಾಹಿತ್ಯ ವಿಮರ್ಶೆಯೆಂಬ ಪ್ರಕಾರವು ಇದ್ದಿರಲಿಲ್ಲ. ಯೂರೋಪಿನಲ್ಲಿಯೂ ಹದಿನೇಳು ಮತ್ತು ಹದಿನೆಂಟನೆಯ ಶತಮಾನವು ಸಾಹಿತ್ಯ ವಿಮರ್ಶೆಯ ದೃಷ್ಟಿಯಿಂದ ಒಂದು ಪ್ರಮುಖ ಕಾಲಘಟ್ಟ. ಈ ಕಾಲಘಟ್ಟಗಳ ಮೇಲೆ ಯೂರೋಪಿನ ಪುನರುಜ್ಜೀವನ ಕಾಲಘಟ್ಟ (enlightenment)ದ ಪ್ರಭಾವವಿದೆ. ಎರಡನೆಯದಾಗಿ, ಯೂರೋಪಿನಲ್ಲಿ ಸಾಹಿತ್ಯ ವಿಮರ್ಶೆಯು ಹುಟ್ಟುವಾಗ ಸಾಹಿತ್ಯದ ದೃಷ್ಟಿಯಿಂದ ಒಂದು ಅವಕಾಶವು ನಿರ್ಮಾಣವಾಗಿತ್ತು. ಮೂರನೆಯದು, ಪುನರುಜ್ಜೀವನ ಕಾಲಘಟ್ಟವು ಜಗತ್ತನ್ನು ಬೇರೆ ದೃಷ್ಟಿಯಲ್ಲಿ ನೋಡುವ ಕ್ರಮವನ್ನು ರೂಪಿಸಿತು. ಸರಳವಾಗಿ ಹೇಳಬೇಕೆಂದರೆ, ಪುನರುಜ್ಜೀವನ ಕಾಲಘಟ್ಟದ ತರುವಾಯ ವೈಜ್ಞಾನಿಕ ಮನೋಧರ್ಮ, ಪ್ರಗತಿಪರತೆ, ನಿರೀಶ್ವರವಾದ, ವಸ್ತುನಿಷ್ಠತೆ ಮುಂತಾದ ಪದಗಳು ಹೆಚ್ಚಾಗಿ ಚಾಲ್ತಿಗೆ ಬಂದವು. ಅಷ್ಟೇ ಅಲ್ಲ–ಅದಕ್ಕಿಂತ ಹೆಚ್ಚಾಗಿ ಒಂದು ನಿರ್ದಿಷ್ಟ ಸಾಮಾಜಿಕ ವರ್ಗವು ಅಲ್ಲಿ ಉದಯವಾಯಿತು. ಈ ವಿಶಿಷ್ಟ ಸಾಮಾಜಿಕ ವರ್ಗವು ಉತ್ಪಾದನೆಯ ಸಂಬಂಧದೊಂದಿಗೆ ತನ್ನನ್ನು ತಾನು ನೇರವಾಗಿ ಗುರುತಿಸಿಕೊಳ್ಳುತ್ತಿರಲಿಲ್ಲ. ಇದರ ಪರಿಣಾಮವೆಂದರೆ ಸಾಹಿತ್ಯ ಸಂವಾದದಲ್ಲಿ ರೂಪುಗೊಂಡ ಒಂದು ಖಾಲಿಯಾದ ಜಾಗವನ್ನು ಸಾಹಿತ್ಯದಲ್ಲಿ ರೂಪುಗೊಳಿಸಬೇಕಾಗಿತ್ತು. ಇದರ ಪರಿಣಾಮವೇ – 'ಸಾಹಿತ್ಯ ವಿಮರ್ಶೆ'. ಇದರಲ್ಲಿ ಯೂರೋಪಿನ ಬೂರ್ಜ್ವಾಗಳಿಂದ 'ವಿಶಿಷ್ಟ ಪದ'ಗಳು ಚಾಲ್ತಿಗೆ ಬಂದವು. 'ಕೃತಿಯ ಬಗೆಗೆ ಒಂದು ವಸ್ತುನಿಷ್ಠ ತೀರ್ಮಾನ' 'ಕೃತಿಯ ಬಗೆಗೆ ಒಂದು ಬಗೆಯ ಸಂವಾದ'ವೆಂಬಂಥ ಹೇಳಿಕೆಗಳಿಗೂ ಪುನರುಜ್ಜೀವನ ಕಾಲಘಟ್ಟದ ಜೀವನಕ್ರಮದ ಸ್ಥಿತ್ಯಂತರಕ್ಕೂ ಒಂದು ಆಂತರಿಕ ಸಂಬಂಧವಿದೆ.

ನಮ್ಮಲ್ಲಿಯೂ ಸಾಹಿತ್ಯ ವಿಮರ್ಶೆಯು ಇದ್ದಕ್ಕಿದ್ದಂತೆ ಹುಟ್ಟಿಕೊಂಡ ಒಂದು ಸಾಹಿತ್ಯಕ ಪ್ರಕ್ರಿಯೆಯಲ್ಲ. ಅದಕ್ಕೂ ಚಾರಿತ್ರಿಕ ಕಾರಣಗಳಿವೆ. ನಮ್ಮಲ್ಲಿಯೂ ಮುದ್ರಣ ಯಂತ್ರದ ಸ್ಥಾಪನೆಯಿಂದಾಗಿ ಸಾಹಿತ್ಯ ಒಂದು ಹೊಸ ಸಂವಹನ ಮಾಧ್ಯಮವೆಂಬ ಅಂಶ ರೂಪುಗೊಂಡಿತು. ಕನ್ನಡದಲ್ಲಿ ಹೊಸ ವರ್ಗ ಉದಯವಾಯಿತು.

ಎನ್‌ಲೈಟನ್‌ಮೆಂಟ್ ಯುಗದಲ್ಲಿ ವಿಮರ್ಶೆಯು ಒಂದು ಸಾರ್ವಜನಿಕವೆನ್ನಬಹುದಾದ ಪ್ರತಿಕ್ರಿಯೆಯಾಗಿತ್ತು. ತೀರ್ಮಾನ ಎನ್ನುವುದು ಒಂದು ಸಾರ್ವಜನಿಕ ತೀರ್ಮಾನವಾಗಿತ್ತು. ಓದುಗರ ಜೊತೆಗೆ ನಡೆಸುವ ಸಂವಾದವೂ ಕೂಡ ಇಡೀ ವ್ಯವಸ್ಥೆಯ ಒಂದು ಆಂತರಿಕ ಭಾಗವಾಗಿತ್ತು. ಈ ದೃಷ್ಟಿಯಿಂದ ವಿಮರ್ಶೆಯು ಹೊಸ ವಾಗ್ವಾದವನ್ನು ರೂಪಿಸಿತು. ಅಭಿಪ್ರಾಯಗಳ ಸಾರ್ವಜನಿಕ ವಿನಿಮಯವೆಂಬ ಪರಿಕಲ್ಪನೆಯು ಚಾಲ್ತಿಗೆ ಬಂತು. ಸಾಹಿತ್ಯ ವಿಮರ್ಶೆಯು ಹದಿನೆಂಟನೆಯ ಶತಮಾನದ ಉದಾರವಾದಿ ಚಿಂತನೆ ಮತ್ತು ಬೂರ್ಜ್ವಾಗಳೊಂದಿಗೆ ಸಂಬಂಧವಿರಿಸಿಕೊಂಡಿತ್ತು (Terry Eagleton, 1994, p. 10). ಇದರೊಂದಿಗೆ ಯೂರೋಪಿನ ಮೊದಮೊದಲಿನ ಸಾಹಿತ್ಯ ವಿಮರ್ಶೆಯು ಅಭಿರುಚಿ ನಿರ್ಮಾಣವನ್ನು ಕೇಂದ್ರವಾಗಿ ಇರಿಸಿಕೊಂಡಿತ್ತು. ಇಂಗ್ಲೆಂಡಿನಲ್ಲಿ ಸಾಹಿತ್ಯ ವಿಮರ್ಶೆಯು ಹುಟ್ಟಿಕೊಂಡು ವ್ಯಾಪಕಮಟ್ಟದಲ್ಲಿ ಕೆಲಸ ಮಾಡುತ್ತಿದ್ದ ಹಾಗೆಯೇ ನಮ್ಮಲ್ಲಿಯೂ ಅದು ವಿಶಿಷ್ಟ ಪ್ರಕಾರವಾಗಿ ರೂಪುಗೊಂಡಿತು. ಒಂದರ್ಥದಲ್ಲಿ ವಸಾಹತುಕಾಲದ ಮಧ್ಯಮ ವರ್ಗದ ಬುದ್ಧಿಜೀವಿಗಳು ವಹಿಸಿದ ಸಾಂಸ್ಕೃತಿಕ ಪಾತ್ರಕ್ಕೂ, ಅವರ ಅಭಿವ್ಯಕ್ತಿ ಕ್ರಮದ ಮಾರ್ಗಕ್ಕೂ, ಸಾಹಿತ್ಯ ವಿಮರ್ಶೆಯ ಕ್ರಮಕ್ಕೂ ಅಂತರಾಳದಲ್ಲಿ ಪರಸ್ಪರ ಸಂಬಂಧವಿದೆ. ಇಂಗ್ಲಿಷ್ ಮಾದರಿಯ ಶಿಕ್ಷಣ ಕ್ರಮದಿಂದ ಸ್ಫೂರ್ತಿಗೊಂಡ ಹೊಸ ರೀತಿಯ ಚಿಂತನೆಯು ಕನ್ನಡದಲ್ಲಿ ವಿವಿಧ ಸಾಹಿತ್ಯ ರೂಪಗಳ ಆವಿರ್ಭಾವಕ್ಕೆ ಕಾರಣವಾದ ಹಾಗೆಯೇ ಸಾಹಿತ್ಯ ವಿಮರ್ಶೆಯೂ ಆ ರೀತಿಯ ಸಾಂಸ್ಕೃತಿಕ ರಂಗದ ಹೊಸ ಅಭಿವ್ಯಕ್ತಿಯ ಸಾಧ್ಯತೆಯಾಗಿತ್ತು. ನವ ಸುಶಿಕ್ಷಿತ ವರ್ಗದ ಬೌದ್ಧಿಕ ಹತ್ಯಾರಗಳಲ್ಲಿ ಸಾಹಿತ್ಯ ವಿಮರ್ಶೆಯೂ ಒಂದು ಮತ್ತು ಅದರ ಹಿನ್ನೆಲೆಯಾಗಲಿ ಅದರ ಪರಿಣಾಮವಾಗಲಿ ಸರಳವಾದುದಲ್ಲ. ಅದಕ್ಕೆ ಅದರದೇ ಆದ ಅನನ್ಯತೆಯು ಸಾಂಸ್ಕೃತಿಕವಾಗಿ ಇದೆ ಎಂಬುದನ್ನು ಮರೆಯಬಾರದು.

ಪುನರುಜ್ಜೀವನ ಕಾಲಘಟ್ಟದಲ್ಲಿ ಉದಯವಾದ ನವಮಧ್ಯಮವರ್ಗ, ಉದಯವಾದ ತಾಂತ್ರಿಕತೆ, ಕೈಗಾರಿಕೀಕರಣ ಸೃಷ್ಟಿಸಿದ ಆತಂಕ, ಮರೆಯಾಗುತ್ತಿದ್ದ ಸಂಪ್ರದಾಯಗಳು, ತಾಂತ್ರಿಕತೆ ಮತ್ತು ವೈಜ್ಞಾನಿಕತೆಯ ದೆಸೆಯಿಂದ ರೂಪುಗೊಂಡ ಸಾಮಾಜಿಕ ಆತಂಕಗಳು – ಇಂಗ್ಲಿಷ್ ಭಾಷೆಯ ಆಧುನಿಕ ವಿಮರ್ಶೆಯಲ್ಲಿ ಬಂದ 'ಅಭಿರುಚಿ'ಯ ಪ್ರಶ್ನೆಗೆ ಪ್ರಮುಖ ಬುನಾದಿಯಾಗಿದ್ದವು. ಕನ್ನಡದ ವಸಾಹತು ಕಾಲದಲ್ಲಿ ಇದೇ ಪ್ರಶ್ನೆಯು ಬೇರೊಂದು ಕಾರಣದಿಂದ ಪ್ರಾರಂಭವಾಯಿತು. ಕನ್ನಡ ಸುಶಿಕ್ಷಿತ ಮಧ್ಯಮ ವರ್ಗವು ಕೆಲವು ಪ್ರಶ್ನೆಗಳನ್ನು ಎದುರಿಸಬೇಕಾಯಿತು. ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ ಅದೊಂದು ಸುಶಿಕ್ಷಿತ ಮಧ್ಯಮ ವರ್ಗದ ವಿಶಿಷ್ಟವಾದ ಬ್ಲಾಕ್. ವಸಾಹತು ಕಾಲದಲ್ಲಿ ಪತ್ರಿಕೆಗಳು ಪ್ರಾರಂಭವಾದವು. ಪತ್ರಿಕೆಗಳಲ್ಲಿ ಸಾಹಿತ್ಯದ ಚರ್ಚೆಗಳು, ಸಂಸ್ಕೃತಿಯ ಚರ್ಚೆಗಳು ಕಾಣಿಸಿಕೊಂಡವು. ನವ ವಿದ್ಯಾವಂತರಿಗೆ ಇಂಗ್ಲಿಷ್ ಪಠ್ಯಗಳ ಪರಿಚಯವಾಯಿತು. ಹೊಸದೊಂದು ಓದುಗ ವರ್ಗದ ಉದಯವಾಯಿತು. ಪತ್ರಿಕೆಗಳು ಹೇಗೆ ಹೊಸ ಸಾಂಸ್ಕೃತಿಕ ಸಂವಹನ ಮಾಧ್ಯಮಗಳಾಗಿದ್ದವೋ ಅದೇ ರೀತಿ ಸಾಹಿತ್ಯ ವಿಮರ್ಶೆಯ ಹೊಸ ಸಂವಹನದ ಮಾಧ್ಯಮಗಳಾದವು. ಸಂಸ್ಕೃತಿಯ ಆಗಮನ ಮತ್ತು ವಿದಾಯಗಳ ನಡುವೆ ಸಾಮಾಜಿಕವಾಗಿ ಉನ್ನತವಾದ ಗುಣಗಳು ಯಾವುವಿವೆಯೋ ಅವನ್ನು ಪುನರ್‌ಕಟ್ಟುವ ಯತ್ನವನ್ನು ಸಾಹಿತ್ಯ ವಿಮರ್ಶೆಯು ಮೊದಮೊದಲಿಗೆ ರೂಪಿಸಲು ತೊಡಗಿತ್ತು. 'ಕನ್ನಡ ಮಾತು ತಲೆಯೆತ್ತುವ ಬಗೆ' (ಬಿ.ಎಂ.ಶ್ರೀ.), ಮಾಸ್ತಿಯವರ 'ಸಾಹಿತ್ಯ ವಿಮರ್ಶೆಯ ಕಾರ್ಯ'ದಂಥ ಲೇಖನಗಳು ಇದಕ್ಕೆ ಅತ್ಯುತ್ತಮ ಸಾಕ್ಷಿಯಾಗಿವೆ. ಯೂರೋಪ್ ಮೂಲದ ಶಿಕ್ಷಣ ಕ್ರಮದಲ್ಲಿ ಮತ್ತು ಭಾರತದಲ್ಲಿ ರೂಪುಗೊಂಡ ಸನ್ನಿವೇಶದಲ್ಲಿ ಅದಕ್ಕೆ ನಿರ್ದಿಷ್ಟ ಉದ್ದೇಶಗಳಿದ್ದವು. ಮೂಲತಃ ಆ ಕಾಲದ ಯೂರೋಪಿಯನ್

ವಿಮರ್ಶೆಗೆ ವಿಶ್ವಾತ್ಮಕವಾದ ಗುಣವೊಂದಿದೆ. ಇಂಗ್ಲೆಂಡಿನಲ್ಲಿಯೇ ಆಗಲಿ, ಇನ್ನಿತರ ಕಡೆಗಳಲ್ಲಿಯೇ ಆಗಲಿ, ಅದಕ್ಕೊಂದು ನಿರ್ದಿಷ್ಟ ಗುಣವಿದೆ. ಬೇರೆ ಬೇರೆ ವಿಮರ್ಶಾತ್ಮಕ ವಾದಗಳು ಮತ್ತು ವಿಮರ್ಶೆಗಳು ಇದನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತವೆ ಅಷ್ಟೆ. ಅದೆಂದರೆ, ವಿಮರ್ಶೆಯಲ್ಲಿರುವ ಪುನರ್‌ನಿರ್ಮಾಣದ ಗುಣ. ಕೃತಿ ಕೇಂದ್ರಿತ ವಿಮರ್ಶೆಗಳಲ್ಲಿ ಪುನರ್‌ನಿರ್ಮಾಣದ ಗುಣವು ಮೂಲತಃ ಅರ್ಥಗಳ ಪುನರ್‌ಕಟ್ಟುವಿಕೆಗೆ ಸಂಬಂಧಿಸಿದೆ. ಸಮಾಜ ಕೇಂದ್ರಿತ ವಿಮರ್ಶೆಯಲ್ಲಿ ಸಾಮಾಜಿಕ ಉಪಯೋಗದ ಪ್ರಶ್ನೆಯು ಅಡಗಿದೆ. ಕರ್ತೃನಿಷ್ಠ ವಿಮರ್ಶಾಪದ್ಧತಿಯಲ್ಲಿ ಪುನರ್‌ಕಟ್ಟುವಿಕೆಯು ಕವಿಯ ಜೀವನಕ್ರಮ ಮತ್ತು ಪರಿಣಾಮಗಳನ್ನು ಆಧರಿಸಿದೆ. ಓದುಗ ಕೇಂದ್ರಿತ ವಿಮರ್ಶೆಯಲ್ಲಿ ಓದುಗನ ಮನಃಸ್ಥಿತಿ ಮತ್ತು ಓದುವ ಪ್ರಕ್ರಿಯೆಗಳ ಪುನರ್‌ಕಟ್ಟುವಿಕೆಗೆ ಅದು ಸಂಬಂಧಿಸಿದೆ. ಇದು ಒಂದು ಮಾದರಿಯ 'ಪುನರ್‌ಕಟ್ಟುವಿಕೆ'ಯ ಪ್ರಕ್ರಿಯೆಯಾದರೆ ಮತ್ತೊಂದು ದೃಷ್ಟಿಯಿಂದ ಈ 'ಪುನರ್‌ಕಟ್ಟುವಿಕೆ'ಯ ಪ್ರಕ್ರಿಯೆಯು ಬೇರೊಂದು ರೀತಿಯಲ್ಲಿ ಜರುಗುತ್ತದೆ. ವಿಮರ್ಶಕರು ಇದನ್ನು 'ಅಭಿರುಚಿ ನಿರ್ಮಾಣ' ಮೌಲ್ಯಮಾಪನ ಮುಂತಾದ ಹೆಸರುಗಳಲ್ಲಿ ಕರೆಯುತ್ತಾರೆ, ಅಷ್ಟೆ.

**ಡಾ|| ಕೇಶವಶರ್ಮ ಕೆ.**

ಮಾದರಿಯ ಶಿಕ್ಷಣ ಕ್ರಮದಲ್ಲಿ ಮನುಷ್ಯರನ್ನು ನಾಗರಿಕ ಸಮಾಜಕ್ಕೆ ಬೇಕಾದ ರೀತಿಯಲ್ಲಿ ರೂಪಿಸಬೇಕಾಗಿತ್ತು. ಅದೇ ಪರಿಕಲ್ಪನೆ ಭಾರತದಲ್ಲಿ ರೂಪುಗೊಂಡ ಶಿಕ್ಷಣ ಕ್ರಮದಲ್ಲಿಯೂ ಇತ್ತು. ಇದರಿಂದ ಆ ಶಿಕ್ಷಣ ಪದ್ಧತಿಯು ರೂಪಿಸಿದ ಬೌದ್ಧಿಕತೆಯು 'ಯೂರೋಪ್ ಸಂಸ್ಕೃತಿ' ಮತ್ತು 'ಭಾರತೀಯ ಸಂಸ್ಕೃತಿ'ಯಲ್ಲಿ ಯಾವುದನ್ನು ಉಳಿಸಿಕೊಳ್ಳಬೇಕು, ಯಾವುದನ್ನು ವಿರೋಧಿಸಬೇಕು ಎಂಬುದನ್ನು ಹೇಳಿಕೊಟ್ಟಿತು. ತುಂಬ ವಿಶಾಲವಾದ ಅರ್ಥದಲ್ಲಿ ಅದನ್ನು 'ಸಾಂಸ್ಕೃತಿಕ ಆಗಮನ', 'ಸಾಂಸ್ಕೃತಿಕ ವಿದಾಯ'ಗಳ ನಡುವಣ ಸಂದಿಗ್ಧತೆಯೆಂದು ಕರೆಯಬಹುದು. ಈ ಸಂದಿಗ್ಧತೆಯೂ ಕೂಡ ಒಂದು ರೀತಿಯ ವಿಮರ್ಶಾತ್ಮಕ ಎಚ್ಚರವನ್ನು ಇಟ್ಟುಕೊಂಡಿತ್ತು ಎನ್ನುವುದು ಗಮನಾರ್ಹ.

ಕನ್ನಡದ ಪ್ರಾರಂಭಿಕ ವಿಮರ್ಶೆಯಲ್ಲಿ ಕೆಲವು ಸಮಾನವೆನ್ನಬಹುದಾದ ಸೂತ್ರಗಳಿವೆ. ಕಾವ್ಯದ ಬಗೆಗಿನ ಕಾಳಜಿ, ಪ್ರಾದೇಶಿಕ ಸಂಸ್ಕೃತಿಯ ಬಗೆಗಿನ ಕಾಳಜಿ, ಸಾಹಿತ್ಯದ ಬಗೆಗಿನ ನಿಲುವುಗಳಲ್ಲಿ ಸಮಾನ ಎನ್ನಬಹುದಾದ ಅಂಶಗಳಿವೆ. ಕನ್ನಡದ ಪ್ರಾರಂಭಿಕ ವಿಮರ್ಶೆಗಳು ಮೂಲತಃ ರಾಜಕೀಯ ಮತ್ತು ಸಾಂಸ್ಕೃತಿಕ ಅರಿವಿನಿಂದ ಹುಟ್ಟಿವೆ. 'ಪ್ರಾಚೀನ ಸಾಹಿತ್ಯ'ದಂಥ ಕೃತಿಗಳಾಗಲೀ, ಕುವೆಂಪು ಅವರ 'ತಪೋನಂದನ', 'ದ್ರೌಪದಿಯ ಶ್ರೀಮುಡಿ'ಯಂಥ ಕೃತಿಗಳನ್ನು ಇದಕ್ಕೆ ಉದಾಹರಣೆಯಾಗಿ ಗಮನಿಸಬಹುದು. ಈ ರೀತಿಯ ಕೃತಿಗಳು ನವೋದಯ ಕಾಲದ ವಿಮರ್ಶಕರ ಪ್ರಾಚೀನ ಕೃತಿಗಳ ಒಂದು ಬಗೆಯ ಓದು ಎಂದು ಗ್ರಹಿಸುವುದು ಎಷ್ಟು ಮುಖ್ಯವೋ ಅದೇ ರೀತಿಯಲ್ಲಿ ಅವುಗಳು ಕೃತಿಯೊಂದಿಗೆ ನಾವು ನಡೆಸಬೇಕಾದ ಅನುಸಂಧಾನದ ಕ್ರಮವನ್ನು ಕೂಡ ತಿಳಿಯಹೇಳುತ್ತವೆ. ಸಾಂಸ್ಕೃತಿಕವಾಗಿ ಈ ಕಾರ್ಯಕ್ಕೆ ಮಹತ್ವದ ಉಪಯೋಗವಿದೆ. ಮತ್ತೊಂದು ಅಂಶವೆಂದರೆ ರತ್ನಾಕರವರ್ಣಿಯ ಬಗ್ಗೆ ಬೇಂದ್ರೆ ಬರೆಯುವುದಕ್ಕೂ, ಹಂಪೆಯ ಹರಿಹರನ ಕುರಿತು ಡಿ. ಎಲ್. ನರಸಿಂಹಾಚಾರ್ ಅವರು ಬರೆಯುವುದಕ್ಕೂ, ಕರ್ನಾಟಕ ಸಂಸ್ಕೃತಿಯ ಬಗ್ಗೆ ಶಂಬಾ, ಕಪಟರಾಳ ಕೃಷ್ಣರಾಯರು ಬರೆಯುವುದಕ್ಕೂ ಒಂದು ಅರ್ಥದಲ್ಲಿ ಒಂದು ಏಕಸೂತ್ರತೆಯಿದೆ. ಅದೆಂದರೆ ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಸಾಮಾನ್ಯರಲ್ಲಿ ಒಂದು ಸಾಮಾನ್ಯ ಕಲ್ಪನೆಯನ್ನು ರೂಪಿಸುವುದು, ಕಳೆದುಹೋಗುತ್ತಿರುವ ಸಂಸ್ಕೃತಿಯ ಮೌಲ್ಯಗಳನ್ನು ಕುರಿತು – ಅದನ್ನು ಸಾರರೂಪವಾಗಿ ಮಂಡಿಸುವುದು. ಪರ್ಯಾಯವಾಗಿ ಏನಾಯಿತೆಂದರೆ – ಯೂರೋಪಿಯನ್ ಸಂಸ್ಕೃತಿಗಿಂತ ಭಿನ್ನವಾದ ಸಂಸ್ಕೃತಿ ಮತ್ತು ಭಿನ್ನವಾದ ಪಠ್ಯಗಳು ಭಾರತದಲ್ಲಿವೆಯೆಂದು ಪ್ರತಿಷ್ಠಾಪಿಸಿದ ಹಾಗಾಯಿತು. ಇವುಗಳ ಅರಿವಿಲ್ಲದ ಸಾಮಾನ್ಯ ಓದುಗರಲ್ಲಿ ಈ ಕಾಳಜಿಗಳನ್ನು ಮೂಡಿಸುವುದು ಸಾಂಸ್ಕೃತಿಕವಾಗಿ ಮಹತ್ವದ ಕೆಲಸವಾಗಿತ್ತು.

ಕನ್ನಡದ ಮೊದಲಿನ ವಿಮರ್ಶೆಗಳು ರೂಪು ತಳೆಯುವಾಗ ಚಾರಿತ್ರಿಕ ಸಮಸ್ಯೆಯಿತ್ತು. ವಿಮರ್ಶಕರ ಎದುರಲ್ಲಿ ಹಲವು ತರಹದ ಆಯ್ಕೆಗಳಿದ್ದವು. ಇಂಗ್ಲಿಷ್ ಪ್ರಭುತ್ವ, ಅದರ ತಾತ್ವಿಕತೆಗಳು, ಅದು ಶಿಕ್ಷಣದ ಮೂಲಕ ಪ್ರತಿಪಾದಿಸಿದ ಒಂದು ಸಾಂಸ್ಕೃತಿಕ ಪರಂಪರೆಯು ಒಂದು ಕಡೆ ; ಸಂಸ್ಕೃತದ ಸಾಂಸ್ಕೃತಿಕ ಪರಂಪರೆಯು ಮತ್ತೊಂದು ಕಡೆ ; ಮೂರನೆಯದಾಗಿ ಕನ್ನಡದ್ದೇ ಎನ್ನಬಹುದಾದ ಸಾಂಸ್ಕೃತಿಕ ಪರಂಪರೆ ; ಹಾಗೂ ರಾಷ್ಟ್ರೀಯವಾದಿ ಕಾಳಜಿಗಳು ಹುಟ್ಟುಹಾಕಿದ ನವ ಭಾರತೀಯ ಪರಂಪರೆಯ ವ್ಯಾಖ್ಯಾನಗಳು ಹಾಗೂ ಆಗ ತಾನೆ ರೂಪುಗೊಳ್ಳುತ್ತಿದ್ದ ಆಧುನಿಕ ಪಠ್ಯಗಳು, ಹೊಸದಾಗಿ ರೂಪುಗೊಂಡ ಓದುಗ ವರ್ಗ – ಇವು ವಾಸ್ತವವಾಗಿ ಈಗ ನಾವು ಹೇಳುತ್ತಿರುವ ಹಾಗೆ ಸಾಮಾನ್ಯವಾದ ಪ್ರಕ್ರಿಯೆಗಳಲ್ಲ. ಹೀಗೆ ಕನ್ನಡದ ಮೊದಮೊದಲಿನ ವಿಮರ್ಶೆಗಳು ಅನೇಕ ರೀತಿಯ ಚಾರಿತ್ರಿಕ ಸಮಸ್ಯೆಗಳನ್ನು ಎದುರಿಸಿದವು. ಎಲ್ಲಾ ಬಿಟ್ಟು ಸಾಹಿತ್ಯ ವಿಮರ್ಶೆಯ ರೂಪು ಯಾವುದಾಗಿರಬೇಕು ಅನ್ನುವುದು ಕೂಡ ಆಧುನಿಕ ಯುಗದ ವಿಮರ್ಶೆಯು ಪ್ರಾರಂಭವಾಗುವಾಗ ಪ್ರಮುಖ ಪ್ರಶ್ನೆಯೇ ಆಗಿತ್ತು.

ವಿಮರ್ಶೆಗೆ ವಿಶ್ವಾತ್ಮಕವಾದ ಗುಣವೊಂದಿದೆ. ಇಂಗ್ಲೆಂಡಿನಲ್ಲಿಯೇ ಆಗಲಿ, ಇನ್ನಿತರ ಕಡೆಗಳಲ್ಲಿಯೇ ಆಗಲಿ, ಅದಕ್ಕೊಂದು ನಿರ್ದಿಷ್ಟ ಗುಣವಿದೆ. ಬೇರೆ ಬೇರೆ ವಿಮರ್ಶಾತ್ಮಕ ವಾದಗಳು ಮತ್ತು ವಿಮರ್ಶೆಗಳು ಇದನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತವೆ ಅಷ್ಟೆ. ಅದೆಂದರೆ, ವಿಮರ್ಶೆಯಲ್ಲಿರುವ ಪುನರ್‌ನಿರ್ಮಾಣದ ಗುಣ. ಕೃತಿ ಕೇಂದ್ರಿತ ವಿಮರ್ಶೆಗಳಲ್ಲಿ ಪುನರ್‌ನಿರ್ಮಾಣದ ಗುಣವು ಮೂಲತಃ ಅರ್ಥಗಳ ಪುನರ್‌ಕಟ್ಟುವಿಕೆಗೆ ಸಂಬಂಧಿಸಿದೆ. ಸಮಾಜ ಕೇಂದ್ರಿತ ವಿಮರ್ಶೆಯಲ್ಲಿ ಸಾಮಾಜಿಕ ಉಪಯೋಗದ ಪ್ರಶ್ನೆಯು ಅಡಗಿದೆ. ಕರ್ತೃನಿಷ್ಠ ವಿಮರ್ಶಾಪದ್ಧತಿಯಲ್ಲಿ ಪುನರ್‌ಕಟ್ಟುವಿಕೆಯು ಕವಿಯ ಜೀವನಕ್ರಮ ಮತ್ತು ಪರಿಣಾಮಗಳನ್ನು ಆಧರಿಸಿದೆ. ಓದುಗ ಕೇಂದ್ರಿತ ವಿಮರ್ಶೆಯಲ್ಲಿ ಓದುಗನ ಮನಃಸ್ಥಿತಿ ಮತ್ತು ಓದುವ ಪ್ರಕ್ರಿಯೆಗಳ ಪುನರ್‌ಕಟ್ಟುವಿಕೆಗೆ ಅದು ಸಂಬಂಧಿಸಿದೆ. ಇದು ಒಂದು ಮಾದರಿಯ 'ಪುನರ್‌ಕಟ್ಟುವಿಕೆ'ಯ ಪ್ರಕ್ರಿಯೆಯಾದರೆ ಮತ್ತೊಂದು ದೃಷ್ಟಿಯಿಂದ ಈ 'ಪುನರ್‌ಕಟ್ಟುವಿಕೆ'ಯ ಪ್ರಕ್ರಿಯೆಯು ಬೇರೊಂದು ರೀತಿಯಲ್ಲಿ ಜರುಗುತ್ತದೆ. ವಿಮರ್ಶಕರು ಇದನ್ನು 'ಅಭಿರುಚಿ ನಿರ್ಮಾಣ', ಮೌಲ್ಯಮಾಪನ ಮುಂತಾದ ಹೆಸರುಗಳಲ್ಲಿ ಕರೆಯುತ್ತಾರೆ, ಅಷ್ಟೆ! ಕನ್ನಡದಲ್ಲಿ ವಿಮರ್ಶೆಯು ಹುಟ್ಟಿರುವುದಕ್ಕೂ – ರಾಷ್ಟ್ರೀಯ ಆಂದೋಲನ ನಡೆಯುತ್ತಿದ್ದುದಕ್ಕೂ ಒಂದು ಸಂಬಂಧವಿದೆ. ನವೋದಯ ಕಾಲದ ಅನೇಕ ವಿಮರ್ಶಕರು ನೇರವಾಗಿ ಇದನ್ನು ಹೇಳಿದರು ಅಂತ ಅರ್ಥವಲ್ಲ. ಸಾಹಿತ್ಯ ವಿಮರ್ಶೆಯು ಹುಟ್ಟಲು 'ಸ್ವಾತಂತ್ರ್ಯ ಭಾವ'ವೂ ಮುಖ್ಯ ಕಾರಣವಾಗಿದೆ. ಇದರಿಂದಾಗಿ ಸಾಹಿತ್ಯ ವಿಮರ್ಶೆಗೆ ಸಾಮಾಜಿಕ ವರ್ಗಗಳಲ್ಲಿರುವ ತಾರತಮ್ಯ ಭೇದಿಸಿ – ಒಂದೇ ಸಾಮಾಜಿಕ ವರ್ಗದ ಕಡೆಗೆ ಅವನ್ನು ತರಬೇಕಾದ ಅಗತ್ಯವಿತ್ತು. ಇದನ್ನು ಸಾಹಿತ್ಯ ವಿಮರ್ಶೆಯು ನೆರವೇರಿಸುತ್ತದೆ.

ಸಾಹಿತ್ಯ ವಿಮರ್ಶೆಯು ಸಾಹಿತ್ಯಕ ಬುದ್ಧಿಜೀವಿಗಳ ಮತ್ತು ಸಾಮಾನ್ಯ ಓದುಗರ ನಡುವೆ ನಡೆಯುವ ಸಂವಾದಗಳಾಗಿವೆ. ಅದನ್ನು ನಾವು ವಿಶಾಲ ಅರ್ಥದಲ್ಲಿ ಸಾಂಸ್ಕೃತಿಕ ಸಂವಾದಗಳೆಂದು ಕರೆಯುತ್ತೇವೆ.

ಸಾಹಿತ್ಯ ವಿಮರ್ಶೆಯ ಮಟ್ಟಿಗೆ ಸಾಂಸ್ಕೃತಿಕ ಸಂವಾದಗಳು ಏಕಮುಖವಾದುವಲ್ಲ. ಬೇರೆ ಬೇರೆ ಕೃತಿಗಳು – ಬೇರೆ ಬೇರೆ ಕೃತಿಕಾರರು ಬೇರೆ ಬೇರೆ ರೀತಿಯಲ್ಲಿ ಸಾಂಸ್ಕೃತಿಕ ಸಂವಾದದಲ್ಲಿ ತೊಡಗಿರುತ್ತಾರೆ. ಈ ಪ್ರಕ್ರಿಯೆಯಲ್ಲಿ ಎರಡು ವಿಧಾನಗಳಿರುತ್ತವೆ :

ಒಂದನೆಯದು ನಿರಚನ : ಕೃತಿಗಳನ್ನು ಸಾಹಿತ್ಯ ವಿಮರ್ಶೆಯು ನಿರಚನಗೊಳಿಸುತ್ತದೆ.

ಎರಡನೆಯದಾಗಿ, ಸಾಹಿತ್ಯ ವಿಮರ್ಶೆಯು ಕೃತಿಗಳನ್ನು ಪುನರ್‌ನಿರ್ಮಾಣ ಮಾಡುತ್ತದೆ.

ಸಾಹಿತ್ಯ ವಿಮರ್ಶೆಯ ರೂಪಕ್ಕೆ ಇರುವ ಪ್ರಮುಖ ಸಾಧ್ಯತೆಯೂ ಕೂಡ ಇದುವೇ ಆಗಿದೆ. ಸಾಹಿತ್ಯ ವಿಮರ್ಶೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಬಂದವರಿಗೆ ಈ ಅಂಶವು ಎದ್ದುಕಾಣುತ್ತದೆ.

ಹೊಸಗನ್ನಡದ ಆರಂಭದ ಸಂದರ್ಭದಲ್ಲಿ ಹೊಸತಾಗಿ ಓದಲು ತೊಡಗಿದ ವರ್ಗದ ಸಾಮಾಜಿಕ ಹಿನ್ನೆಲೆಯು ಬೇರೆಯಾಗಿತ್ತು. ವಸಾಹತು ಕಾಲದ ಶಿಕ್ಷಣ ಕ್ರಮದಿಂದ ಉದಯವಾದ ಓದುಗ ವರ್ಗದ ಅಭಿರುಚಿ ಮತ್ತು ಅದರ ಸ್ಥಾನಮಾನಗಳು ಬೇರೆಯೇ ಆಗಿದ್ದವು. ಓದತೊಡಗಿದ ವರ್ಗವು ಸಾಹಿತ್ಯದ ಬಗ್ಗೆ ಪರಿಪೂರ್ಣ ಸಿದ್ಧತೆಯನ್ನು ಮಾಡಿಕೊಂಡಿರಲಿಲ್ಲ. ಕಲಿತ ಆದರೆ ಕುಶಲಿಯಲ್ಲದ ಜನರಿಗೆ ಸಾಮಾಜಿಕವಾಗಿ ಒಂದು ಮುಗ್ಧ ಗ್ರಹಿಕೆಯಿತ್ತು. ಸಾಹಿತ್ಯ ವಿಮರ್ಶೆಯು ಅದನ್ನು ಬದಲಿಸಲು ಪ್ರಯತ್ನಿಸಿತು.

ವಸಾಹತು ಕಾಲದಲ್ಲಿ ಬೇರೆ ಬೇರೆ ರೀತಿಯ ಉದ್ಯೋಗಗಳು ಸೃಷ್ಟಿಯಾದವು. ಈ ಉದ್ಯೋಗಗಳಿಗೆ ಅನುಗುಣವಾದ ಶಿಕ್ಷಣವನ್ನು ಜನರಿಗೆ ನೀಡಲಾಯಿತು. ಒಂದೆಡೆಯಿಂದ ರಾಷ್ಟ್ರೀಯ ಆಂದೋಲನಕಾರರು ಇದ್ದರೆ ಮತ್ತೊಂದೆಡೆಯಿಂದ ಕ್ಲಾರ್ಕುಗಳು, ವಕೀಲರು, ರೈಲ್ವೇ ಕೆಲಸಗಾರರು, ಶಿಕ್ಷಕರು ಹೀಗೆ ಬೇರೆ ಬೇರೆ ಉದ್ಯೋಗಿಗಳಿದ್ದರು. ಇವರು ಸಾಹಿತ್ಯವನ್ನು ಕುರಿತು ಕೆಲವು ಅಭಿಪ್ರಾಯಗಳನ್ನು ತಳೆಯುವಂತೆ ಮಾಡುವುದು ಸಾಹಿತ್ಯ ವಿಮರ್ಶೆಯ ಕೆಲಸವಾಯಿತು. ಈ ಮೂಲಕ ಅಭಿಪ್ರಾಯಗಳು ರೂಪುಗೊಳ್ಳಲು ಕಾರಣವಾಯಿತು. ಕುವೆಂಪು, ಬೇಂದ್ರೆ, ಕಾರಂತ, ವೆಂಕಣ್ಣಯ್ಯ, ಮಧುರ ಚೆನ್ನ ಇವರೆಲ್ಲಾ ನಿರ್ದಿಷ್ಟವಾಗಿ ಒಂದು ಚೌಕಟ್ಟಿನೊಳಗೆ ಕೆಲಸಮಾಡಲು ಸಾಧ್ಯವಾಯಿತು. ಅವರೆಲ್ಲರ ಬರವಣಿಗೆಗಳನ್ನು ಗಮನಿಸಿದರೆ ಕನ್ನಡ ಸಾಹಿತ್ಯ ವಿಮರ್ಶೆಯಲ್ಲಿ ಒಂದು ಆಲೋಚನಾ ಪಂಥವನ್ನು ಈ ಮೂಲಕ ಕಟ್ಟುವ ಪ್ರಯತ್ನ ಜರುಗಿತು ಎನ್ನಬಹುದು.

ಸಾಹಿತ್ಯ ವಿಮರ್ಶೆ ಮತ್ತು ಸಾಹಿತ್ಯ ಮೀಮಾಂಸೆಯ ಕುರಿತ ಚಿಂತನೆಗಳು ಕನ್ನಡದಲ್ಲಿ ಸಾಮಾನ್ಯ ಮತ್ತು ಸಾಮಾಜಿಕ ಸಂಸ್ಕೃತಿಯನ್ನು ರೂಪಿಸಲು ಪ್ರಯತ್ನಿಸಿದವು. ಅದು ಆ ಕೆಲಸವನ್ನು ಮಾಡುವುದರೊಂದಿಗೆ ಇನ್ನೊಂದು ಕಡೆಯಿಂದ ವಸಾಹತುಶಾಹಿ ಅನುಭವದ ರಾಜಕಾರಣ ಅಂತ ಯಾವುದು ಏನಿದೆಯೋ ಅದರ ವಿರುದ್ಧವಾಗಿಯೂ ಪರ್ಯಾಯಮಾರ್ಗದ ಮುಖೇನ ಕೆಲಸ ಮಾಡಿತು. ಪು.ತಿ.ನ. ಅವರ 'ಕಾವ್ಯ ಮತ್ತು ಸೌಂದರ್ಯ', 'ಭಗವದ್ಗೀತೆ ಮತ್ತು ಕವಿತೆ', ಡಿ.ವಿ.ಜಿ.ಯವರ 'ಸಾಹಿತ್ಯ ಮತ್ತು ಜೀವನ'ದಂಥ ಲೇಖನಗಳು ಈ ಬಗೆಯಲ್ಲಿ ವಿಶಿಷ್ಟವಾದುವು. ಮೇಲುನೋಟಕ್ಕೆ ಇವುಗಳು ಶುದ್ಧ ಸಾಹಿತ್ಯ ಮೀಮಾಂಸೆಯಂತೆ ಕಂಡರೂ

**ಮದ್ದು**

ಅರಳಿತ್ತು
ಅರಳಿಮರದಡಿಯಲ್ಲಿ
ಸಿದ್ಧಾರ್ಥಪ್ರಜ್ಞೆ!
ಆ ಅಶ್ವತ್ಥದ ಕೆಳಗೆ
ಹೊಳೆದದ್ದು
ಅತ್ಯುತ್ತಮ ಮದ್ದು
ಇಂದಿನ ಅಸ್ವಸ್ಥ ಜಗತ್ತಿಗೆ!

ಸಿ.ಪಿ.ಕೆ.
ಮೈಸೂರು

ಅಂತಿಮವಾಗಿ ಇವು 'ಭಾರತೀಯ ಅನನ್ಯತೆ'ಯ ಪ್ರಶ್ನೆಗಳನ್ನು ಒಳಗೊಂಡಿವೆ.

ಇದರ ಹಿಂದಿರುವ ಆಶಯ ಉತ್ತಮ ಜೀವನದ ಬಗೆಗಿನ ಕಳಕಳಿ. ಜೀವನದಲ್ಲಿ ಸದಭಿರುಚಿಯನ್ನು ರೂಪಿಸುವುದು ಇದರ ಹಿಂದಿರುವ ಪ್ರಮುಖ ಗುರಿ. ಈ ಮುಖೇನ ವಿಮರ್ಶಕರು ನಿರ್ದಿಷ್ಟ ಗುರಿಯನ್ನಿರಿಸಿಕೊಂಡು ವಿಮರ್ಶೆಯನ್ನು ಮಂಡಿಸುತ್ತಾರೆ.

ಕುವೆಂಪು ಅವರ 'ಉಪಮಾಲೋಲ ಲಕ್ಷ್ಮೀಶ', 'ರನ್ನನ ವೀರ ಕೌರವ', ಎನ್. ಬಸವಾರಾಧ್ಯರ 'ಬಸವಣ್ಣನವರ ಭಕ್ತಿಯೋಗ', ಡಿ. ಎಲ್. ನರಸಿಂಹಾಚಾರ್ ಅವರ 'ಕುಮಾರರಾಮನ ಸಾಂಗತ್ಯ' ಮುಂತಾದ ಲೇಖನಗಳನ್ನು ಗಮನಿಸಿದರೆ ಮತ್ತೊಂದು ಅಂಶವು ಗೋಚರಿಸುತ್ತದೆ. ಸೃಜನಶೀಲ ಲೇಖಕರನ್ನು ವಿರೋಧಿಬಣದೊಂದಿಗೆ ಗುರುತಿಸುವುದು ಈ ಥರದ ವಿಮರ್ಶೆಯ ಧಾಟಿಯಲ್ಲ. ಕೃತಿಯ ಸಾರವನ್ನು, ಅದರ ಒಳ್ಳೆಯ ಅಂಶಗಳನ್ನು ಗುರುತಿಸುವುದು ಈ ಥರದ ವಿಮರ್ಶೆಯ ಪ್ರಮುಖ ಕೆಲಸವಾಗಿದೆ. ಲೇಖಕರ ಮತ್ತು ಕೃತಿಗಳ ಒಳ್ಳೆಯ ಗುಣವನ್ನು ಗುರುತಿಸುವುದೆಂದರೆ ಅಂತಿಮವಾಗಿ ಲೇಖಕರನ್ನು ಪ್ರೋತ್ಸಾಹಿಸುವುದೆಂದರ್ಥ. ಕುವೆಂಪು ಅವರ 'ಮುನ್ನುಡಿ ತೋರಣ' ಕೃತಿಯನ್ನು ಇದರೊಂದಿಗೆ ಗಮನಿಸಬಹುದು.

ಆಧುನಿಕ ಕನ್ನಡದ ಮೊದಲಿನ ವಿಮರ್ಶೆಗಳು ಪ್ರಭುತ್ವವನ್ನು ಪರೋಕ್ಷವಾಗಿ ವಿರೋಧಿಸಿದರೂ ಅಂತಿಮವಾಗಿ ಅದಕ್ಕೆ ಮುಖ್ಯವಾಗುವುದು ಓದುಗ.

ಭಾರತೀಯ ಸಮಾಜದ ಶ್ರೇಣೀಕರಣಗಳು ಕನ್ನಡದ ಮೊದಮೊದಲಿನ ವಿಮರ್ಶೆಗೆ ಮುಖ್ಯವಾಗಿರಲಿಲ್ಲ. ಇದನ್ನು ಕಾದಂಬರಿಗಳಿಗೆ ಅನ್ವಯಿಸಲು ಬರುವುದಿಲ್ಲ.

ಕನ್ನಡದ ಮೊದಮೊದಲಿನ ವಿಮರ್ಶೆಯು ಈಗಾಗಲೇ ಗುರುತಿಸಿರುವಂತೆ ರಾಷ್ಟ್ರೀಯತಾವಾದಿ ಪರಂಪರೆ, ಅದರ ಸಾಂಸ್ಕೃತಿಕ ಚಿಹ್ನೆಗಳೊಂದಿಗೆ ಅನುಸಂಧಾನ ಮಾಡಿತು. ಕುವೆಂಪು ಅವರ 'ಉಪನಿಷತ್ತಿನ ಋಷಿಯ ದರ್ಶನ' ಇದಕ್ಕೊಂದು ಉದಾಹರಣೆ. ಕನ್ನಡ ಓದುಗ ವರ್ಗಕ್ಕೆ ಈ ಮೂಲಕ ರಾಷ್ಟ್ರೀಯ ಪರಂಪರೆಯ ಪರಿಚಯವಾದಂತಾಯಿತು.

ಸಾಹಿತ್ಯ ವಿಮರ್ಶೆಯು ವ್ಯಕ್ತಿಯಿಂದ ವ್ಯಕ್ತಿಗೆ ಸಂವಹನಗೊಳ್ಳುವ ಒಂದು ಮಾಧ್ಯಮ. ವ್ಯಕ್ತಿಯೊಬ್ಬನ ಅಭಿಪ್ರಾಯವೆನ್ನುವುದು ಇದರಲ್ಲಿ ಮುಖ್ಯ. ಪ್ರಭುತ್ವಕ್ಕೆ ವ್ಯಕ್ತಿಯ ಅಭಿಪ್ರಾಯ ಮುಖ್ಯವಲ್ಲ. ಅದು ವ್ಯಕ್ತಿಯ ಅಭಿಪ್ರಾಯವನ್ನು ಮಾನ್ಯಮಾಡುವುದಿಲ್ಲ. ಅದರ ಮುಖ್ಯ ಗುರಿ – ರಾಜಕಾರಣ; ಅಂದರೆ ಸಮಷ್ಟಿಯ ನಿರ್ಧಾರಾತ್ಮಕವಾದ ಶಕ್ತಿ (ರಾಜಕಾರಣ = ನಿರ್ಧರಿಸುವ ಶಕ್ತಿ) ಮತ್ತು ಆರ್ಥಿಕತೆ; ಅಂದರೆ – ಸುಲಲಿತವಾದ ಸಂಪನ್ಮೂಲಗಳನ್ನು ಒಗ್ಗೂಡಿಸುವುದು. ಇವೆರಡೂ ಮನುಷ್ಯ ಸಂಬಂಧಗಳನ್ನು ನಿರ್ಧರಿಸುತ್ತವೆ. ಒಂದು ಆದರ್ಶ ಸ್ಥಿತಿಯಲ್ಲಿ ಈ ಪರಿಕಲ್ಪನೆಗಳು ಬೂರ್ಜ್ವಾ ವರ್ಗಗಳ ಪರಿಕಲ್ಪನೆಯಾಗಿ ಪರಿವರ್ತನೆಯಾಗುತ್ತವೆ. ಸಾಹಿತ್ಯ ವಿಮರ್ಶೆಯು ಅತಿಯಾಗಿ ಆದರ್ಶೀಕರಣಗೊಂಡಾಗ ಅದು ಏಕಾಂತವಾದಿ ಪ್ರಕ್ರಿಯೆಯಾಗುತ್ತದೆ. 'ರಸತಲ್ಲೀನತೆ'ಯ ಪ್ರಕ್ರಿಯೆಯು ಜರುಗುವುದು ಈ ಹಿನ್ನೆಲೆಯಲ್ಲಿ.

ಭಾರತದಲ್ಲಿ ಪತ್ರಿಕೆಗಳು ಪ್ರಾರಂಭವಾದುದು ಒಂದು ರಾಷ್ಟ್ರೀಯ ಅಭಿಪ್ರಾಯವನ್ನು ರೂಪಿಸುವುದಕ್ಕೆ ಕಾರಣವಾಯಿತು. ಗಾಂಧಿಯವರ ಬಹುತೇಕ ಲೇಖನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿರುವುದು ಮತ್ತು ಅವು ಒಂದು ನಿರ್ದಿಷ್ಟ ಅಭಿಪ್ರಾಯವನ್ನು ರೂಪಿಸಿರುವುದು ಇದಕ್ಕೆ ಸಾಕ್ಷಿಯಾಗಿದೆ. ಮಾಸ್ತಿಯವರ 'ಜೀವನ' ಪತ್ರಿಕೆಯು ಕನ್ನಡದಲ್ಲಿಯೂ ಈ ರೀತಿಯ ಸಾರ್ವಜನಿಕ ಅಭಿಪ್ರಾಯವನ್ನು ರೂಪಿಸುವುದಕ್ಕೆ ಕಾರಣವಾಗಿತ್ತು. ಅವುಗಳಲ್ಲಿ ಪ್ರಕಟವಾಗಿರುವ ಲೇಖನಗಳನ್ನು ಗಮನಿಸಿದರೆ ಅವುಗಳಲ್ಲಿ ಬರಿಯ ಸಾಹಿತ್ಯ ವಿಮರ್ಶೆ ಎನ್ನುವುದು ಮಾತ್ರ ಮುಖ್ಯವಾಗಿರಲಿಲ್ಲ. ಅಂದರೆ ಅವುಗಳ ವ್ಯಾಪ್ತಿಯು ಹಿರಿದಾಗಿತ್ತು; ಆಸಕ್ತಿಗಳು ಭಿನ್ನವಾಗಿದ್ದವು.

ಕುವೆಂಪುರವರ ಮೊದಮೊದಲಿನ ವಿಮರ್ಶೆಗಳು ಮೂಲತಃ ಅಭಿಪ್ರಾಯ ಮಂಡನೆಯ ರೂಪದವುಗಳು. ಈ ದೃಷ್ಟಿಯಿಂದ ನಾವು ಈಗ ಹೇಳುತ್ತಿರುವ 'ಔದ್ಯೋಗಿಕ ವಿಮರ್ಶೆಯ ಕ್ರಮ'ದ ರೀತಿಯಲ್ಲಿ ಅವು ಇರಲಿಲ್ಲ.

ನವೋದಯ ಕಾಲದ ಕನ್ನಡ ವಿಮರ್ಶೆಯು ಒಂದು ವಿಶಿಷ್ಟ ಅಧ್ಯಯನ ಕ್ರಮವನ್ನು ಒಳಗೊಂಡ ಚಿಂತನೆಯ ಕ್ರಮವೆಂದು ನಾವು ಕರೆಯುವಂತಿಲ್ಲ. ಕುವೆಂಪು, ಮಾಸ್ತಿ, ಬೇಂದ್ರೆ, ಡಿ.ವಿ.ಜಿ. ಮುಂತಾದವರು ಬರಿಯ ವಿಮರ್ಶಕರು ಮಾತ್ರವೇ ಆಗಿರಲಿಲ್ಲ. ಅವರ ಬರಹಗಳಲ್ಲಿ ವಸಾಹತು ಅನುಭವದ ನೈತಿಕ, ಸಾಂಸ್ಕೃತಿಕ, ಧಾರ್ಮಿಕ ಚಿಂತನೆಗಳ ಪ್ರತಿಬಿಂಬಗಳಿವೆ. ಅವುಗಳನ್ನು ಸಾಮಾಜಿಕ ಮತ್ತು ಸಾಂಸ್ಕೃತಿಕ ದಾಖಲೆಗಳೆಂದು ಕರೆಯುವುದು ಸೂಕ್ತ. ಆ ಬರವಣಿಗೆಗಳಲ್ಲಿ ಸ್ತ್ರೀಯರ ಸ್ಥಾನಮಾನ, ರಾಷ್ಟ್ರೀಯತೆ, ಪ್ರಾದೇಶಿಕತೆ, ಕನ್ನಡನಾಡು ನುಡಿಯ ಚಿಂತನೆಗಳು ಮುಖ್ಯವಾಗಿವೆ. ಆ ಬರಹಗಳಲ್ಲಿ ಸಾಂಸ್ಕೃತಿಕ ತಂತ್ರಗಾರಿಕೆಯ ಅಂಶವು ಹೆಚ್ಚಾಗಿ ಅವರನ್ನು ಶುದ್ಧ ಸಾಹಿತ್ಯ ಪಂಡಿತರೆಂದು ಕರೆಯುವುದು ಕಷ್ಟ. ಆದರೆ ಅವರ ಬರವಣಿಗೆಗಳು ಕನ್ನಡದ ಮಟ್ಟಿಗೆ ಹೊಸ ಪ್ರಯೋಗ

## ಎಂದು

ಈ ಗಳಿಗೆಗೆ ಗೊತ್ತಿರಲಿಲ್ಲ
ಅದು ಸರಿದು ಹೋದಂತೆಲ್ಲಾ
ತನ್ನೊಂದಿಗೆ ಬೆಂಕಿ ನೆರಳಿನ ಪುಟ್ಟ
ಬೊಗಸೆಯೊಂದನ್ನು ಕೊಂಡೊಯ್ಯುತ್ತದೆಯೆಂದು

ಈ ಸಾವಿಗೂ ಗೊತ್ತಿರಲಿಲ್ಲ
ಅದು ಬಂದು ಹೊರಟು ಹೋದಂತೆಲ್ಲಾ
ಗಾಢ ಮೌನವೊಂದನ್ನು ಉಳಿಸಿಹೋಗುತ್ತದೆಯೆಂದು

ಮಳೆ ಸುರಿದುಕೊಂಡ ರಾತ್ರಿಗೆ ನೆನಪೇ ಇಲ್ಲ
ಮಾರನೆಗೆ ಮುಖವಿರದ ಚಿತ್ರಗಳನ್ನು
ಹೆಜ್ಜೆ ಊರದ ಬಯಲಿಗೆ ಹರಡಿ
ವಿಕೃತ ಆಕಾರಗಳನ್ನು ಬರೆಯುತ್ತವೆ ಎಂದು

ಮಧು ಸುರಿದುಕೊಂಡು ಖಾಲಿಯಾದ
ಬಟ್ಟಲಿಗೆ ಅರಿವಾಗಲೇ ಇಲ್ಲ
ತನ್ನ ತಳದಲ್ಲೊಂದು ಕೊನೆಯ ಚಿತ್ರ
ಅಚ್ಚೊತ್ತಿಕೊಂಡು ಕುಳಿತಿದೆಯೆಂದು
ಬದುಕು ತುಂಬದ ಬಟ್ಟಲು ಎಂದು



ಆ ನಗುವ ಚಂದಿರನ ಬಂಧಿಸಲು
ಕೈಯ ಬೊಗಸೆಗೆ ತುಂಬಿಸಿದ ನೀರಿಗೆ
ಗುಮಾನಿ ಬರಲೇ ಇಲ್ಲ
ನೀರೆಲ್ಲಾ ಸೋರಿ ಹೋದ ಮೇಲೆ
ನಗುವ ಚಂದ್ರ ಬೊಗಸೆಯೊಳಗೆ
ಮೆತ್ತಿಕೊಂಡಿದ್ದಾನೆ ಎಂದು

ಪಟಪಟನೆ ಮುಚ್ಚುತ್ತ ತೆರೆದುಕೊಳ್ಳುತ್ತಿರುವ
ಕಣ್ಣುಗಳಿಗೆ ಗೊತ್ತೆ ಇಲ್ಲ
ಕಣ್ಣ ಕೊನೆಯಲ್ಲೊಂದಷ್ಟು ತೇವವಿದೆಯೆಂದು

ಮುಚ್ಚಿದ ಕದಗಳಿಗೆ ಉತ್ತರವಿಲ್ಲ
ತನ್ನ ಮೈಮೇಲೆ ಅವಳ ಬಿಸಿಯುಸಿರಿನ
ಕೈಗುರುತುಗಳ ಪಸೆಯಿದೆ ಎಂದು

**ಲಕ್ಕೂರು ಸಿ. ಆನಂದ**
'ಪದ್ಮಗೌರಿ', ಪೊಲೀಸ್ ಠಾಣೆ ಎದುರು, ಲಕ್ಕೂರು ಅಂಚೆ, ಮಾಲೂರು ತಾಲೂಕು, ಕೋಲಾರ ಜಿಲ್ಲೆ - ೫೬೩ ೧೬೦

ಗಳಾಗಿದ್ದವು. ಅವು ಕನ್ನಡದ ಮಟ್ಟಿಗಿನ 'ನವತತ್ವಜ್ಞಾನ'ಗಳಾಗಿದ್ದವು. ವಿಮರ್ಶಕರು ಸಾಂಸ್ಕೃತಿಕ ನಿರೂಪಕರಾಗಿರುವುದರೊಂದಿಗೆ ಅವರಿಗೆ ಮಾನವತಾವಾದವನ್ನು ಪ್ರತಿಪಾದಿಸಬೇಕಾದ ಅಗತ್ಯವಿತ್ತು. ನೈತಿಕ ದೃಷ್ಟಿ, ಅದರ ಸಾಮಾಜಿಕ ಅಗತ್ಯಗಳು ಅವರಿಗೆ ಮುಖ್ಯವಾಗಿತ್ತು.

ನವೋದಯ ವಿಮರ್ಶಕರು ಬಳಸಿದ 'ರಸ ತಲ್ಲೀನತೆ', 'ದರ್ಶನ', 'ಆನಂದ' ಇವುಗಳಿಗೆ ಆಧ್ಯಾತ್ಮಿಕ ಅರ್ಥವಂತಿಕೆಯೂ ಇದೆಯೆಂಬುದು ಗಮನಾರ್ಹ. ಅವರು ಬಳಸಿದ ಸ್ಫೂರ್ತಿ ಎನ್ನುವುದು ಕೂಡ ಸಾಂಸ್ಕೃತಿಕ, ರಾಜಕೀಯ ಅರ್ಥವಂತಿಕೆಯನ್ನು ಒಳಗೊಂಡಿದೆ. ಸಾಹಿತ್ಯವೆನ್ನುವುದು ಬಂಡವಾಳಶಾಹಿ ಮುದ್ರಣ ಸಂಸ್ಕೃತಿಯ ಭಾಗವಾಗಿರುವುದು ನವೋದಯ ಕಾಲದಲ್ಲಿ. ಮುದ್ರಣ ಯಂತ್ರದ ಸ್ಥಾಪನೆಯಿಂದಾಗಿ ಒಂದೇ ರೀತಿಯ ಹಲವು ಪ್ರತಿಗಳು ಲಭ್ಯವಾಗುವಂತಾಯಿತು. ಮುದ್ರಣಯಂತ್ರ ಎನ್ನುವುದು ಮನಸ್ಸು– ದೇಹವಿಲ್ಲದ ಒಂದು ಭೌತಿಕ ರೂಪ. ಸಾಹಿತ್ಯ ವಿಮರ್ಶೆಯೆನ್ನುವುದು ಬೌದ್ಧಿಕ ಪ್ರಕ್ರಿಯೆ. ಇವುಗಳ ನಡುವೆ ದ್ವಂದ್ವ ಸಂಬಂಧವು ರೂಪುಗೊಂಡಿತು. ಸಾಹಿತ್ಯ ವಿಮರ್ಶೆಯು ಬೌದ್ಧಿಕ ಉತ್ಪನ್ನವಾದುದರಿಂದ ವಿಮರ್ಶಕನ ಆಲೋಚನೆಯು ಅದರಲ್ಲಿ ಮುಖ್ಯವಾಯಿತು. ಬೌದ್ಧಿಕ ಉತ್ಪನ್ನಕ್ಕೆ ಕಾರ್ಯ - ಕಾರಣ ಸಂಬಂಧವಿರುತ್ತದೆ. ಅದು ಸಾಮಾಜಿಕ ಸಂವಾದದ ರೂಪಕ್ಕೆ ಅನುಸಾರವಾಗಿ ಭಿನ್ನವಾಗುತ್ತಾಹೋಗುತ್ತದೆ. ಈ ದೃಷ್ಟಿಯಿಂದ ಸಾಹಿತ್ಯ ವಿಮರ್ಶೆಯು ಒಂದು ಸಾಮಾಜಿಕ ಸಂಕಥನವಾದರೆ ಮುದ್ರಣ ಯಂತ್ರವು ಬಂಡವಾಳಶಾಹಿಯ ಉಪ-ಉತ್ಪನ್ನವಾಗಿದೆ. ಸಾಹಿತ್ಯ ವಿಮರ್ಶೆಗೆ ಸಾರ್ವಜನಿಕರನ್ನು ಒಪ್ಪಿಸುವ ಕ್ರಿಯೆಯು ಮುಖ್ಯ. ಸಾಹಿತ್ಯ ವಿಮರ್ಶೆಯು ಈ ದೃಷ್ಟಿಯಿಂದ 'ಉದ್ದೇಶಿತ ಸಂಭಾಷಣೆ' ಯಾಗಿದೆ.

ಸಾಹಿತ್ಯ ವಿಮರ್ಶೆಯು ಅಭಿಪ್ರಾಯಗಳನ್ನು ಮೂಡಿಸುತ್ತದೆ. ಅಭಿಪ್ರಾಯಗಳು ಸಂಸ್ಕೃತಿ ಚಿಂತನೆಯಲ್ಲಿ ಪ್ರಧಾನಪಾತ್ರವನ್ನು ವಹಿಸುತ್ತವೆ. ಆದರೆ ಈ ಸಂಸ್ಕೃತಿಯ ಪ್ರಶ್ನೆಯು ನವೋದಯ ವಿಮರ್ಶೆಯ ಸಂದರ್ಭದಲ್ಲಿ ವಸಾಹತುಶಾಹಿ ಅನುಭವಕ್ಕೆ ಅನುಸಾರವಾಗಿ ರೂಪುಗೊಂಡಿದೆ.

ನವೋದಯ ಸಂದರ್ಭದಲ್ಲಿ ಸೃಜನಶೀಲತೆ ಎಂದರೆ ರಮ್ಯತೆಯ ಕಲ್ಪನಾ ವಿಲಾಸ. ಇದರಿಂದ ಸೃಜನಶೀಲತೆ ಎನ್ನುವುದಕ್ಕೆ ವಿಶೇಷ ಅರ್ಥ ಬಂತು. ಸೃಜನಶೀಲತೆಗೆ ವಿಶೇಷವಾಗಿ ಕಾಣುವಿಕೆಯೆಂಬ ಅರ್ಥವೂ ಬಂತು. 'ಕಾಣ್ಕೆ', 'ದರ್ಶನ' ಮುಂತಾದ ಪದಗಳು ಕವಿಯ ಶಕ್ತಿಯನ್ನು ಸೂಚಿಸಿದವು. ಒಬ್ಬ ಪತ್ರಕರ್ತನ, ಒಬ್ಬ ಪಂಡಿತನ ಅಥವಾ ಒಬ್ಬ ಸೃಜನಶೀಲ ಲೇಖಕನ ಕೆಲಸಗಳು ಬೇರೆ ಬೇರೆಯೆಂಬ ಪರಿಕಲ್ಪನೆಯು ಬಂತು.

ಬುದ್ಧಿಜೀವಿಗಳಿಗೆ ವಿಶೇಷ ಪ್ರಾಶಸ್ತ್ಯ ದೊರಕಿದ್ದು ನವೋದಯ ಕಾಲದಲ್ಲಿ. ಬುದ್ಧಿಜೀವಿಗಳ ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದಂತೆ ಎರಡು ಪ್ರಕ್ರಿಯೆಗಳಿದ್ದವು. ಒಂದು ಸಂಶೋಧನೆಯ ಅಂಶವನ್ನು ಒಳಗೊಂಡ ಸಾಹಿತ್ಯ ವಿಮರ್ಶೆ. ಅದರಲ್ಲಿ 'ಬೌದ್ಧಿಕ ವಿಶೇಷ ತಜ್ಞತೆ' ಅನ್ನುವುದು ಮುಖ್ಯ. ಡಿ. ಎಲ್. ನರಸಿಂಹಾಚಾರ್, ಶಂ. ಬಾ. ಜೋಶಿ, ಮಂಜೇಶ್ವರ ಗೋವಿಂದ ಪೈಯಂಥವರ ಬರಹಗಳು ಇದಕ್ಕೆ ಉತ್ತಮ ಸಾಕ್ಷಿಯಾಗಿವೆ. ಅವರು ಸಂಶೋಧನೆಯ ವಿಧಿ-ವಿಧಾನ, ವಿಮರ್ಶೆಯ ವಿಧಾನ ಎರಡನ್ನೂ ಬರಹದಲ್ಲಿ ರೂಪಿಸಿಕೊಂಡಿದ್ದರು. ಅವರು ಬೌದ್ಧಿಕ ವಸಾಹತು ಯುಗದ ಒಂದು ವಿಶಿಷ್ಟ ಮಾದರಿಯೂ ಹೌದು.

ಕವಿಗಳು ಕಾವ್ಯ ಜಗತ್ತಿನ ಶಾಸಕರಾದರೆ ಅದನ್ನು ನಿರಚನಗೊಳಿಸುವವರು ವಿಮರ್ಶಕರು. ಈ ನಿರಚನದ ಪ್ರಕ್ರಿಯೆಯು ಅಪ್ರಿಯ ಧಾಟಿಯದಾಗಿರಲಿಲ್ಲ. ಈ ಮೂಲಕ ವಿಮರ್ಶಕ ಆಗತಾನೆ ಹೊಸ ಓದಿಗೆ ತೆರೆದುಕೊಂಡ ಓದುಗವರ್ಗಕ್ಕೆ ಪ್ರಿಯನಾದ.

ವಿಮರ್ಶಕ ಒಬ್ಬ ನಿರೂಪಕ, ಸೂಚಕ, ಮಧ್ಯವರ್ತಿ, ಅನ್ವಯಿಕ ತಜ್ಞ ; ಹೀಗೆ ಅಸಂಖ್ಯ ಪಾತ್ರಗಳನ್ನು ವಹಿಸುತ್ತಿದ್ದ. ಅವನು ನಿರೂಪಿಸಿದ್ದ ಸಾರ್ವಜನಿಕ ಅಭಿಪ್ರಾಯಗಳೂ ಇದೇ ಹಿನ್ನೆಲೆಯನ್ನು ಒಳಗೊಂಡಿತ್ತು. ಓದುಗರ ಅಭಿರುಚಿಯ ಅರಿವು ಅವನಿಗಿತ್ತು. ಸರಿ ಸುಮಾರು ೧೯೫೦ರತನಕ ಈ ಪ್ರವೃತ್ತಿಯು ಮುಂದುವರಿಯಿತು.

ಕನ್ನಡದ ನವೋದಯ ವಿಮರ್ಶೆಯು ಪ್ರಾದೇಶಿಕ - ಪ್ರಾಚೀನ ಪಠ್ಯಗಳನ್ನು ಹೇಗೆ ಚರ್ಚಿಸಿತೋ ಅದೇ ರೀತಿ ಭಾರತೀಯ ಸಂಸ್ಕೃತ ಪ್ರಾಚೀನ ಪಠ್ಯಗಳನ್ನು ಪುನರ್ ಪರಿಶೀಲನೆಗೆ ಗುರಿಪಡಿಸಿತು. ಇದನ್ನು ಗಮನಿಸಿದರೆ ನವೋದಯ ವಿಮರ್ಶಕರಿಗೆ – ಪ್ರಾದೇಶಿಕ ಪಠ್ಯಗಳು ಎಷ್ಟು ಮುಖ್ಯವಾಯಿತೋ ಅಷ್ಟೇ ಸಂಸ್ಕೃತ ಪಠ್ಯಗಳು ಮತ್ತು ಇಂಗ್ಲಿಷಿನ ಪಠ್ಯಗಳೂ ಮುಖ್ಯವಾದವು. ವಿಮರ್ಶೆಯಲ್ಲಿ ಅವುಗಳ ಬಗೆಗೆ ಬರೆದರು. ವಿಮರ್ಶೆಯನ್ನು ಬರೆಯಬೇಕಿದ್ದರೆ ಮೂರು ಅಂಶಗಳು ಮುಖ್ಯ :

೧. ಇಂಗ್ಲಿಷ್ ಮತ್ತು ಸಂಸ್ಕೃತ ಭಾಷೆಯ ಮೇಲಿನ ಪ್ರಭುತ್ವ ; ಯಾಕೆಂದರೆ ಆ ಕಾಲದ ವಿಮರ್ಶಕರು ಬರೆಯುವಾಗ ಅವರೆದುರು ಅನುವಾದಗೊಂಡ ಪಠ್ಯಗಳು ಇರಲಿಲ್ಲ.

೨. ಆಯಾ ಭಾಷೆಯಲ್ಲಿರುವ ಕೃತಿಗಳ ಸಾರಸರ್ವಸ್ವವನ್ನು ಗ್ರಹಿಸಬೇಕಾದ ಗುಣಗ್ರಾಹಿ ಮನೋವೃತ್ತಿ.

೩. ಕನ್ನಡ ಓದುಗರಿಗೆ ಮತ್ತೊಂದು ಭಾಷೆಯ ಕೃತಿಯನ್ನು ಪರಿಚಯಿಸಬೇಕೆಂಬ ಹಂಬಲ.

ವಿಮರ್ಶೆಯ ಮಹತ್ವದ ಕಾರ್ಯವು ಈ ಮೂಲಕ ನೆರವೇರಿತು.

ಅದೇ ಸಂದರ್ಭದಲ್ಲಿ ಲೇಖಕರು ಪಠ್ಯ ವಿಮರ್ಶೆಗೆ ಆಯ್ಕೆ ಮಾಡಿಕೊಂಡ ವಿಧಾನದಲ್ಲಿ ಸ್ವಾಯತ್ತತೆ ಮತ್ತು ಸ್ವಾತಂತ್ರ್ಯವು ಎದ್ದು ಕಾಣುತ್ತದೆ. ಲೇಖಕನ 'ಸ್ವಯಂ ತಂತ್ರ' ಮನೋವೃತ್ತಿಯು ಕೂಡ ಗಮನಾರ್ಹವಾಗಿದೆ.

ನವೋದಯ ವಿಮರ್ಶೆಯಲ್ಲಿ ಮತ್ತು ಅದರ ನಂತರದ ಅನೇಕ ಸಂದರ್ಭಗಳ ವಿಮರ್ಶೆಯ ಚರ್ಚೆಯಲ್ಲಿ ಸಂಸ್ಕೃತಿಯ ಚರ್ಚೆಯೂ ಆಯಿತಷ್ಟೆ; ಆಧುನಿಕ ವಿಮರ್ಶೆಯು ಹುಟ್ಟುವಾಗ ಅದರಲ್ಲಿ ಸಾಂಸ್ಕೃತಿಕ ಪರಿಕರವು ಅವಶ್ಯವಾಗಿದ್ದಿತು. ವಸಾಹತುಶಾಹಿ ಅನುಭವದ ಸಂದರ್ಭದಲ್ಲಿ 'ಸಂಸ್ಕೃತಿ'ಯ ಪ್ರಶ್ನೆಯು ವಸಾಹತುವಾದದ ವಿರೋಧವಾಗಿ ರೂಪುಗೊಂಡಿರುವ ಒಂದು ಸಾಂಸ್ಕೃತಿಕ ಪರಿಕರ.

ಸಾಹಿತ್ಯ ವಿಮರ್ಶೆಗೂ ವಿಶ್ವವಿದ್ಯಾನಿಲಯಗಳ ಸ್ಥಾಪನೆ ಹಾಗೂ ಅವುಗಳ ಪಠ್ಯಕ್ರಮಗಳಿಗೂ ಒಂದು ಸಂಬಂಧವಿದೆ. ವಿಶ್ವವಿದ್ಯಾನಿಲಯದ ಪಠ್ಯಕ್ರಮದ ಒಂದು ಭಾಗವಾಗಿ ಸಾಹಿತ್ಯ ವಿಮರ್ಶೆಯು ರೂಪುಗೊಂಡಿರುವುದರಿಂದ ಅದರ ಹಿನ್ನೆಲೆಯೂ ವಿಶಿಷ್ಟವಾಯಿತು. ಅದರಲ್ಲಿ ವಿದ್ಯಾರ್ಥಿಗಳನ್ನು ತರಬೇತುಗೊಳಿಸುವ ನೈತಿಕ ದೃಷ್ಟಿಯೂ ಕೂಡ ಇತ್ತು.

ಸಾಮಾಜಿಕ ವರ್ಗಗಳ ಬಗ್ಗೆ ನವೋದಯ ವಿಮರ್ಶೆಯು ಒಂದು ಮೌನವನ್ನು ತಾಳಿದೆ. ವಾಸ್ತವವಾಗಿ ಭಾರತದಲ್ಲಿರುವ ಜಾತಿಯ ಶ್ರೇಣೀಕರಣಗಳು, ವರ್ಗಗಳು ನವೋದಯ ವಿಮರ್ಶೆಯಲ್ಲಿ ನಿಷ್ಠುರ ವಿಮರ್ಶೆಗೆ ಗುರಿಯಾಗುವುದಿಲ್ಲ.

ಕೃತಿಯೊಂದು ಒದಗಿಸುವ ಅನುಭವವನ್ನು ನವೋದಯ ವಿಮರ್ಶೆಯು ಸಾಮಾನ್ಯ ಓದುಗರಿಗೆ ತಲುಪಿಸುತ್ತದೆ. ಕೃತಿಯೊಂದು ಒಟ್ಟಾರೆಯಾಗಿ ಕೊಡುವ ಅನುಭವವನ್ನು ಸಹೃದಯರಿಗೆ ಮತ್ತು ಸಾಮಾನ್ಯ ಮನುಷ್ಯರಿಗೆ ತಿಳಿಯ ಹೇಳುವುದು ನವೋದಯ ವಿಮರ್ಶೆಯ ಪ್ರಮುಖ ಗುರಿ. ಅಂದರೆ ಸಾಹಿತ್ಯ ವಿಮರ್ಶೆಯು ಸಾಮಾನ್ಯವಾಗಿ ಬಳಸುವ ತಾಂತ್ರಿಕ ಪದಗಳು ನವೋದಯ ವಿಮರ್ಶೆಗೆ ಮುಖ್ಯವಲ್ಲ.

ಸಾಹಿತ್ಯದ ಉಪಯೋಗವನ್ನು, ಅದರ ಪ್ರಸ್ತುತತೆಯನ್ನು ಸಾಹಿತ್ಯದ ಮೂಲಕ ನವೋದಯ ವಿಮರ್ಶೆಯು ವ್ಯಾಖ್ಯಾನಿಸಿರುವುದು ಕೂಡ ಅಷ್ಟೇ ಮುಖ್ಯ. ಅದರಲ್ಲಿಯೂ ಸಾಹಿತ್ಯವು ಸಂಸ್ಕಾರವನ್ನು ಒದಗಿಸುತ್ತದೆ, ಇತ್ಯಾದಿ ಹೇಳಿಕೆಗಳು ಸಾಹಿತ್ಯದ ಪ್ರಸ್ತುತತೆಯ ಪ್ರಶ್ನೆಯಾಗಿದೆ. ಬೇರೊಂದು ಮಾತಿನಲ್ಲಿ ಹೇಳಬೇಕೆಂದರೆ ನವೋದಯ ವಿಮರ್ಶೆಯು ಸಾಮಾಜಿಕ ಸೌಂದರ್ಯ ಶಾಸ್ತ್ರದ ಪ್ರಭಾವಲಯಕ್ಕೆ ಸಿಕ್ಕಿಲ್ಲ.

ಸಾಮಾನ್ಯ ಓದುಗನ ಅನುಭವವು ಎರಡು ಬಗೆಯಿಂದ ರೂಪುಗೊಳ್ಳುತ್ತದೆ. ಒಂದನೆಯದು, ಅವನ ಸಾಮಾಜಿಕ ಅನುಭವದಿಂದ. ಅವನ ಸಾಮಾಜಿಕ ಅನುಭವವು ಅವನ ಲೋಕಗ್ರಹಿಕೆಗೆ ಸಂಬಂಧಿಸಿದ್ದು ಮಾತ್ರವೇ. ಅವನ ಸ್ಥಾನಮಾನ ಅವನು ಇಟ್ಟುಕೊಳ್ಳುವ ಸಾಮಾಜಿಕ ಸಂಬಂಧದಿಂದ ರೂಪುಗೊಂಡಿರುತ್ತದೆ. ಎರಡನೆಯ ಅನುಭವವು – ಅವನು ಅಕ್ಷರಸ್ಥನಾಗಿದ್ದರೆ ಅವನು ಯಾವ ರೀತಿಯ ಕೃತಿಗಳನ್ನು ಓದುತ್ತಾನೆಯೋ ಅದರಿಂದ ಅದು ಪ್ರೇರಿತವಾಗಿರುತ್ತದೆ. ಸಾಮಾನ್ಯ ಓದುಗ ಕೃತಿಯನ್ನು ಸ್ವೀಕರಿಸುವುದು 'ಉದ್ದೇಶಿತ' ಮತ್ತು ಬೌದ್ಧಿಕ ಕಾರಣಕ್ಕಲ್ಲ. ವಿಮರ್ಶಕನ ಓದಿನ ಕ್ರಮವು ಬೇರೆ ರೀತಿಯದು. ವಿಮರ್ಶಕನ ಓದು ಮತ್ತು ಅದರ ಅನುಭವವು ರೂಪುಗೊಳ್ಳುವುದು ವಿಮರ್ಶಕನ ಬೌದ್ಧಿಕ ಮತ್ತು ಔದ್ಯೋಗಿಕ ಅಗತ್ಯಕ್ಕೆ ಅನುಸಾರವಾಗಿ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ – ವಿಮರ್ಶಕನ ಅನುಭವವು ಕೆಲವು ಸಂದರ್ಭಗಳಲ್ಲಿ ಅವನ ಸಾಮಾಜಿಕ ಆಸಕ್ತಿ ಮತ್ತು ಅರಿವಿನಿಂದ ಹುಟ್ಟಿರಬೇಕೆಂದೇನೂ ಇಲ್ಲ. ನವೋದಯ ವಿಮರ್ಶೆಯ ಸಂದರ್ಭದಲ್ಲಿ ವಿಮರ್ಶೆಯು ಪ್ರಾತಿನಿಧೀಕರಣವು ಒಡೆದು ತೋರುವ ಸಾಮಾಜಿಕ ಅಗತ್ಯಕ್ಕೆ ಅನುಸಾರವಾಗಿ ಹುಟ್ಟಿಲ್ಲ. ಅದರಲ್ಲಿಯೂ ಯೂರೋಪಿಯನ್ ಪರಂಪರೆಯ ರೊಮಾಂಟಿಕರ ವಿಮರ್ಶೆಯು ಸಮಾಜ ವಿರೋಧಿಯಾಗಿತ್ತು. ಆದರೆ ಕನ್ನಡ ನವೋದಯ ವಿಮರ್ಶೆಯು ಸಾಮಾಜಿಕ ಸಮಸ್ಯೆಗಳಾದ ಅನಕ್ಷರತೆ, ಜಾತಿ ಸಮಸ್ಯೆ, ಜಾಗತಿಕ ಆರ್ಥಿಕ ನೀತಿ, ಮಹಾಯುದ್ಧಗಳ ನಿಷ್ಠುರ ಪರಿಣಾಮಗಳ ಕುರಿತು ನಿಷ್ಠುರವಾದ ನಿಲುವನ್ನು ವ್ಯಕ್ತಪಡಿಸುವುದಿಲ್ಲ. ರಾಷ್ಟ್ರೀಯತೆ, ಕನ್ನಡ ನಾಡು - ನುಡಿಯ ಪ್ರಶ್ನೆಗಳನ್ನು ನವೋದಯ ವಿಮರ್ಶೆಯು ಪ್ರಸ್ತಾವಿಸುತ್ತದೆ. ನೇರವಾಗಿ [illegible] 'ಕೃತಿಯೊಂದರ [illegible]

ಒದು' ನವೋದಯ ವಿಮರ್ಶೆಗೆ 'ರಾಷ್ಟ್ರೀಯತೆ' ಪ್ರಾದೇಶಿಕ ಸಂಸ್ಕೃತಿಯ ಪ್ರಶ್ನೆಗಳಾದವು.

ಕೃತಿಯ ಹಿಂಸೆಯಾಗಲಿ, ಕೃತಿಯ ನಿಷ್ಠುರವಾದ ಮೌಲ್ಯ ಮಾಪನವಾಗಲಿ ನವೋದಯ ವಿಮರ್ಶೆಗೆ ಮುಖ್ಯವಾಗಿಲ್ಲ. ಅದರ ಧಾಟಿಯು ವಿನಯದ ರೂಪದ್ದು. ಕ್ಷೇತ್ರ ಪರಿಣತಿಯೊಂದಿಗಿರುವ ಸಂಕಥನ ವಿಧಾನವು ಅದಕ್ಕೆ ಮುಖ್ಯವಲ್ಲ. ಇದರಲ್ಲಿ ವ್ಯಕ್ತಿಯ ನೈತಿಕ ದೃಷ್ಟಿಕೋನ ಮತ್ತು ವ್ಯಕ್ತಿವಾದ ಹಾಗೂ ಉದಾರತೆಗಳು ಮಾತ್ರ ಹೆಚ್ಚು ತೀವ್ರವಾಗಿ ಕೆಲಸಮಾಡುತ್ತವೆ. ಸಾಮಾನ್ಯ ಓದುಗರಲ್ಲಿ ನೈತಿಕವಾದ ಮಾನವೀಯತೆಯು ಹುಟ್ಟಿಕೊಳ್ಳುವಂತೆ ನೋಡಿಕೊಳ್ಳುವುದು ನವೋದಯ ವಿಮರ್ಶೆಯ ಮತ್ತೊಂದು ಗುಣ. ಇದಕ್ಕಾಗಿ ನವೋದಯ ವಿಮರ್ಶಕರು ತುಂಬ ತಾಂತ್ರಿಕ ಪರಿಭಾಷೆಗಳು ಮತ್ತು ವಿಮರ್ಶಾತಂತ್ರಗಳನ್ನು ಬಳಸಿಕೊಳ್ಳಲು ಹೋಗುವುದಿಲ್ಲ. ಒಂದು ಉದಾಹರಣೆಯ ಮೂಲಕ ಇದನ್ನು ವಿವರಿಸಬಹುದು : ಕನ್ನಡದ ನವ್ಯವಿಮರ್ಶೆಯಾಗಲಿ, ಪ್ರಾಯೋಗಿಕ ವಿಮರ್ಶೆಯಾಗಲಿ ತಾಂತ್ರಿಕ ಪರಿಶುದ್ಧತೆಯನ್ನು, ಬೌದ್ಧಿಕ ಏಕಾಂತತೆಯ ದೃಷ್ಟಿಕೋನವನ್ನು ಹೊಂದಿದೆ. ನವ್ಯವಿಮರ್ಶೆಗೆ ಮಾನವನ ನೈತಿಕ ಅಭ್ಯುದಯ ಎನ್ನುವುದು ಮುಖ್ಯವಲ್ಲ. ಅದಕ್ಕೆ ತೀವ್ರವಾದ ಏಕಾಂತವಾದಿ ದೃಷ್ಟಿಕೋನ ವಿದೆ. ಆದುದರಿಂದ ನವ್ಯ ವಿಮರ್ಶೆಯು ವ್ಯಕ್ತಿ ಕೇಂದ್ರಿತ ಚಿಂತನೆಯ ಧಾಟಿಯನ್ನು ಇಟ್ಟುಕೊಂಡಿದೆ.




ಅವೈಯಕ್ತಿಕ ಎನ್ನಬಹುದಾದ, ವಸ್ತುನಿಷ್ಠತೆಯೆನ್ನುವುದು ನವೋದಯ ವಿಮರ್ಶೆಗೆ ಮುಖ್ಯವಲ್ಲ. ಈ ಅಂಶಗಳು ನವ್ಯವಿಮರ್ಶೆಗೆ ಮುಖ್ಯವಾದುವು. ನವ್ಯದ ವಿಮರ್ಶೆಯ ಪರಿಕರಗಳು ಇದರ ಮೂಲಕ ಸಿದ್ಧಗೊಂಡಿವೆಯೆನ್ನುವುದು ಗಮನಾರ್ಹ. ನವ್ಯವು ಸಾಹಿತ್ಯದ ಸ್ವಾಯತ್ತತೆಯನ್ನು ಒಪ್ಪುತ್ತದೆ. ಅದರ ಮೂಲಕ ಸಾಂಸ್ಕೃತಿಕ ವಿಮರ್ಶೆಯ ಕಡೆಗೆ ನವ್ಯ ವಿಮರ್ಶೆಯು ಕೈಚಾಚಿದರೂ ಅದರ ಮೂಲ ಗುಣಗಳು ಸಾಹಿತ್ಯದ ಅನನ್ಯತೆಯನ್ನು ಪ್ರತಿಪಾದಿಸುವಂಥವು. ನವ್ಯದಲ್ಲಿ ಬಂದಿರುವ ಸಂಸ್ಕೃತಿ ವಿಮರ್ಶೆಯೂ ಕೂಡ ಇದೇ ಆಗಿದೆ.

೧೯೫೦ರ ದಶಕದ ಕೊನೆಯ ಭಾಗದಿಂದ ಕನ್ನಡ ಸಾಹಿತ್ಯ ವಿಮರ್ಶೆಯ ಸ್ವರೂಪವು ಬದಲಾಯಿತು. ಸಾಹಿತ್ಯ ವಿಮರ್ಶೆಯ ತಾಂತ್ರಿಕ ಪದಗಳು ಬದಲಾದುದು ಈ ಕಾಲಘಟ್ಟದಲ್ಲಿ. ಕೀರ್ತಿನಾಥ ಕುರ್ತಕೋಟಿಯವರ ಪ್ರಕಾರ, ಪ್ರತಿಯೊಂದು ಕೃತಿಯ ವಿಮರ್ಶೆಯ ಪ್ರಮಾಣಗಳು ಆ ಕೃತಿಯಲ್ಲಿಯೇ ಅಡಗಿಕೊಂಡಿರುತ್ತವೆ. ಅಲ್ಲದೆ, ಸದೋಷ ಕೃತಿ ತನ್ನ ವಿಮರ್ಶೆಯ ಸಮಸ್ಯೆಗಳನ್ನು ತಾನೇ ಹೇಳಿಬಿಡುತ್ತದೆ ಎನ್ನುವುದು ಕುರ್ತಕೋಟಿಯವರ ಅಭಿಪ್ರಾಯ (ಯುಗಧರ್ಮ ಹಾಗೂ ಸಾಹಿತ್ಯ ವಿಕಾಸ).

ರಚನೆ, ರೂಪ, ಪ್ರಕಾರ, ಕಾವ್ಯತಂತ್ರ ಮುಂತಾದ ಪರಿಭಾಷೆಗಳು ಚಾಲ್ತಿಗೆ ಬಂದಿರುವುದು ನವ್ಯಕಾಲಘಟ್ಟದಲ್ಲಿ. ಇವುಗಳು ಮೂಲತಃ ಬಂಡವಾಳಶಾಹಿ ವ್ಯವಸ್ಥೆಯೊಂದಿಗೆ ರೂಪುತಳೆದ ಪರಿಭಾಷೆಗಳೂ ಹೌದು. 'ಕಾವ್ಯತಂತ್ರ'ವೆನ್ನುವುದಕ್ಕೂ 'ತಾಂತ್ರಿಕತೆ' ಎನ್ನುವುದಕ್ಕೂ ಇರುವ ಸಂಬಂಧಗಳು ಸ್ಪಷ್ಟ. ಇದರಿಂದಾಗಿ ನವ್ಯ ವಿಮರ್ಶೆಯು ಮೂಲತಃ ಕೆಲಸಮಾಡಿರುವುದು ಶೈಕ್ಷಣಿಕ ವಲಯದ ಆಸಕ್ತಿಗಾಗಿ. ಇದರಿಂದ ಸಾಮಾನ್ಯ ಓದುಗರ ನಿರೀಕ್ಷೆಗಳು, ಓದುಗರಿಗೆ ಮತ್ತು ಸಾಹಿತ್ಯ ಕೃತಿಗಳಿಗೆ ಇರುವ ಸಂಬಂಧಗಳ ನಡುವೆ ಅಂತರವು ಏರ್ಪಟ್ಟಿತು. ಸಾಹಿತ್ಯ ವಿಮರ್ಶೆಯಲ್ಲಿ ಮಾನವನ ಪ್ರಸ್ತುತತೆಯ ಪ್ರಶ್ನೆಯು ಬೇರೆಯಾಯಿತು. ಕೃತಿಯನ್ನು ವಿಮರ್ಶಿಸುವುದೆಂದರೆ ಕೃತಿಯನ್ನು ಆದರ್ಶ ರೂಪದಲ್ಲಿ ಗ್ರಹಿಸಿ ಮೌಲ್ಯ ನಿರ್ಣಯ ಮಾಡುವುದು ಎಂಬಂಥ ಸಾಂಸ್ಥಿಕ ಅಗತ್ಯಗಳಿಗೆ ತಕ್ಕಂಥ ಮಾತುಗಳು ಸಿದ್ಧವಾದವು. ಕೃತಿಯನ್ನು ಕೇಂದ್ರವಾಗಿ ಇರಿಸಿಕೊಳ್ಳುವ ಪ್ರಕ್ರಿಯೆಯಲ್ಲಿ 'ಮಾನವೀಕರಣ' ಮುಖ್ಯವಲ್ಲ. ಕೃತಿಯು ವಿಮರ್ಶೆಯ ಪ್ರಮುಖ ಲಕ್ಷ್ಯವೆಂದು ಹೇಳಿದಂತಾಯಿತು. ಇಷ್ಟರಮಟ್ಟಿಗೆ ನವ್ಯವಿಮರ್ಶೆಯು ಒಂದು ಶೈಕ್ಷಣಿಕ ಅಗತ್ಯವಾಗಿ ರೂಪುಗೊಂಡಿತು. ಶುದ್ಧ ಶೈಕ್ಷಣಿಕ ವಲಯದ ವಿಮರ್ಶೆಯು ಕೃತಿ ಪರೀಕ್ಷೆಗೆ ಅನೇಕ ಹತ್ಯಾರಗಳನ್ನು ಇರಿಸಿಕೊಂಡಿತು. ಸಾಹಿತ್ಯ ವಿಮರ್ಶೆಯನ್ನು ಬರೆಯುವವರೆಂದರೆ ವಿಶ್ವವಿದ್ಯಾನಿಲಯದ ಬೌದ್ಧಿಕ ವಲಯಕ್ಕೆ ಸೇರಿದವರು ಮತ್ತು ಸಾಂಸ್ಥಿಕ ಗ್ರಹಿಕೆಗಳಿಂದ ಸಾಹಿತ್ಯವನ್ನು ನಿರ್ವಚಿಸುವವರು ಎಂಬ ಪರಿಕಲ್ಪನೆಯು ಮೂಡಿತು.

೧೯೬೦ರ ದಶಕದ ವಿಮರ್ಶಕರಿಗೆ ಸಾಹಿತ್ಯ ನಿರ್ವಚನವೆಂದರೆ ಅದೊಂದು ಬೌದ್ಧಿಕ ವ್ಯಾಪಾರ. ಸಾಹಿತ್ಯ ಮತ್ತು ಮಾನವೀಯತೆಯ ಮತ್ತು ಮಾನವನ ಸಂಸ್ಕಾರದ ಪ್ರಶ್ನೆಯು ನವೋದಯ ವಿಮರ್ಶಕರಿಗೆ ಮುಖ್ಯವಾದಂತೆ ನವ್ಯ ವಿಮರ್ಶಕರಿಗೆ ಮುಖ್ಯವಾಗಲಿಲ್ಲ. ಕೊಂಚ ಒರಟು ಭಾಷೆಯಲ್ಲಿ ಹೇಳಬೇಕೆಂದರೆ – ನವ್ಯ ವಿಮರ್ಶಕರ ಸಾಂಸ್ಥಿಕ : ಸಾಂಸ್ಕೃತಿಕ ದೃಷ್ಟಿ ಒಂದು ಆಡಳಿತಾತ್ಮಕ ವ್ಯವಸ್ಥೆ.

ನವ್ಯ ವಿಮರ್ಶೆಯು ಪ್ರಮುಖವಾಗಿ ಚರ್ಚಿಸಿರುವುದು, ಸಾಹಿತ್ಯದ ಶ್ರೇಷ್ಠತೆಯನ್ನು. ಸಾಹಿತ್ಯ ವಿಮರ್ಶೆಯ ಮಟ್ಟಿಗೆ ನವ್ಯದ್ದು ಏಕ ತತ್ವ ; ಅದು ಕೃತಿಯಲ್ಲಿ ಏಕತೆಯನ್ನು ನಿರೀಕ್ಷಿಸುವ ಹಾಗೆಯೇ ಬಹುತ್ವವನ್ನು ನಿರಾಕರಿಸುತ್ತದೆ. ನವ್ಯದ ಪ್ರಾಯೋಗಿಕ ವಿಮರ್ಶೆಯ ವಿಧಾನವು ಇದಕ್ಕೆ ಅತ್ಯುತ್ತಮ ಸಾಕ್ಷಿಯಾಗಿದೆ. ಪ್ರಾಯೋಗಿಕ ವಿಮರ್ಶೆಯು ಸಾಮಾನ್ಯ ಭಾಷೆ ಮತ್ತು ಕಾವ್ಯಭಾಷೆಯೆನ್ನುವುದನ್ನು ಪ್ರಭೇದಗೊಳಿಸಿ ಕಾವ್ಯಭಾಷೆಗೆ ವಿಶಿಷ್ಟ ಸ್ಥಾನವನ್ನು ಕಲ್ಪಿಸಿತು. ಕಾವ್ಯಭಾಷೆಯು ವಿಶಿಷ್ಟ ಅಧ್ಯಯನಕ್ಕೆ ಯೋಗ್ಯವಾದುದು ಎಂದು ಅದು ಪರಿಭಾವಿಸಿತು. ಕಾವ್ಯಭಾಷೆಗೆ ಒಂದು ಸ್ವತಂತ್ರ ಅಸ್ತಿತ್ವವಿದೆಯೆಂದು ಪ್ರತಿಪಾದಿಸುವುದು ಈ ತರಹದ ಚಿಂತನೆಯ ಕ್ರಮದ ಹಿನ್ನೆಲೆಯಾಗಿದೆ. ಸಾಮಾನ್ಯ ಭಾಷೆಗೆ ಸಾಹಿತ್ಯದಲ್ಲಿ ಜಾಗವಿಲ್ಲ ಎಂದು ಅದು ಪರೋಕ್ಷವಾಗಿ ಹೇಳಿದಂತಾಯಿತು. ಈ ಮೂಲಕ ಜನರ ಆಡುನುಡಿಯನ್ನು ಅದು ಬರಿಯ ವ್ಯಾವಹಾರಿಕವೆಂದು ಕರೆದು ಭಾಷೆಯ ಬಳಕೆಯಲ್ಲಿ 'ವರ್ಗೀಕರಣ' ತತ್ವವನ್ನು ರೂಪಿಸಿತು. ಮತ್ತು ಸಾಹಿತ್ಯ ಸಂಕಥನದಿಂದ ಜನರನ್ನು ದೂರವಿಟ್ಟಿತು. ನವ್ಯ ವಿಮರ್ಶೆಯು ವಸ್ತುನಿಷ್ಠತೆಯನ್ನು ಹೆಚ್ಚು ಪ್ರತಿಪಾದಿಸಿತು. ವಸ್ತುನಿಷ್ಠತೆಯು ಒಂದು ದೃಷ್ಟಿಯಿಂದ ವ್ಯಕ್ತಿ ನಿರಪೇಕ್ಷತೆಯ ಕುರಿತು ಹೇಳಿತು. ಕೃತಿಯೊಂದರ ಪರಿಶೀಲನೆಯೆಂದರೆ ವಸ್ತು ಮತ್ತು ಅದರ ನಿರ್ವಹಣೆಯ ಕ್ರಮದ ಜೊತೆಗಿನ ಅನುಸಂಧಾನವೆಂದು ನವ್ಯ ವಿಮರ್ಶೆಯು ಪ್ರತಿಪಾದಿಸಿತು.

ನವ್ಯ ಸಾಹಿತ್ಯವು ಹೇಗೆ ಏಕಾಕಿತನದ ದ್ಯೋತಕವೋ ಅದೇ ರೀತಿ ನವ್ಯ ವಿಮರ್ಶೆಯೂ ಏಕಾಕಿತನದ ದ್ಯೋತಕ. ಇದರಿಂದ ವೈಯಕ್ತಿಕ ಪ್ರತಿಕ್ರಿಯೆ ಮತ್ತು ಬೌದ್ಧಿಕ ಏಕಾಂಗಿತನವು ನವ್ಯ ವಿಮರ್ಶೆಯಲ್ಲಿ ಕಾಣಿಸಿಕೊಂಡಿತು. ಅದು ಸಾಹಿತ್ಯವನ್ನು ಸಾಮಾಜಿಕ ಸಂರಚನೆಯಿಂದ ಬೇರೆಯಾಗಿ ನೋಡಿತು. ಇದರೊಂದಿಗೆ ನವ್ಯ ವಿಮರ್ಶೆಯು ಪರಂಪರೆಯ ಕುರಿತು ಮಾತಾಡಿದರೂ ಪರಂಪರೆಯೆಂದರೆ – ಅದು ನಿರ್ದಿಷ್ಟ ಪರಂಪರೆಯನ್ನು ಆಯ್ಕೆಮಾಡಿಕೊಳ್ಳುವುದು ಎಂಬುದನ್ನು ಪರೋಕ್ಷವಾಗಿ ಸೂಚಿಸಿತು.

ಓದಿನ ಮಟ್ಟಿಗೆ ನವ್ಯ ವಿಮರ್ಶಕರನ್ನು ರಸಿಕರೆಂದೋ, ಮುಗ್ಧರೆಂದೋ ಕರೆಯುವ ಹಾಗಿರಲಿಲ್ಲ. ನವ್ಯ ವಿಮರ್ಶೆಯ ಕಾಲದಲ್ಲಿ ಸಾಹಿತ್ಯ ವಿಮರ್ಶೆಯ ಸೈದ್ಧಾಂತಿಕ ಚಟುವಟಿಕೆಯು ಪ್ರಾರಂಭವಾಗಿರುವುದು ಗಮನಾರ್ಹ. ಅವರ ಸೈದ್ಧಾಂತಿಕ ಚಟುವಟಿಕೆಯು ಏಕಾಂತವಾದಿ, ಆದರ್ಶವಾದಿ ಚಟುವಟಿಕೆಗಳಿಂದ ಪ್ರೇರಿತವಾದ ನಿಲುವುಗಳಾಗಿದ್ದವು.

ನವ್ಯ ವಿಮರ್ಶೆಯ ಬೌದ್ಧಿಕ ಏಕಾಕಿತನವು ಜ್ಞಾನ ಕ್ಷೇತ್ರದ ರಾಜಕಾರಣವನ್ನು ಸೂಚಿಸುತ್ತದೆ. ಸಾಹಿತ್ಯ ವಿಮರ್ಶೆಯ ಮಟ್ಟಿಗೆ ವಿಮರ್ಶಕ ಜ್ಞಾನಕ್ಷೇತ್ರದ ಅಧಿಕಾರವನ್ನು ಪಡೆದುಕೊಂಡ. ಜ್ಞಾನ ಕ್ಷೇತ್ರದ ಅಧಿಕಾರ ಮತ್ತು ಸಾಹಿತ್ಯ ವಿಮರ್ಶೆ – ಇವುಗಳ ನಡುವೆ ಒಂದು ದ್ವಂದ್ವಾತ್ಮಕ ಸಂಬಂಧವು ಏರ್ಪಟ್ಟಿತು. ಸಾಹಿತ್ಯ ವಿದ್ಯಾರ್ಥಿಗಳನ್ನು ನಿರ್ದಿಷ್ಟವಾಗಿ ತರಬೇತಿಗೊಳಿಸುವ ಕಾರ್ಯಗಳು ಈ ಮೂಲಕ ನೆರವೇರಿದಂತಾಯಿತು.

ಸಾಹಿತ್ಯ ಪಠ್ಯವನ್ನು ವಸ್ತುನಿಷ್ಠ ಪದಗಳಿಂದ ವಿವರಿಸುವ ಮೂಲಕ ನವ್ಯ ವಿಮರ್ಶೆಯು ಬೂರ್ಜ್ವಾ ಸಮಾಜವು ಪ್ರತಿಪಾದಿಸಿದ ವೈಜ್ಞಾನಿಕ ಪ್ರಗತಿ ಪರಿಕಲ್ಪನೆಯನ್ನು ಪ್ರತಿಪಾದಿಸಿತು.

ಸಾಹಿತ್ಯವನ್ನು ಶಾಸ್ತ್ರೀಯವಾಗಿ ಓದುವ ಮತ್ತು ಗ್ರಹಿಸುವ ವಿಧಾನವು ನವ್ಯ ವಿಮರ್ಶೆಯ ಸಂದರ್ಭದಲ್ಲಿ ರೂಪುಗೊಂಡಿತು. ಇದು ನವ್ಯ ವಿಮರ್ಶೆಯ ಧನಾತ್ಮಕ ಅಂಶವೂ ಹೌದು.

ನವ್ಯ ವಿಮರ್ಶೆಯ ವಿಮರ್ಶಾತ್ಮಕ ಪರಿಕರವು ನವ್ಯ ಕಾಲದ ವಿಮರ್ಶಕರ ಸ್ವತಂತ್ರ ಮನೋವೃತ್ತಿಯ ಬೌದ್ಧಿಕ ಸ್ಥಾನಮಾನದ ಸೂಚನೆಯನ್ನು ನೀಡುತ್ತದೆ. ಆದುದರಿಂದ ವಿಮರ್ಶೆಗೂ ಅದರದೇ ಕೆಲಸಗಳಿವೆ.

**ಡಾ|| ಕೇಶವಶರ್ಮ ಕೆ.**
ಪ್ರವಾಚಕರು, ಕನ್ನಡಭಾರತಿ, ಕುವೆಂಪು ವಿಶ್ವವಿದ್ಯಾನಿಲಯ, ಜ್ಞಾನಸಹ್ಯಾದ್ರಿ - ೫೭೭ ೪೫೧, ಶಿವಮೊಗ್ಗ ಜಿಲ್ಲೆ

# ಅವರವರ ಸತ್ಯಗಳ ನಡುವೆ

## ಗಿರೀಶ್ ಕಾಸರವಳ್ಳಿಯವರ 'ನಾಯಿನೆರಳು' – ಒಂದು ನೋಟ

'ಅವರವರ ಸತ್ಯ ಅವರವರಿಗೆ ಪಥ್ಯ' ಅನ್ನುವ ಕೇಂದ್ರಬಿಂದುವನ್ನಿಟ್ಟುಕೊಂಡು ಕಥನವೊಂದನ್ನು ಕಟ್ಟುವ ಕೆಲಸವನ್ನು ಜಾಗತಿಕವಾಗಿ ಅನೇಕರು ಪ್ರಯತ್ನಿಸಿದ್ದಾರೆ. ಅಕಿರಾ ಕುರಾಸಾವಾನ 'ರಾಷೋಮನ್'ನಂತಹ ಸಿನಿಮಾದಿಂದ ಹಿಡಿದು ಗಿರೀಶ್ ಕಾಸರವಳ್ಳಿಯವರು ಈಚೆಗೆ ಚಿತ್ರಿಸಿ, ಪ್ರಶಸ್ತಿಗಳ ಮಹಾಪೂರವನ್ನೇ ತನ್ನದಾಗಿಸಿಕೊಂಡಿರುವ 'ನಾಯಿನೆರಳು'ವರೆಗೆ ಅನೇಕ ಕಥಾನಕಗಳು ಸಹೃದಯನ ಎದುರಿಗೆ ಈ ತತ್ವವನ್ನು ಇಟ್ಟಿವೆ. ಗಿರೀಶ್ ಕಾಸರವಳ್ಳಿಯವರ 'ನಾಯಿನೆರಳು' ನಮ್ಮೆಲ್ಲರ, ವಿಶೇಷವಾಗಿ ಸಿನಿಮಾ ಮತ್ತು ಸಾಹಿತ್ಯಾಸಕ್ತರ ಚರ್ಚೆಗೆ ಸಿಗುವುದು ವಿಭಿನ್ನ ಕಾರಣಕ್ಕೆ.

ಗಿರೀಶ್ ಕಾಸರವಳ್ಳಿಯವರು ತಯಾರಿಸುವ ಎಲ್ಲಾ ಚಿತ್ರಗಳೂ ಸಾಮಾನ್ಯವಾಗಿ ಯಾವುದಾದರೂ ಒಂದು ಸಾಹಿತ್ಯಕೃತಿಯನ್ನ ಆಧರಿಸಿರುತ್ತವೆ. ಈ ಬಾರಿ ಚಿತ್ರ ತಯಾರಿಸಲು ಅವರು ಎಸ್. ಎಲ್. ಭೈರಪ್ಪನವರ 'ನಾಯಿನೆರಳು' ಕಾದಂಬರಿಯನ್ನ ಆಧರಿಸಿದ್ದಾರೆ. ಎಸ್. ಎಲ್. ಭೈರಪ್ಪನವರು ನಮ್ಮ ನಾಡಿನ ಅತ್ಯಂತ ಜನಪ್ರಿಯ ಮತ್ತು ಬಹುಚರ್ಚಿತ ಲೇಖಕರಲ್ಲಿ ಒಬ್ಬರು. ಅವರು ಬರೆದ ಕೃತಿಗಳು ಅನೇಕ ಭಾಷೆಗಳಿಗೆ ಅನುವಾದಗೊಂಡು ಜಗತ್ತಿನಾದ್ಯಂತ ಓದುಗರನ್ನು ಪಡೆದಿವೆ. ಆದರೆ ಭೈರಪ್ಪನವರ ಕೃತಿಗಳಲ್ಲಿಯೇ ಅತ್ಯಂತ ತೆಳುವಾದ ಕೃತಿ 'ನಾಯಿನೆರಳು'. ಈ ಕಾದಂಬರಿಯಲ್ಲಿ ಭೈರಪ್ಪನವರು ಪುನರ್ಜನ್ಮ ವೃತ್ತಾಂತವನ್ನು, ಕರ್ಮಸಿದ್ಧಾಂತವನ್ನು ಮತ್ತು ವ್ಯಕ್ತಿ ತಾನು ಮಾಡಿದ ತಪ್ಪಿಗೆ ತಾನೇ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂಬ ಭಾರತೀಯ ವೇದಾಂತದ ಒಂದು ಶಾಖೆಯ ವಿವರಗಳನ್ನಿಟ್ಟುಕೊಂಡು ಕಥನ ಹೆಣೆಯುತ್ತಾರೆ. ಆ ಕಾದಂಬರಿಯಲ್ಲಿ ಅಚ್ಚಣ್ಣಯ್ಯ ಎಂಬಾತ 'ಮುನಿಯೊಬ್ಬನ ಕಮಂಡಲದಲ್ಲಿದ್ದ ಚಿನ್ನದ ನಾಣ್ಯವನ್ನು ಕದ್ದದ್ದೇ ತನ್ನ ಜೀವನದ ಎಲ್ಲಾ ಸಂಕಟಗಳಿಗೂ ಕಾರಣ' ಎಂದುಕೊಳ್ಳುತ್ತಾನೆ. ಕದ್ದುದನ್ನು ಹಿಂದಿರುಗಿಸುವ ಮೂಲಕ ತಾನು ಎಸಗಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ಈ ಹಾದಿಯಲ್ಲಿ ಅದೇ ಮುನಿಯೇ ತನ್ನ ಬೆಳೆದ ಮಗನ ಸಾವಿಗೆ ಕಾರಣ ಎಂತಲೂ, ಆ ಮಗನ ಪುನರ್ಜನ್ಮವಾಗಿರುವುದು ತನಗೆ ಬುದ್ಧಿ ಹೇಳುವುದಕ್ಕೆಂತಲೂ ಆತ ಭಾವಿಸುತ್ತಾನೆ. ಇಂತಹದೊಂದು ಕಥೆಯನ್ನು ಗಿರೀಶ್ ಕಾಸರವಳ್ಳಿಯವರಂತಹ ಸ್ತ್ರೀವಾದಿ ಚಿಂತಕರು ಹೇಗೆ ಚಿತ್ರಿಸುತ್ತಾರೆ ಮತ್ತು ಮೂಲಕಥೆಯಲ್ಲಿರುವ ಭೌತವಾದಿ ವಾಸ್ತವವಾದಿಗಳು ಒಪ್ಪದ ವಿವರಗಳನ್ನು ಹೇಗೆ ದಕ್ಕಿಸಿಕೊಳ್ಳುತ್ತಾರೆ ಎಂಬ ಕುತೂಹಲ ಅನೇಕರಿಗೆ ಇತ್ತು. ಜೊತೆಗೆ ಭೈರಪ್ಪನವರ ಕಾದಂಬರಿಯಲ್ಲಿ ಯಾವ ಹೆಣ್ಣುಪಾತ್ರಕ್ಕೂ ಪ್ರಾಧಾನ್ಯ ಇಲ್ಲದೆ ಇರುವಾಗ ಗಿರೀಶರು ಹೇಗೆ ಪಿತೃಪ್ರಧಾನ ವ್ಯವಸ್ಥೆಯ ಕಥೆಯೊಂದನ್ನು ಮರುಜೋಡಿಸುತ್ತಾರೆ ಎಂಬುದು ಈ ಕುತೂಹಲಕ್ಕೆ ಕಾರಣವಾಗಿತ್ತು.



ಗಿರೀಶ್ ತಮ್ಮ ಕಥನ ಕ್ರಮದಲ್ಲಿ, ಮೂಲದಲ್ಲಿ ಪ್ರಧಾನ ಪಾತ್ರವಾಗಿದ್ದ ಅಚ್ಚಣ್ಣಯ್ಯನ ಬದಲಿಗೆ ಆತನ ಸೊಸೆ ವೆಂಕಟಲಕ್ಷ್ಮಿಯನ್ನು, ಮೊಮ್ಮಗಳು ರಾಜಲಕ್ಷ್ಮಿಯನ್ನು ಮತ್ತು ಹೆಂಡತಿ ನಾಗಲಕ್ಷ್ಮಿಯನ್ನು ಪ್ರಧಾನವಾಗಿಸುತ್ತಾರೆ. ಚಿತ್ರದುದ್ದಕ್ಕೂ ಈ ಮೂರು ಪಾತ್ರಗಳೇ ಕಥೆಯನ್ನು ನಡೆಸುತ್ತವೆ. ಹೀಗೆ ಮಾಡುವ ಮೂಲಕ, ಪುನರ್ಜನ್ಮದ ಕಥೆ ಎಂದು ಮೇಲ್ನೋಟಕ್ಕೆ ಅನ್ನಿಸುವ ಕಥೆಯೊಂದನ್ನು ಬೇರೆಯದೇ ದೃಷ್ಟಿಕೋನದ ಜೊತೆಗೆ ಕಟ್ಟುವುದು ಗಿರೀಶ್ ಅವರಿಗೆ ಸಾಧ್ಯವಾಗಿದೆ.

ನಿರ್ಮಾತನನ್ನು ಮತ್ತು ನೋಡುಗನನ್ನು ಒಂದೇ ಪಾತಳಿಯಲ್ಲಿರಿಸುವಂತೆ ಮಾಡುವ ನಿರ್ಧಾರಕ ಅಂಶವು ಇರುವುದೇ ಇದರಲ್ಲಿ ಎಂದು ಆಲ್ಬರ್ಟ್ ಮಾರಿಸ್ ಹೇಳಿರುವುದನ್ನಿಲ್ಲಿ ನೆನೆಯಬಹುದು. 'ನಾಯಿನೆರಳು' ಚಿತ್ರದ ಸಂದರ್ಭದಲ್ಲಿ ಇದು ಮಹತ್ವದ್ದಾಗಿ ಪರಿಣಮಿಸುತ್ತದೆ. ಏಕೆಂದರೆ ಇಲ್ಲಿ ಆದಾಗಲೇ ಸಾಹಿತ್ಯಕೃತಿಯೊಂದನ್ನು ಓದಿ ಸಿದ್ಧನಾಗಿ ಬಂದ ನೋಡುಗನ ಎದುರಿಗೆ ಗಿರೀಶರು ಅದೇ ಕಥೆಯ ಮತ್ತೊಂದು ಮುಖವನ್ನು ಬಿಚ್ಚಿಟ್ಟು ಕೃತಿ ಮುಖ್ಯವಲ್ಲ, ಬದಲು ನೋಡುವ, ಅರ್ಥೈಸುವ ಕ್ರಮ ಮುಖ್ಯ ಎಂಬುದನ್ನು ಸಾಬೀತುಪಡಿಸುತ್ತಾರೆ. ಫ್ರೆಂಚ್ ಆವಾಂತ್‌ಗಾರ್ಡ್ ನಿರ್ದೇಶಕರು ಹೇಳುವ 'ಆಟಿಯರ್ ಥಿಯರಿ'ಯು ಇಲ್ಲಿ ಕೆಲಸ ಮಾಡಲು ಆರಂಭಿಸುತ್ತದೆ. (ಈ ಸಿದ್ಧಾಂತದ ಪ್ರಕಾರ ಚಿತ್ರ ನಿರ್ದೇಶಕನೇ ಕೃತಿಕಾರ. ಅವನಿಗೆ ಕ್ಯಾಮೆರಾ ಸ್ವತಃ ಲೇಖನಿಯಾಗುತ್ತದೆ.)

**ಕಥನ ಕ್ರಮ**

ಗಿರೀಶ್ ತಮ್ಮ ಹೊಸ ದೃಷ್ಟಿಕೋನವನ್ನು ತೆರೆದಿಡಲೆಂದು ಈ ಚಿತ್ರದಲ್ಲಿ ನಾಲ್ಕು ವಿಭಾಗಗಳನ್ನು ಮಾಡಿಕೊಳ್ಳುತ್ತಾರೆ. ಮೊದಲನೆಯದು ಆರಂಭ, ಎರಡನೆಯದು 'ನಾಗಲಕ್ಷ್ಮಿ'ಯ ಕಥೆ, ಮೂರನೆಯದು 'ರಾಜಲಕ್ಷ್ಮಿ'ಯ ಕಥೆ, ಕೊನೆಯದು 'ವೆಂಕಟಲಕ್ಷ್ಮಿ'ಯ ಕಥೆ. ಹೀಗೆ ಅತ್ತೆ, ಮಗಳು, ಕಡೆಗೆ ಸ್ವತಃ ಕಥೆಯ ಕೇಂದ್ರವ್ಯಕ್ತಿಯಾದ ವೆಂಕಟಲಕ್ಷ್ಮಿಯ ಕಥೆ ಎಂಬ ಕಟ್ಟಡಗಳ ಮೂಲಕ ಕಥನ ಇಲ್ಲಿ ರೂಪುಗೊಳ್ಳುತ್ತದೆ. ಮೊದಲ ವಿಭಾಗ ಹೊರತುಪಡಿಸಿ ಉಳಿದವುಗಳನ್ನು ಗುರುತಿಸಲಿಕ್ಕೆಂದು ಚಿತ್ರದಲ್ಲಿ ಉಪಶೀರ್ಷಿಕೆಗಳು ಸಹ ಬರುತ್ತವೆ. (ಗಿರೀಶ್ ತಮ್ಮ ಹಿಂದಿನ ಚಿತ್ರ 'ದ್ವೀಪ'ದಲ್ಲಿ ಋತುಮಾನಗಳನ್ನು ಕುರಿತ ಗಾದೆಗಳನ್ನು ವಿಭಾಗ ಗುರುತಿಸಲೆಂದು ಬಳಸಿದ್ದರು. ಹಾಗೆಯೇ 'ಹಸೀನಾ'ದಲ್ಲಿ





ಮುಸಲ್ಮಾನರು ಮಾಡುವ ಪ್ರತಿನಿತ್ಯದ ಐದು ಪ್ರಾರ್ಥನೆಗಳನ್ನು ಗುರುತಿಸಲು ಬಳಸುವ ಹೆಸರುಗಳನ್ನು ಬಳಸಿದ್ದರು. ಅಲ್ಲಿ ಈ ಶೀರ್ಷಿಕೆಗಳು ಕಥೆಯ ಕಾಲಾಂತರವನ್ನು ಸೂಚಿಸಲು ಮಾತ್ರ ಬಳಕೆಯಾಗಿದ್ದವು. 'ನಾಯಿನೆರಳು'ವಿನಲ್ಲಿ ಈ ವಿಭಾಗೀಕರಣದ ಮೂಲಕವೇ ವಿಷಯಾಂತರ ಹಾಗೂ ಪಲ್ಲಟಗಳನ್ನು ಸಾಧಿಸಲು ಗಿರೀಶ್ ಪ್ರಯತ್ನಿಸಿದ್ದಾರೆ.) ಈ ಕ್ರಮವು, ಅರಿಸ್ಟಾಟಲನ ಕಾವ್ಯಮೀಮಾಂಸೆಯ ಆರಂಭ, ಮಧ್ಯ ಮತ್ತು ಅಂತ್ಯ ಎಂಬ ಪಾಶ್ಚಾತ್ಯ ಕ್ರಮಕ್ಕಿಂತ ದೂರ ಉಳಿದು ಭಾರತೀಯ ಕಾವ್ಯ ಪರಂಪರೆಯಲ್ಲಿರುವ ಕಥನ ಕ್ರಮದ ಹಾಗೆ, ಪ್ರಧಾನ ಕಥೆಗೆ ಅನೇಕ ಉಪಕಥೆಗಳನ್ನು ತಾಗಿಸುವ ಮೂಲಕ ಆಲದ ಮರ ಮತ್ತು ಬಿಳಿಲುಗಳ ವಿನ್ಯಾಸದ ಕ್ರಮವನ್ನು ಗಿರೀಶರು ರೂಪಿಸುತ್ತಾರೆ. ನಿಜಕ್ಕೂ ಇದೊಂದು ಜಾಣತನದ ಆಯ್ಕೆ. ಇಂತಹ ಕ್ರಮದ ಮೂಲಕ ಕಥೆಯೊಳಗಿನ ಹಲಕೆಲವು ವರ್ಷಗಳನ್ನು ದಾಟಿಕೊಳ್ಳುವುದು ಮಾತ್ರವಲ್ಲದೆ, ಪ್ರತಿ ವಿಭಾಗಕ್ಕೂ ತನ್ನದೇ ಸ್ವತಂತ್ರ ಅಸ್ತಿತ್ವ ದಕ್ಕಿಸುವ ಪ್ರಯತ್ನವೂ ಜರುಗುತ್ತದೆ. ಇಲ್ಲಿ ಬರುವ ನಾಲ್ಕು ಪ್ರತ್ಯೇಕ ವಿಭಾಗಗಳು ಪರಸ್ಪರವಾಗಿ ಸ್ವತಂತ್ರವೂ ಹೌದು, ಒಟ್ಟಾರೆಯಾಗಿ ನೋಡಿದಾಗ ಅವು ಒಂದೇ ಕೃತಿಯ ವಿವರಗಳು ಎನಿಸುವುದೂ ಹೌದು. ಈ ಕ್ರಮ ನಮ್ಮ ಚಿತ್ರರಂಗಕ್ಕೆ ಅಪರೂಪದ್ದು.

ಹೀಗೆ ರೂಪಿತವಾದ ಮೊದಲ ಅಂಕದಲ್ಲಿ ಪಾತ್ರಗಳು ಪರಿಚಯವಾದೊಡನೆಯೇ ವೆಂಕಟಲಕ್ಷ್ಮಿಯ ಸತ್ತ ಗಂಡನು ಪುನಃ ಅದ್ಯಾವುದೋ ಊರಲ್ಲಿ ಜನಿಸಿದ್ದಾನೆ ಎಂಬ ಸುದ್ದಿಯು ಅಚ್ಚಣ್ಣಯ್ಯನಿಗೆ ದೊರೆಯುತ್ತದೆ. ಮಲೆನಾಡಿನ ದೇವಸ್ಥಾನಗಳು, ಹಸಿರು ತುಂಬಿದ ಕಾನನ, ಅದರ ಭವ್ಯತೆಯ ನಡುವೆಯೇ ಹುಟ್ಟುವ ಹೊಸ ಪ್ರಶ್ನೆಗಳು ನಿಗೂಢವನ್ನು ಹಾಗೂ ಕೌತುಕವನ್ನು ಮೂಡಿಸುತ್ತವೆ. ಆ ಮೂಲಕ, ಸಾಮಾನ್ಯವಾಗಿ ರೂಢಿಯಲ್ಲಿರುವಂತೆ ಕೇಂದ್ರಸಂಘರ್ಷವನ್ನು ತಡವಾಗಿ ಹೇಳುವಬದಲು, ಚಿತ್ರದ ಮೊದಲ ದೃಶ್ಯದಲ್ಲಿಯೇ ಕಥಾಕೇಂದ್ರವನ್ನು ಮುಟ್ಟುವ ಮೂಲಕ, ಗಿರೀಶರು ಕಥನಪ್ರವೇಶ ಸಾಧಿಸುತ್ತಾರೆ, ಜೊತೆಜೊತೆಯಾಗಿ ಕಥನದ ಒಳಗಿರುವ ಉಳಿದೆಲ್ಲಾ ಪಾತ್ರಗಳನ್ನು ಪರಿಚಯಿಸುತ್ತಾರೆ.



ಎರಡನೆಯ ಭಾಗ 'ನಾಗಲಕ್ಷ್ಮಿ'ಯದು: ಈಕೆ ಅಚ್ಚಣ್ಣಯ್ಯನ ಹೆಂಡತಿ. ಈ ಭಾಗದ ಪ್ರಧಾನ ಆಶಯ – ಪ್ರೀತಿ. ಉಬ್ಬುಸದಿಂದ ಸಾಯುವ ಹಂತದಲ್ಲಿರುವ ನಾಗಲಕ್ಷ್ಮಿಗೆ ನನ್ನ ಮಗ ಎಲ್ಲೋ ಹುಟ್ಟಿದ್ದಾನೆ. ಅವನು ಮರಳಿ ಮನೆಗೆ ಬಂದರೆ ತಾನು ಉಳಿಯುತ್ತೇನೆ ಎಂಬ ಪೌತ್ರಪ್ರೀತಿ. ಇಂತಹ ಪುನರ್ಜನ್ಮ ವ್ಯಾಖ್ಯೆಯನ್ನು ನಂಬದ ಅಚ್ಚಣ್ಣಯ್ಯನವರಿಗೆ (ಕಾದಂಬರಿಯ ನಿಲುವಿನಿಂದ ಇಲ್ಲಿ ಗಿರೀಶರು ಬೇರೆಯಾಗಿ ಉಳಿಯುತ್ತಾರೆ.) ಸಾಯುತ್ತಿರುವ ಮಡದಿ ಇನ್ನಷ್ಟು ದಿನ ಉಳಿಯಲಿ ಎಂಬ ಮಡದಿಪ್ರೀತಿ. ಆ ಊರಿನವರಿಗೆ ಇಂತಹ ಪುನರ್ಜನ್ಮದ ಪವಾಡ ನಡೆದಿರಬಹುದೇ ಎಂಬ ಕುತೂಹಲ ಕುರಿತು ಕೌತುಕಮಯಪ್ರೀತಿ. ತನಗೊದಗಿಬಂದ ಜೀವನವನ್ನು ಹಾಗೇ ನಡೆಸಿಕೊಂಡು ಹೋಗುವ, ವೈಧವ್ಯದ ಭಾರವನ್ನೂ ಅತ್ಯಂತ ಪ್ರೀತಿಯಿಂದ ಸ್ವೀಕರಿಸುವ ವೆಂಕಟಲಕ್ಷ್ಮಿಗೆ ತನ್ನೆದುರಿಗೆ ಧುತ್ತೆಂದು ಪ್ರತ್ಯಕ್ಷನಾಗುವ ಗಂಡನ ಆತ್ಮ ಹೊತ್ತಿದ್ದೇನೆ ಎನ್ನುವ 'ವಿಶ್ವ'ನ ದೇಹದಿಂದ ಸಿಗುವ ಹೊಸ ಉತ್ಸಾಹ, ಪ್ರೀತಿ. ಹೀಗೆ 'ನಾಗಲಕ್ಷ್ಮಿ'ಯ ಕಥನದಲ್ಲಿ ಅನೇಕ ಪ್ರೀತಿಗಳು ಮತ್ತು ಅವುಗಳನ್ನು ಸ್ವೀಕರಿಸುವುದೋ-ನಿರಾಕರಿಸುವುದೋ ಎಂಬಂತಹ ಪ್ರಶ್ನೆಗಳು ದಾಳಿಯಿಟ್ಟು, ಅಂತಿಮವಾಗಿ ದುಷ್ಯಂತ-ಶಕುಂತಲೆಯರಂತಹ ಪ್ರಕರಣವೊಂದರಲ್ಲಿ ವೆಂಕಟಲಕ್ಷ್ಮಿಯು ತನ್ನ ಮಗಳ ವಯಸ್ಸಿನವನಿಗೆ ದೇಹ ಒಪ್ಪಿಸುವ ಮತ್ತು ಹೊಸ ಜೀವನವನ್ನು ಅಪ್ಪಿಕೊಳ್ಳುವ ವಿವರಗಳಾಗಿ ಬರುತ್ತವೆ.

ಮೂರನೆಯ ಭಾಗ 'ರಾಜಲಕ್ಷ್ಮಿ' : ಇದು ಜೀವನವು ತಂದೊಡ್ಡುವ ಹೊಸ ಪ್ರಶ್ನೆಗಳನ್ನು ಕುರಿತ ಭಾಗ. ಇಲ್ಲಿ ವೆಂಕಟಲಕ್ಷ್ಮಿಯ ಹೊಸ ಸಂಬಂಧ ಕುರಿತು ಮೊದಲ ಪ್ರಶ್ನೆ ತೆಗೆಯುವವಳು ನಗರದಲ್ಲಿ ಓದುತ್ತಿರುವ ವೆಂಕುವಿನ ಮಗಳಾದ ರಾಜಲಕ್ಷ್ಮಿ. ಆ ಪ್ರಶ್ನೆಯ ಬೆನ್ನಿಗೆ ನಾಗಲಕ್ಷ್ಮಿಯು ತಾನೇ ವೆಂಕುವನ್ನು ಒತ್ತಾಯಿಸಿ ತನ್ನ 'ಮಗ'ನ ಜೊತೆ ಹಸಿರು ಸೀರೆಯುಟ್ಟು ಮಾತಾಡು ಎಂದು ತಾನೇ ಹೇಳಿದ್ದರೂ ಅವನೊಡನೆ ವೆಂಕುವು ದೇಹ ಹಂಚಿಕೊಳ್ಳುವುದನ್ನು ವಿರೋಧಿಸುವ ಮಾತಾಡುತ್ತಾಳೆ. ವೆಂಕಟಲಕ್ಷ್ಮಿ ಈ 'ಹಾದರ' ಕುರಿತ ಪ್ರಶ್ನೆಗಳ ನಡುವೆ ಒಂಟಿಯಾಗುವಾಗಲೇ ಮಗಳಾದ ರಾಜಲಕ್ಷ್ಮಿಯು ತನ್ನ ತಾತನಿಗೆ ಹೇಳಿ ಅಪ್ಪನ ಶ್ರಾದ್ಧ ಮಾಡಿಸುತ್ತಾಳೆ. ಆ ಮೂಲಕ 'ಸತ್ತಿರುವವನು ಎಂದೋ ಸತ್ತಾಯಿತು. ಆತನ ಹೆಸರಲ್ಲಿ ಮತ್ತೊಂದು ಸಂಬಂಧ ತರವಲ್ಲ' ಎಂಬ ತನ್ನ ನಿಲುವನ್ನು ತಾಯಿಗೆ ತಲುಪಿಸುತ್ತಾಳೆ. ಮಗಳ ನಿಲುವಿಗೆ ತಾರ್ಕಿಕ ಉತ್ತರ ಹೇಳಲಾಗದ ವೆಂಕು ಒದ್ದಾಡುವಾಗಲೇ ಅಚ್ಚಣ್ಣಯ್ಯನನ್ನು ಇಡೀ ಊರಿನವರು ಪ್ರಶ್ನಿಸುತ್ತಾರೆ. 'ನಾನೇ ಸತ್ತ ರಾಮಣ್ಣ' ಎಂದು ಬಂದವನನ್ನು ಮಗ ಎನ್ನುವುದು ಸರಿ. ಆದರೆ ವೆಂಕಟಲಕ್ಷ್ಮಿಯ ದೇಹವನ್ನು ಆತ ಹಂಚಿಕೊಳ್ಳುವುದು ನೈತಿಕವಲ್ಲ ಎನ್ನುತ್ತಾರೆ ಊರಿನವರು. ಹೀಗೆ ಪ್ರಶ್ನೆಗಳ ಸರಮಾಲೆಯೊಡನೆ ವೆಂಕಟಲಕ್ಷ್ಮಿಗೆ ಕಾರ್ಯಕಾರಣ ಸಂಬಂಧದಿಂದ ಒದಗಿಬಂದಿರುವ ಹೊಸ ಬದುಕಿನ ಸತ್ಯ ಎಲ್ಲರಿಗೂ ಸಾಬೀತಾಗದೆ ಹಾಗೆಯೇ ಉಳಿಯುತ್ತದೆ. ಇವೆಲ್ಲವೂ 'ನಂಬಿಕೆಗಳು ಸಹ ಅನುಕೂಲ ಸಿಂಧುವೇ?' ಎಂಬ ಅನುಮಾನವನ್ನು ನೋಡುಗನಲ್ಲಿ ಬಿತ್ತುತ್ತವೆ. ವಿಶ್ವನೊಡನೆ ಬೆಳೆಸಿಕೊಂಡ ಸಂಬಂಧ ಮತ್ತು ಅದರಿಂದ ತನ್ನೊಳಗೆ ಮೂಡುತ್ತಿರುವ ಹೊಸಜೀವದ ಭವಿಷ್ಯವು ವೆಂಕುವಿಗೆ ಪ್ರಶ್ನೆಯಾಗಿಯೇ ಉಳಿಯುತ್ತದೆ.

ನಾಲ್ಕನೆಯ ಭಾಗ 'ವೆಂಕಟಲಕ್ಷ್ಮಿ' : ಈ ವರೆಗೆ ನಂಬಿಕೆ ಎಂಬ ತರ್ಕ ಮತ್ತು ಅದು ಬದುಕಿಗೆ ಒದಗಿಸುವ ತಿರುವುಗಳನ್ನು ಕುರಿತು ಮಾತಾಡುತ್ತಿದ್ದ ಚಿತ್ರವು ಇಲ್ಲಿ ತರ್ಕಾತೀತ ವಿವರಗಳ ಮೂಲಕ ಬೆಳೆಯುತ್ತದೆ, ವೆಂಕಟಲಕ್ಷ್ಮಿಯಲ್ಲಿ ಮೂಡುವ ಸ್ವತಂತ್ರ ವ್ಯಕ್ತಿತ್ವವನ್ನು ಕುರಿತು ಮಾತಾಡುತ್ತದೆ. ಮಲೆನಾಡಿನ ಸುಂದರ, ಆದರೆ ಭಯಾನಕವಾದ ನೆರಳಿನ ಬದಲಿಗೆ ವೆಂಕಟಲಕ್ಷ್ಮಿಯು ಸಮುದ್ರದ ಹಿನ್ನೀರಿನಲ್ಲಿ ಮೂಡಿರುವ ಕುರ್ವೆಯೊಂದರಲ್ಲಿ ಬದುಕು ಸಾಗಿಸಲು ನಿರ್ಧರಿಸುತ್ತಾಳೆ. ಅಲ್ಲಿ ಅವನೊಬ್ಬ ಸೋಮಾರಿ ಅಥವಾ ನಿರ್ಲಿಪ್ತ ಎಂಬ ಅರಿವು ಉಂಟಾದಾಗಲೂ ತನ್ನ ಮಗನ ವಯಸ್ಸಿನ ಗಂಡನೊಂದಿಗೆ ಬದುಕಲಿಚ್ಛಿಸುವ ವೆಂಕುವಿಗೆ ಅಚ್ಚರಿಯಾಗುವಂತೆ ವಿಶ್ವ ಅನೇಕ ಬಾನಗಡಿಗಳನ್ನು ಮಾಡಿಕೊಳ್ಳುತ್ತಾನೆ. ಆತ ಯಾರದೋ ಪುನರ್ಜನ್ಮದ ಅವತಾರ ಅಲ್ಲ ಎನ್ನುವ ಅನೇಕ ಸಣ್ಣಪುಟ್ಟ ವಿವರಗಳು ಬಿಚ್ಚಿಕೊಳ್ಳುತ್ತಾ ಹೋದಂತೆ, ವಿಶ್ವ ತಾನೇ ಮಾಡಿದ ತಪ್ಪಿನಿಂದಾಗಿ ಜೈಲು ಸೇರುತ್ತಾನೆ. ವೆಂಕು ಗಂಡನಿಗಾಗಿ ಕೋರ್ಟು, ಜೈಲು ಎಂದೆಲ್ಲಾ ಅಲೆಯುತ್ತಾಳೆ. ಕಾನೂನು ವಿಶ್ವನನ್ನು ಶಿಕ್ಷಿಸುತ್ತದೆ. ವೆಂಕು ಹೊಸ ಗಂಡನಿಂದ ದೊರೆತ ಹೆಣ್ಣುಮಗುವನ್ನು ನೋಡಿಕೊಳ್ಳುತ್ತಾ ಒಂಟಿಯಾಗುತ್ತಾಳೆ. ಆಗಲೇ ಅವಳನ್ನು ಮರಳಿ ತನ್ನೂರಿಗೆ ಕರೆದೊಯ್ಯಲು ಬರುವ ಅಚ್ಚಣ್ಣಯ್ಯ ಮತ್ತು ರಾಜಲಕ್ಷ್ಮಿ ಇಬ್ಬರಿಗೂ ತಾನು ಅಲ್ಲೇ ಇದ್ದು ಸ್ವತಂತ್ರವಾಗಿ ಉಳಿಯುತ್ತೇನೆ ಎನ್ನುವ ವೆಂಕಟಲಕ್ಷ್ಮಿಯ ತೀರ್ಮಾನ ಕೇಳಿ ಅಚ್ಚರಿಯಾಗುತ್ತದೆ. ವೆಂಕಟಲಕ್ಷ್ಮಿಯು, 'ಮರಳಿ ಬರುವ ಗಂಡನಿಗೆ ಕಾಯುತ್ತೇನೆ. ಅವನು ಬಂದರೂ ಸರಿ, ಬಾರದಿದ್ದರೂ ಸರಿ' ಎಂಬರ್ಥವುಳ್ಳ ಮಾತಾಡಿದಾಗ ರಾಜಲಕ್ಷ್ಮಿಯು ತಾಯಿಯ ಬಗ್ಗೆ ಅತೀವ ಕುತೂಹಲ ತೋರುತ್ತಾಳೆ. ಅವಳು, 'ನಿನಗೆ ಆತನ ಮೇಲೆ ಅನುಮಾನವೇ ಬರಲಿಲ್ಲವಾ?' ಎನ್ನುವಾಗ ವೆಂಕು ಅತ್ಯಂತ ಸರಳವಾಗಿ, 'ಅನುಮಾನ ಹುಟ್ಟುವುದಕ್ಕೆ ಮೊದಲು ನಂಬಿಕೆ ಇರಬೇಕಲ್ಲವೇ ?' ಎನ್ನುತ್ತಾಳೆ. ಆ ಮೂಲಕ ಅವಳು, ತನಗೆ ಈ ಪುನರ್ಜನ್ಮ ವೃತ್ತಾಂತದಲ್ಲಿ ನಂಬಿಕೆಯೇ ಇರಲಿಲ್ಲ ಎಂಬುದನ್ನು ವ್ಯಕ್ತಪಡಿಸುತ್ತಾಳೆ. (ಇದು ಸಹ ಕಾದಂಬರಿಯಲ್ಲಿರುವ ಕಥನದಿಂದ ದೂರ ಸರಿವ ಪ್ರಯತ್ನವಾಗಿದೆ. ಕಾದಂಬರಿಯ ಕಥನ ಚೌಕಟ್ಟಿನ ಒಳಗಡೆಯೇ, ಅವೇ ಪಾತ್ರಗಳನ್ನು ಬಳಸಿಕೊಂಡು ಗಿರೀಶ್ ಬೇರೆಯದೇ ದೃಷ್ಟಿಕೋನವನ್ನು ಮುಂದಿಡುತ್ತಾರೆ.) ವೆಂಕಟಲಕ್ಷ್ಮಿ ತಾನು ಅವರಿವರು ಹೇಳಿದಂತೆ ನಡೆದುಕೊಂಡು, ಬದುಕು ಸಾಗಿದೆಡೆಗೆ ಬಂದೆ ಎನ್ನುತ್ತಾಳೆ. ನಂತರ ಮಗುವನ್ನು ಕಂಕುಳಲ್ಲಿ ಹಿಡಿದುಕೊಂಡೇ, ಸಮುದ್ರ ದಾಟಿ ಹೊರಡುವ ದೊಡ್ಡ ಮಗಳನ್ನು ಕಳಿಸಿಕೊಡುತ್ತಾಳೆ. ವೆಂಕು ಒಂಟಿಯಾಗಿ ಹಿನ್ನೀರಿನ ದಡದಲ್ಲಿ ನಿಂತು ಕೈ ಬೀಸುವುದು ಸ್ತ್ರೀ ಶಕ್ತಿಯ ಸಂಕೇತವಾಗಿ ಕಾಣಿಸುತ್ತದೆ. ಅದರೊಂದಿಗೆ ವೆಂಕುವಿನ ಹೊಸ ಮಗುವಾದ ಭಾರತಿಯ ಕೈಯಲ್ಲಿರುವ ಹಕ್ಕಿಯ ಗೊಂಬೆಯು ಸ್ವಾತಂತ್ರ್ಯದ ಸಂಕೇತವಾಗಿಯೂ ಕಾಣುತ್ತದೆ.

ಹೀಗೆ ನಾಲ್ಕು ಭಾಗಗಳಲ್ಲಿ ಹರಡಿಕೊಂಡಿರುವ ಕಥನವೊಂದು ನೋಡುವ ಪ್ರತಿಯೊಬ್ಬನಿಗೂ ಅಲ್ಲಿನ ಘಟನೆಗಳು ತನ್ನದೇ ಅನುಭವವಾಗಿ ದಕ್ಕುವುದರಿಂದಾಗಿಯೇ 'ನಾಯಿನೆರಳು' ಮೂಲಕೃತಿಕಾರನನ್ನು ಮೀರಿ, ಅದೊಂದು ಗಿರೀಶರ ಪ್ರತ್ಯೇಕ ಸೃಷ್ಟಿ ಎನಿಸಿಬಿಡುತ್ತದೆ. ಇದು ಸಾಹಿತ್ಯ ಪ್ರಕಾರದಿಂದ ಸಿನಿಮಾ ಮಾಧ್ಯಮಕ್ಕೆ ಬಂದಂತಹ ಕೃತಿಯೊಂದರ ಸಾಧನೆಯಾಗಬೇಕು ಎಂದು ವಿಚಾರಸಂಕಿರಣಗಳಲ್ಲಿ ಹಲವರು ಹೇಳಿರುವುದುಂಟು.



'ನಾಯಿನೆರಳು'ವಿನಲ್ಲಿ ಗಿರೀಶರು ಆ ಮಾತನ್ನು ಸ್ವತಃ ಕೃತಿಗಿಳಿಸುವ ಕಾರ್ಯದಲ್ಲಿ ಯಶಸ್ವಿಯಾಗುತ್ತಾರೆ.

### ಸ್ಕೋಪ್ ಮತ್ತು ಕ್ಯಾಮೆರಾ

''ಆಡಂ ಸಿಟ್ನಿ ಒಂದೆಡೆ ಹೇಳುವ ಮಾತಿನ ಸಂಕ್ಷಿಪ್ತ ರೂಪ ಇದು: ಭಾವನಾತ್ಮಕ ಚಲನಚಿತ್ರವು ಚಿತ್ರದ ನಿರ್ದೇಶಕನನ್ನು ಮೊದಲ ಸಮರ್ಥಕನನ್ನಾಗಿ ಮಾಡುತ್ತದೆ. ಅವನ ಭಾವನೆಗಳು ಚಿತ್ರದ ಭಾವನೆಗಳ ಪ್ರತಿರೂಪ. ಅಂತಹ ನಿರ್ದೇಶಕನು ಸಿನಿಮಾದ ಉದ್ದಕ್ಕೂ ಅಚ್ಚಳಿಯದೆ ಕಾಣುತ್ತಿರುತ್ತಾನೆ. ಇಲ್ಲಿ ನಾಯಕ ಬೇರೊಬ್ಬನಿಲ್ಲ. ಬದಲಾಗಿ ನಾವು ನೋಡುವುದು ಚಲನೆ. ಆದರ ವೀಕ್ಷಕನಾಗಿ ನಿರ್ದೇಶಕ ಸದಾ ಇರುತ್ತಾನೆ.'' ಈ ಮಾತಿನಂತಹ ಸಿನಿಮಾಗಳು ನಮ್ಮ ನಾಡಿನಲ್ಲಿ ನೋಡಸಿಗುವುದು ದುರ್ಲಭ. ಇಂತಹ ಸಿನಿಮಾಗಳನ್ನು ಅರವತ್ತರ ದಶಕದ ಸಂಯೋಜನೆಯ ಸಿನಿಮಾಗಳು ಎಂದು ಪಾಶ್ಚಾತ್ಯ ಸಿನಿಮಾತಜ್ಞರು ಗುರುತಿಸುತ್ತಾರೆ. ಅದು ಬಹುಮಟ್ಟಿಗೆ ನಮ್ಮ ದೇಶದಲ್ಲಿಯೂ ಬಳಕೆಯಾಗುತ್ತಿರುವಂತಹ ಮಾತು. ನಾವು ವಿ. ಕೆ. ಮೂರ್ತಿಯವರ ಛಾಯಾಗ್ರಹಣವುಳ್ಳ 'ಪ್ಯಾಸಾ', 'ಕಾಗಜ಼್ ಕೆ ಫೂಲ್' ನಂತಹ ಚಿತ್ರಗಳನ್ನು ಮೆಚ್ಚಿಕೊಳ್ಳುವುದು ಇದೇ ಕಾರಣಕ್ಕೆ. ಮೂರ್ತಿಯವರ ನಂತರ ಅಂತಹ ಛಾಯಾಗ್ರಹಣದ ಪ್ರಯತ್ನಗಳು ಹೊಸ ಅಲೆಯಲ್ಲಿ ಸಾಕಷ್ಟು ಆಗಿವೆ. ಆದರೆ ವರ್ಣಚಿತ್ರಗಳ ಆಗಮನದ ನಂತರ ಇಂತಹ ಸಂಯೋಜನೆಗಳನ್ನು ಬಿಟ್ಟುಕೊಡಲಾಗಿದೆ. ಆಧುನಿಕ ಸಿನಿಮಾದಲ್ಲಿ ಈಗ ಬಳಕೆಯಾಗುತ್ತಿರುವುದು ಜಾಹಿರಾತು ಸಂಸ್ಕೃತಿಯು ಪ್ರಚಾರಕ್ಕೆ ತಂದಂತಹ ಸಂಯೋಜನೆಗಳು. ಇಂತಹ ಸಂಯೋಜನೆಗಳಲ್ಲಿ ಕಣ್ಣಿಗೆ ರಾಚುವ ಗುಣ ಮಾತ್ರ ಮುಖ್ಯವಾಗಿ ಭಾವಗಳು ನಾಪತ್ತೆಯಾಗಿ ಬಿಡುತ್ತವೆ. ಇದನ್ನು ಬಿಟ್ಟುಕೊಟ್ಟು ಇಂದು ವರ್ಣ ಚಿತ್ರವೊಂದನ್ನು ತಯಾರಿಸುವುದು ದುಸ್ಸಾಧ್ಯ. ಹಾಗಾಗಿಯೇ ಭಾರತದಲ್ಲಿನ ಪ್ರಯೋಗಪ್ರಿಯರು ಸಿನಿಮಾಸ್ಕೋಪ್‌ನಂತಹ ತೆರಪನ್ನು ಬಳಸುವ ಬದಲು ೩೫ ಎಂ.ಎಂ. ಮಾತ್ರ ಬಳಸುವ ಮೂಲಕ ಭಿನ್ನತೆಯನ್ನು ಸಾಧಿಸಲು ಪ್ರಯತ್ನಿಸುತ್ತಿದ್ದರು ಎನಿಸುತ್ತದೆ.

ಈ ತನಕ ಕನ್ನಡದ ಹೊಸ ಅಲೆಯ ಚಿತ್ರ ಚಳುವಳಿಯು ಕೂಡ ಈ ೩೫ ಎಂ.ಎಂ. ಎಂಬ ಸಾಂಪ್ರದಾಯಿಕ ಚೌಕಟ್ಟಿಗೆ ಹೊಂದಿಕೊಂಡಿತ್ತು. ಇದೇ ಮೊದಲಬಾರಿಗೆ ಆ ಸಾಂಪ್ರದಾಯಿಕತೆಯಿಂದ ದೂರ ಸರಿದು ಸಿನಿಮಾಸ್ಕೋಪ್ ಎಂಬ ಅಸಹಜ ತೆರಪನ್ನು ಗಿರೀಶರು ಆಯ್ದುಕೊಂಡಿದ್ದಾರೆ, 'ನಾಯಿನೆರಳು' ಚಿತ್ರದಲ್ಲಿ. ಇದರಿಂದಾಗಿ ಪ್ರತಿ ಚಿತ್ರಿಕೆಗೂ ಅಸಹಜ ಎಂಬ ವಿಸ್ತಾರ ದೊರೆಯುತ್ತದೆ. ಅದನ್ನು ಕಥೆಗೆ ಲಾಭದಾಯಕವಾಗಿ ಬಳಸಿಕೊಳ್ಳುವಲ್ಲಿ ಮಲೆನಾಡಿನ ಭವ್ಯ ಮನೆಯ ವಿಸ್ತಾರ ನೆರವಾಗುತ್ತದೆ. ಜೊತೆಗೆ ಗಿರೀಶರು ದೃಶ್ಯಗಳಲ್ಲಿ ಬಳಸುವ ಭೇದಗಳು ಮತ್ತು ಚಿತ್ರಿಕೆಗಳು ಕಥೆಯಲ್ಲಿ ಇರುವ ಅತಾರ್ಕಿಕ ಎನ್ನಬಹುದಾದ ಪುನರ್ಜನ್ಮದ ವಿಷಯವನ್ನು ಭ್ರಮಾತ್ಮಕ ಪಾತಳಿಯಲ್ಲಿಯೇ ಇರಿಸಲು, ಆ ಮೂಲಕ ವಾಸ್ತವ ಸತ್ಯದ ವಿವರವನ್ನು ಪ್ರೇಕ್ಷಕನಿಗೆ ತಲುಪಿಸಲು ಸಹಕಾರಿಯಾಗಿಯೂ ಕೆಲಸಮಾಡುತ್ತವೆ. ಉದಾಹರಣೆಗೆ, 'ರಾಜಲಕ್ಷ್ಮಿ' ಭಾಗದಲ್ಲಿ ತಾಯಿ ಮಗಳ ಭೇಟಿಯ ದೃಶ್ಯ ಗಮನಿಸಬಹುದು. ಮಗಳ ಎಲ್ಲಾ ಪ್ರಶ್ನೆಗಳಿಗೆ ಉತ್ತರಿಸಲು ವೆಂಕು ಒಣಗಿದ ಬಟ್ಟೆಗಳ ನಡುವೆ ಓಡಾಡುತ್ತಾಳೆ. ಚಿತ್ರ ಚೌಕಟ್ಟಿನ ತೆರಪಿನುದ್ದಕ್ಕೂ ಇರುವ ಬಿಳಿಯ ಬಟ್ಟೆಗಳ ನಡುವೆ ಕಾಣಿಸಿಕೊಂಡು ಪ್ರಶ್ನೆ ಕೇಳುವ ರಾಜಿ ಮತ್ತು ಬಟ್ಟೆಗಳನ್ನು ಎಳೆದುಕೊಳ್ಳುತ್ತಾ ಮಗಳ ಪ್ರಶ್ನೆಗಳಿಂದ ತಪ್ಪಿಸಿಕೊಳ್ಳುವ ವೆಂಕು ಇಲ್ಲಿದ್ದಾರೆ. ಬಟ್ಟೆಗಳ ಬಿಳಿತನದ ವಿಸ್ತಾರ ಮತ್ತು ಪಾತ್ರಗಳು ತೊಟ್ಟಿರುವ ಬಣ್ಣದ ಬಟ್ಟೆಗಳ ವೈರುಧ್ಯವೇ ಇಡಿಯ ಪ್ರಶ್ನೋತ್ತರಕ್ಕೆ ತೆರಪಿನ ಬಳಕೆಯ ಮೂಲಕವೇ ಸಂವಾದವನ್ನು ಸೃಷ್ಟಿಸುತ್ತದೆ. ಹೀಗೆಯೇ ಕಡೆಯ ಭಾಗದಲ್ಲಿ ಬರುವ ವೆಂಕುವಿನ ಹೊಸತಾಣದ ಯಾನಕ್ಕಾಗಿ ಚೌಕಟ್ಟಿನ ತೆರಪಿನಗಲಕ್ಕೂ ಹರಡಿದ ನೀರಿನ ನಡುವೆ ಈಟಿಯಂತೆ ಪ್ರವೇಶಿಸುವ ದೋಣಿಯನ್ನು ಬಳಸಲಾಗಿದೆ. ಎತ್ತರದ ಸ್ಥಳದಲ್ಲಿ ಕ್ಯಾಮೆರಾ ಇರಿಸಿ ಸೃಷ್ಟಿಸಿರುವ ಈ ಚಿತ್ರಿಕೆಯಿಂದಾಗಿ ಕಥೆಯು ಹೊಸ ಆವರಣವನ್ನು ಪ್ರವೇಶಿಸುತ್ತದೆ. ಇನ್ನಿದು ಸಮುದ್ರದ ನೀರಿನಂತೆಯೇ ನಿಗೂಢ ಎಂಬ ಸೂಚಿಯನ್ನು ಒಂದೇ ಚಿತ್ರಿಕೆಯಲ್ಲಿ ಮೂಡಿಸಲಾಗಿದೆ. ಇದು ಸಿನಿಮಾಸ್ಕೋಪ್ ಕ್ಯಾಮೆರಾದ ಸಾರ್ಥಕ ಬಳಕೆ. ಅದೇ ರೀತಿಯಲ್ಲಿ ಪ್ರತಿ ದೃಶ್ಯದ ಆರಂಭಕ್ಕೂ ದೃಶ್ಯ ನಡೆವ ಸ್ಥಳದ ಅತೀ ಸಮೀಪ ಚಿತ್ರಿಕೆಯೊಂದನ್ನು ತೋರಿಸಿ, ನಂತರದ ಎರಡು ಚಿತ್ರಿಕೆಗಳಲ್ಲಿ ದೃಶ್ಯ ನಡೆವ ಸ್ಥಳದ ವಿವರವನ್ನು ತೋರುವಂತಹ ದೃಶ್ಯ ನಿರ್ಮಿತಿ ಈ ಚಿತ್ರದಲ್ಲಿದೆ. ಇದರಿಂದಾಗಿ ದೃಶ್ಯದಿಂದ ದೃಶ್ಯ ಭೇದವಾಗಿ ಸಾಗುವಾಗ ಸುಲಲಿತವಾದ ಸೇತುಬಂಧ ಸಾಧ್ಯವಾಗುತ್ತದೆ. ಕಥೆಯು ಯಾವುದೇ ಕಾಲಘಟ್ಟವನ್ನು ದಾಟುವುದು ಸುಲಭವಾಗುತ್ತದೆ. ಆಧುನಿಕ ನಿರ್ದೇಶಕರು, ಇಂತಹ ಕ್ರಮದಿಂದ ಕಥೆಯ ಓಘಕ್ಕೆ ಧಕ್ಕೆ ಉಂಟಾಗುತ್ತದೆ ಎನ್ನಬಹುದು. ಆದರೆ ಈ ಕ್ರಮದಿಂದ (ನ್ಯೂಟ್ರಲ್ ಪಾಯಿಂಟ್ ಸೀನ್ ಓಪನಿಂಗ್) ಕಥನಕ್ರಮಕ್ಕೆ ಸಿಗುವ ಲ್ಯೂಸಿಡಿಟಿಯನ್ನು ಗಮನಿಸಿದರೆ, ಇದು ಹಳೆಯದಾದರೂ ಅತ್ಯುತ್ತಮ ಮತ್ತು ಸೂಕ್ತ ಕ್ರಮ ಎಂದೆನಿಸುತ್ತದೆ. ಅಲ್ಲದೆ ಹೀಗೆ ಆರಂಭವಾಗುವ ದೃಶ್ಯದ ಮೊದಲ ಕೆಲವು ಚಿತ್ರಿಕೆಗಳು ಪ್ರೇಕ್ಷಕನಲ್ಲಿ ಯಾವುದೋ ಚಿತ್ರಕಲೆಯ ತುಣುಕನ್ನು ನೋಡುತ್ತಿದ್ದೇನೆ ಎಂಬಂತಹ ಭಾವ ಮೂಡಿಸುತ್ತದೆ. ಉದಾಹರಣೆಗೆ, ಸಿನಿಮಾದ ಆರಂಭದಲ್ಲಿ ಬಳಸಲಾಗಿರುವ ಮಲೆನಾಡ ದೇವಸ್ಥಾನದ ಗುಡಿಯ ಗೋಪುರದ ಚಿತ್ರಿಕೆ. ನಂತರ ಬರುವ ಗುಡಿಯ ಗೋಪುರವನ್ನು ಒಳಗೊಂಡಂತಹ ಗುಡಿಯ ಪ್ರಾಂಗಣದ ಚಿತ್ರಿಕೆ. ಅದಾದ ನಂತರ ಗುಡಿಯ ಪ್ರಾಂಗಣದಲ್ಲಿ ನಡೆಯುತ್ತಾ ಇರುವ ಪಾತ್ರಗಳನ್ನು ಪರಿಚಯಿಸುವ ಕ್ರಮ. ಇದು ಒಂದರ್ಥಕ್ಕೆ ಪ್ರೇಕ್ಷಕನಿಗೆ ಕಥನದಿಂದ ದೊರೆಯುವ ರಿಲೀಫ್ ಆಗಿಯೂ ಕೆಲಸಮಾಡುತ್ತದೆ. ಈ ಎಲ್ಲಾ ಚಿತ್ರಿಕೆಗಳಲ್ಲಿ ಸಿನಿಮಾಸ್ಕೋಪ್‌ನ ವಿಸ್ತಾರವನ್ನು ದುಡಿಸಿಕೊಳ್ಳುವಲ್ಲಿ ಕೇವಲ ನಿರ್ದೇಶಕರಲ್ಲದೆ, ಛಾಯಾಗ್ರಾಹಕರ (ಎಸ್. ರಾಮಚಂದ್ರ ಐತಾಳ್) ವೃತ್ತಿಪರತೆ ಮತ್ತು ಕೌಶಲವು ಎದ್ದುಕಾಣುತ್ತವೆ.

### ಸಂಭಾಷಣೆ

ಸಿನಿಮಾದಲ್ಲಿ ಆಡುವ ಮಾತಿಗಿಂತ 'ನೋಡುವ' ಮಾತೇ ಹೆಚ್ಚಾಗಿರಬೇಕು. ಹಾಗೆಂದು 'ಕೇಳುವ' ಮಾತಿನ ಬಗ್ಗೆ ಗಮನ ಕೊಡದೆಹೋದರೆ ಕಥನವನ್ನು ತಲುಪಿಸುವ ಬಹುಮುಖ್ಯ ಅಂಗವೊಂದು ದುರ್ಬಲವಾಗಿಬಿಡುವ ಸಾಧ್ಯತೆಯಿದೆ. ಸಾಮಾನ್ಯವಾಗಿ ಗಿರೀಶರ ಎಲ್ಲಾ ಚಿತ್ರಗಳಲ್ಲಿ ಮಾತು ಅಸಹಜವಾಗಿರುತ್ತದೆ. ಇದಕ್ಕೆ 'ತಬರನ ಕಥೆ', 'ತಾಯಿಸಾಹೇಬ', 'ಹಸೀನಾ' ಚಿತ್ರಗಳಲ್ಲಿನ ಅನೇಕ ಉದಾಹರಣೆಗಳನ್ನು ಗಮನಿಸಬಹುದು. ಗಿರೀಶರು ತಮ್ಮ ಚಿತ್ರಗಳಲ್ಲಿ ಸಾಮಾನ್ಯವಾಗಿ ಆಡುಮಾತಿನ ಮೇಲೆ ಹೆಚ್ಚು ಗಮನ ಕೊಡುವುದಿಲ್ಲ. ಆದರೆ 'ನಾಯಿನೆರಳು'



ಅದಕ್ಕೊಂದು ಅಪವಾದ ಎಂಬಂತಿದೆ. ಈ ಚಿತ್ರದ ಕಥನವು ಮೂರು ವಿಭಿನ್ನ ಪ್ರದೇಶಗಳಲ್ಲಿ ನಡೆಯುತ್ತದೆ. ಹವ್ಯಕರಿರುವ ಉತ್ತರ ಕನ್ನಡದ ಮಲೆನಾಡು, ಬಯಲು ಸೀಮೆಯ ಉತ್ತರ ಕರ್ನಾಟಕದ ಪ್ರದೇಶ ಮತ್ತು ಘಟ್ಟದ ಕೆಳಗಿನ ಸಮುದ್ರ ತೀರದ ಪ್ರದೇಶ. ಆಡುಮಾತಿನಲ್ಲಿ ಈ ಮೂರೂ ಪ್ರದೇಶಗಳನ್ನು ಹಿಡಿಯುವ ಪ್ರಯತ್ನ 'ನಾಯಿ ನೆರಳು' ಚಿತ್ರದಲ್ಲಿದೆ. ಚಿತ್ರದುದ್ದಕ್ಕೂ ಹವ್ಯಕರ ಕನ್ನಡ ವಂತೂ ಹಾಸುಹೊಕ್ಕಾಗಿದೆ. ಮಿಕ್ಕೆರಡೂ ನುಡಿಗಟ್ಟು ಗಳನ್ನು ಬಳಸುವ ಪಾತ್ರಗಳು ಕಡಿಮೆಯಾದರೂ ಅವು ಯಶಸ್ವಿಯಾಗಿಯೇ ಬಳಕೆಯಾಗಿವೆ ಅನ್ನಬಹುದು.

'ನಾಯಿನೆರಳು'ನಲ್ಲಿ ಮಾತು ಕಡಿಮೆಯೇ. ಆದರೆ ಬಳಸಿರುವ ನುಡಿಗಟ್ಟುಗಳು ನೋಡುಗನ ಮನಸ್ಸಿನಲ್ಲಿ ಬಹುಕಾಲ ಉಳಿಯುವಂತಹವು. ವೆಂಕಟಲಕ್ಷ್ಮಿಯು ತನ್ನ ಹೊಸ ಸಂಬಂಧ ಕುರಿತು ಮಗಳಾದ ರಾಜಲಕ್ಷ್ಮಿಯ ಜೊತೆಗೆ ಆಡುವ ಮಾತುಗಳು, ನಾಗಲಕ್ಷ್ಮಿಯು ತನ್ನ ಸೊಸೆಯು ಪುನರಪಿ ಜನ್ಮ ಪಡೆದು ಬಂದವನೊಂದಿಗೆ ಮಾತಾಡಬೇಕು ಎಂದಾಗ ವೆಂಕಟಲಕ್ಷ್ಮಿ ಆಡುವ ಮಾತು, ವೆಂಕಟಲಕ್ಷ್ಮಿಯ ಗೆಳತಿಯೊಬ್ಬಳು ಹೊಸದಾಗಿ ದಕ್ಕಿರುವ ಮುತ್ತೈದೆ ಪದವಿಯನ್ನಾದರೂ ಒಪ್ಪಿಕೊ ಎಂದಾಗ ವೆಂಕಟಲಕ್ಷ್ಮಿ ಆಡುವ ಮಾತು... ಹೀಗೆ ಅನೇಕ ದೃಶ್ಯಗಳಲ್ಲಿ ಪಾತ್ರಗಳು ಆಡುವ ಮಾತು ಕೇವಲ ಸಂಭಾಷಣೆ ಎಂಬರ್ಥದಲ್ಲಿ ಬಳಕೆಯಾಗದೆ, ಸಹಜತೆಯನ್ನೂ ಕಳೆದುಕೊಳ್ಳದೆ ಅನೇಕ ತತ್ವಗಳನ್ನು ಹೇಳಿಬಿಡುತ್ತದೆ. ಇಂತಹ ಮಾತುಗಳು ಕಾವ್ಯದಂತೆ ನಮ್ಮನ್ನು ಕಾಡುವಾಗಲೇ ಮತ್ತೊಂದು ಹೊಸ ನುಡಿಗಟ್ಟು ಕಿವಿಗೆ ತಾಗಿ ನೋಡುಗ ಸಿನಿಮಾದಿಂದ ಹೊರಬಾರದಂತೆ ನೋಡಿಕೊಳ್ಳುತ್ತದೆ.

**ಅಭಿನಯ**

ಗಿರೀಶರ ಚಿತ್ರದಲ್ಲಿ ಅಭಿನಯಕ್ಕೆ ವಿಶೇಷ ಅವಕಾಶ ಸಾಮಾನ್ಯವಾಗಿ ಇರುವುದಿಲ್ಲ. ತಮ್ಮ ನಟರಲ್ಲಿ ಸಹಜತೆ ಯನ್ನು ತರಲು ಗಿರೀಶರು ಪ್ರಯತ್ನಿಸುತ್ತಲೇ ಇರುತ್ತಾರೆ. ಆ ಮೂಲಕ ಕಥೆಯ ಒಟ್ಟು ಭಾವ ಪ್ರೇಕ್ಷಕನಲ್ಲಿ ಮೂಡುವಾಗ ಯಾವ ಪಾತ್ರವೂ ತನ್ನ ಪ್ರಭಾವ ಮೆರೆಯ ಬಾರದು ಎಂಬುದು ಗಿರೀಶರಂತಹ ನವವಾಸ್ತವವಾದಿ ಗಳ ನಿಲುವು. ಆ ದೃಷ್ಟಿಯಿಂದ ಗಿರೀಶರು ಸಾಮಾನ್ಯವಾಗಿ ತಮ್ಮ ಎಲ್ಲಾ ಚಿತ್ರಗಳಲ್ಲೂ ಗೆಲ್ಲುತ್ತಾರೆ. ಆದರೆ 'ನಾಯಿ ನೆರಳು'ವಿನಲ್ಲಿ ಗಿರೀಶರನ್ನು ಮೀರಿ ವೆಂಕಟಲಕ್ಷ್ಮಿಯ ಪಾತ್ರ ಮತ್ತು ಅಚ್ಚಣ್ಣಯ್ಯನ ಪಾತ್ರ ನೋಡುಗನೆದುರು ಬೃಹತ್ತಾಗಿ ನಿಂತುಬಿಡುತ್ತದೆ. ಚಿತ್ರದ ಮೊದಲರ್ಧದಲ್ಲಿ ವೆಂಕಟಲಕ್ಷ್ಮಿಯು ಪಾತ್ರದ ವಯಸ್ಸಿಗಿಂತ ಚಿಕ್ಕವಳಾಗಿ ಕಾಣಿಸುತ್ತಾಳೆ ಎಂಬಂತೆ ಕಂಡರೂ ಆಕೆಯ ಮಾತು ಮತ್ತು ನಡೆಗಳಲ್ಲಿ ಪಾತ್ರಧಾರಿ ಸಾಧಿಸುವ ಸಾಂಗತ್ಯ ಸಹಾಯಕ್ಕೆ ಬಂದಿದೆ. ಆದರಿಂದಾಗಿ, ನಂತರದ ದೃಶ್ಯಗಳಲ್ಲಿ ಆ ಪಾತ್ರವು ತನ್ನೆದುರು ಬಂದಿರುವ ಗಂಡನ ಆತ್ಮ ಹೊತ್ತಿದ್ದೇನೆ ಎನ್ನುವ ಹುಡುಗನನ್ನು ದೇಹದ ವಾಂಛೆಗಾಗಿಯೂ ಬಳಸಿರಬಹುದು ಎಂಬ ಹೊಸ ಅರ್ಥವೊಂದು ಸಿನಿಮಾದ ಕಥೆಗೆ ಸಿಗುತ್ತದೆ. ಇದು ಪ್ರಾಯಶಃ ಗಿರೀಶರ ಯೋಜನೆ ಯಲ್ಲಿ ಇಲ್ಲದೆಯೇ ಆಗಿರಬಹುದಾದ ಪಾತ್ರಧಾರಿಯ ಕೊಡುಗೆ. ಆ ಪಾತ್ರಧಾರಿಯು 'ದುಷ್ಯಂತ-ಶಕುಂತಲಾ' ಪ್ರಕರಣದಲ್ಲಿ ಹೊಸ ಹುಡುಗನನ್ನು ಅಪ್ಪಿಕೊಳ್ಳುವ ಎರಡು ಚಿತ್ರಿಕೆಗಳು ಬರುತ್ತವೆ. ಇಲ್ಲಿ ಆಕೆ ಬಂದುದನ್ನು ಸ್ವೀಕರಿಸು ವವಳಾಗಿ, ತೆಗೆದುಕೊಳ್ಳುವವಳಾಗಿ ಕಾಣುವಬದಲು ಸಿಕ್ಕಿದ್ದರಿಂದ ಸುಖವನ್ನು ಸ್ವೀಕರಿಸುವವಳಾಗಿ ಕಾಣುತ್ತಾಳೆ. ಇದರಿಂದ ಅರೆಕ್ಷಣ ಪಾತ್ರದ ತೂಕ ಇನ್ನೊಂದರ್ಥದಲ್ಲಿ ಕಳೆದುಕೊಳ್ಳುವಂತೆ ಕಂಡರೂ, ಅದೇ ಪಾತ್ರ ಹುಡುಗ 'ಗಂಡ' ತನ್ನಿಂದ ದೂರ ಹೋಗಬಾರದೆಂದು ಆತನ ಮಡಿಲಲ್ಲಿ ತಾನು ಮಲಗಿದಾಗ ಮೊದಲರ್ಧದಲ್ಲಿ ಮೂಡಿದ ಮುಖಭಾವಕ್ಕೆ ಸಾಂಗತ್ಯ ದೊರೆತು, ಪಾತ್ರದ ಎತ್ತರ ಬದಲಾಗುತ್ತದೆ.

ಸಿನಿಮಾ ಅಭಿನಯ ಕ್ಲಿಷ್ಟವಾದುದು. ಈವರೆಗೆ ನಮ್ಮ ನಟವರ್ಗ ಈ ನಿಟ್ಟಿನಲ್ಲಿ ಗಮನಹರಿಸಿ ಕೆಲಸ ಮಾಡಿರುವುದು ಕಡಿಮೆಯೇ. ಆದ್ದರಿಂದಲೇ ಒಬ್ಬ ನಟನ ಎರಡು ಸಿನಿಮಾಗಳನ್ನು ನೋಡಿಬಿಟ್ಟರೆ ಆತನು ಅಭಿನಯಿಸಿದ ಮೂರನೆಯ ಸಿನಿಮಾದಲ್ಲಿ ಕಾಣ ಸಿಗುವುದು ಪುನರಾವರ್ತನೆಯಾಗಿ ಇರುತ್ತದೆ. ಅಂತಹುದರಲ್ಲಿ ಟೆಲಿವಿಷನ್ ಧಾರಾವಾಹಿಗಳಲ್ಲಿ ಹೆಚ್ಚಾಗಿ ಕಾಣಿಸಿಕೊಂಡ ನಟವರ್ಗವಿದ್ದರೆ, ಅಲ್ಲಿ ಕೋಪ,



ಸೆಡವು, ನಗು, ಎಲ್ಲವೂ ಫಾರ್ಮುಲೈಸ್ಡ್ ಆಗಿಬಿಡುವ ಸಾಧ್ಯತೆಯಿದೆ. ಈ ವಿವರಗಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು 'ನಾಯಿನೆರಳು' ನೋಡಿದವರಿಗೆ ವೆಂಕಟಲಕ್ಷ್ಮಿ (ಪವಿತ್ರಾ ಲೋಕೇಶ್) ಅವರ ಅಭಿನಯ ಅಚ್ಚರಿಯನ್ನುಂಟುಮಾಡುತ್ತದೆ. ಆಕೆ ಯಾವುದೇ ಸಂದರ್ಭದಲ್ಲಿಯೂ ಪುನರಾವರ್ತಿತ ಎಂಬಂತಹ ಸಂಜ್ಞೆಗಳನ್ನು ಬಳಸುವುದಿಲ್ಲ. ಆದ್ದರಿಂದಲೇ ಇಡೀ ಚಿತ್ರದಲ್ಲಿ ವೆಂಕಟಲಕ್ಷ್ಮಿ ಪಾತ್ರದ ಪ್ರಭಾವ ದಟ್ಟವಾಗಿ ಬಿಡುತ್ತದೆ. ಇದೇ ರೀತಿಯ ಮಾತುಗಳನ್ನ ಅಚ್ಚಣ್ಣಯ್ಯ (ಶೃಂಗೇರಿ ರಾಮಣ್ಣ) ಪಾತ್ರಧಾರಿಗೂ ಹೇಳಬಹುದು. ಇನ್ನುಳಿದ ಪಾತ್ರಧಾರಿ ಗಳ ಬಗ್ಗೆ ಇದೇ ಮಾತನ್ನು ಹೇಳಲಾಗದು. ವಿಶೇಷವಾಗಿ ರಾಜಲಕ್ಷ್ಮಿ (ಅನನ್ಯ) ಪಾತ್ರಧಾರಿಯ ಅಭಿನಯ ಅನೇಕ ದೃಶ್ಯಗಳಲ್ಲಿ ಸಹಜ ಎನಿಸುವ ಬದಲು ಅಭಿನಯಿಸಲು ನಡೆಸಿದ ಪ್ರಯತ್ನವಷ್ಟೇ ಎನಿಸುತ್ತದೆ. ಅದೇ ಮಾತುಗಳನ್ನು ನಾಗಲಕ್ಷ್ಮಿ (ರಾಮೇಶ್ವರಿ ವರ್ಮಾ) ಪಾತ್ರಧಾರಿಗೂ ಹೇಳಬಹುದು. ಉಳಿದಂತೆ ಅನೇಕ ಸಣ್ಣಪಾತ್ರಗಳು (ವೆಂಕಟಲಕ್ಷ್ಮಿಯ ನೆರೆಮನೆಯ ಗೆಳತಿ, ಪುತ್ರಾಂಭಟ್ಟ, ವಿಶ್ವನ ಅಣ್ಣ, ವೆಂಕಟಲಕ್ಷ್ಮಿಯ ಅತ್ತಿಗೆ, ಹಾಲಕ್ಕಿಯ ಗೌಡ) ತಮ್ಮ ಸಹಜತೆಯಿಂದಾಗಿ ಇಷ್ಟವಾಗುತ್ತವೆ.

**ಕೆಲವು ಪ್ರಶ್ನೆಗಳು**

ಯಾವುದೇ ಚಿತ್ರ ಪರಿಪೂರ್ಣವಲ್ಲ. ಅಲ್ಲಿ ಕೆಲವು ಪ್ರಶ್ನೆಗಳು ಉತ್ತರ ಸಿಗದೆ ಉಳಿದುಬಿಡುತ್ತವೆ. ಹಾಗೆಯೇ 'ನಾಯಿನೆರಳು'ವಿನಲ್ಲಿಯೂ ಅನೇಕವಿದ್ದಾವೆ. ಅವುಗಳಲ್ಲಿ ಪ್ರಮುಖವಾದ್ದು ಚಿತ್ರದ ಶೀರ್ಷಿಕೆ. ಈ ಸಂದರ್ಭದಲ್ಲಿ ಗೆಳೆಯರೊಬ್ಬರ ಮಗುವಿನಿಂದಾಗಿ ಆದ ಘಟನೆಯನ್ನು ಹೇಳಿಬಿಡುತ್ತೇನೆ. ಈ ಚಿತ್ರ ನೋಡಲು ಹೊರಟಾಗ ಆ ಪುಟ್ಟ ಬಾಲಕ 'ನಾಯಿನೆರಳು' ಎಂದರೇನು ಎಂದು ಕೇಳಿದನಂತೆ. ಹಿರಿಯರು ಮಗುವಿಗೆ ಅರ್ಥವಾಗುವಂತೆ 'ಬೌಬೌ ಇರತ್ತಲ್ಲ, ಅದರ ನೆರಳು' ಅಂದರಂತೆ. ಹುಡುಗ ಸಿನಿಮಾ ನೋಡಿದ ನಂತರ 'ಸಿನಿಮಾದಲ್ಲಿ ನಾಯೀನೂ ಇರಲಿಲ್ಲ, ನೆರಳೂ ಇರಲಿಲ್ಲ' ಅಂದನಂತೆ. ಇದು ಪ್ರಾಯಶಃ ಸಿನಿಮಾ ನೋಡಿದ ಅನೇಕರನ್ನು ಕಾಡುವ ಪ್ರಶ್ನೆ. ಮೂಲಕೃತಿಯಲ್ಲಿ ಮನೆಯ ನಾಯಿಯೂ ಸಹ ಪುನರ್ಜನ್ಮ ಪಡೆದುಬಂದ ಎನ್ನುವವನನ್ನು ಗುರುತಿಸುತ್ತದೆ ಎನ್ನುವುದು ಮತ್ತು ನಮ್ಮ ಪಾಪಗಳು ನಮ್ಮನ್ನು ನಾಯಿಯಂತೆ ಹಿಂಬಾಲಿಸುತ್ತವೆ ಎಂಬ ಕರ್ಮ ಸಿದ್ಧಾಂತದ ಮಾತು ಕೆಲಸ ಮಾಡುತ್ತದೆ. ಅವೆರಡನ್ನೂ ಗಿರೀಶರು ಈ ಚಿತ್ರದಲ್ಲಿ ಕೈಬಿಟ್ಟಿರುವುದರಿಂದ ಚಿತ್ರದ ಶೀರ್ಷಿಕೆಯು ಕೇವಲ ಜನಪ್ರಿಯ ಲೇಖಕರ ಕೃತಿಯ ನೆನಪನ್ನು ನೀಡುವುದಷ್ಟಕ್ಕೇ ಸಹಕರಿಸುತ್ತದೆ.

ಎರಡನೆಯ ಪ್ರಶ್ನೆ: ಸಮಕಾಲೀನ ಸಂದರ್ಭದಲ್ಲಿ ಇಂತಹ ಕಥೆಗಳನ್ನು ಹೇಳುವುದರಿಂದ ಆಗುವುದೇನು ಎನ್ನುವುದು. ಸ್ವಾತಂತ್ರ್ಯ ಪೂರ್ವದ ಒಂದು ಬ್ರಾಹ್ಮಣ ಸಮುದಾಯದ ಕಥೆಯನ್ನು ಕಾವ್ಯಾತ್ಮಕವಾಗಿ ಸಿನಿಮಾ ಮಾಡುವುದು ಕೃತಿಕಾರನಿಗೆ ಆನಂದದ ವಿಷಯವಾಗ ಬಹುದು. ಆದರೆ ಸಮಕಾಲೀನ ಸಮಾಜದ ಪರಿಸ್ಥಿತಿ ಯೊಡನೆ ಸಮೀಕರಿಸಿಕೊಳ್ಳಲು ಸಾಧ್ಯವಾಗದ ಇಂತಹ ಕಥೆಗಳನ್ನು ನೋಡಿದ ಪ್ರೇಕ್ಷಕನಿಗೆ ದಕ್ಕುವುದೇನು ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ಇಂತಹ ಚಿತ್ರಗಳು ಹೆಚ್ಚು ಜನರನ್ನು ತಲುಪುವುದಿಲ್ಲ ಎಂಬಂತಹ ಮಾತುಗಳು ಶಾಪದಂತೆ ಕಾಡುವಾಗ ಹೊಸ ಅಲೆಯ ಚಿತ್ರತಯಾರಕರು ಪ್ರೇಕ್ಷಕರನ್ನು ಸಿನಿಮಾದಿಂದ ಮತ್ತಷ್ಟು ದೂರಮಾಡಿಬಿಡುತ್ತಾರೆಯೋ ಎಂಬ ಸಂದೇಹಗಳು ಹುಟ್ಟಿಕೊಳ್ಳುವುದು ಸಹಜವೇ. ಇಂತಹ ಕಥೆಗಳು ತಮ್ಮ ಅಂತರ್ಯದಲ್ಲಿ ಸಮಕಾಲೀನ ವೀಕ್ಷಕನನ್ನು ಸಹ ತೊಡಗಿಸಿಕೊಳ್ಳುವ ಪ್ರಯತ್ನವನ್ನು ಮಾಡದೆಹೋದರೆ ಈ ಹೊಸ ಅಲೆ ಎಂಬ ಪ್ರಕಾರವು ಅಕೆಡೆಮಿಕ್ ಆಗಿ ಮಾತ್ರ ನಿರಂತರವಾಗಿ ಪ್ರೇಕ್ಷಕರಿಂದ ದೂರ ಉಳಿದುಬಿಡುತ್ತದೆ ಎನಿಸುತ್ತದೆ.

ಈ ವಿಷಯ ಕುರಿತು ಹೊಸಅಲೆ/ ಕಲಾತ್ಮಕ/ ಪ್ರಾಯೋಗಿಕ/ ಸಮಾನಾಂತರ ಚಿತ್ರ ತಯಾರಕರೆಲ್ಲರೂ ಯೋಚಿಸಬೇಕಿದೆ. ನೋಡುಗನಿಲ್ಲದ ಸಿನಿಮಾ ತಿನ್ನುವವರಿಲ್ಲದೆ ಹಳಸುವ ಒಬ್ಬಟ್ಟಿನಂತಾಗಬಾರದು.

ಬಿ. ಸುರೇಶ
ಮೀಡಿಯಾ ಹೌಸ್, ೨೨ನೇ ಅಡ್ಡರಸ್ತೆ
೨೩ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

**ಒಂ**ದು ಕಾಲದಲ್ಲಿ 'ಭಾಷಾಂತರ ಕಾರ್ಯ' ಎಂದರೆ ಅದು ಶುದ್ಧ ಸಾಹಿತ್ಯದ ಭಾಷಾಂತರಕ್ಕಷ್ಟೇ ಸೀಮಿತ ಅರ್ಥದಲ್ಲಿ ಬಳಕೆಯಲ್ಲಿತ್ತು. ಈಗ ಹಾಗಲ್ಲ. ಕಾನೂನು, ವಾಣಿಜ್ಯ, ಆಡಳಿತ ಎಂದೆಲ್ಲ ಹಲವು ಹತ್ತು ಕ್ಷೇತ್ರಗಳಿಗೆ ಅದರ ವ್ಯಾಪ್ತಿ ವಿಸ್ತಾರಗೊಳ್ಳುತ್ತಲೇ ಇದೆ.

ಬಹುತೇಕ ಸಾರ್ವಜನಿಕರ ಗಮನಕ್ಕೆ ಬಾರದೆ ಕನ್ನಡದ ಕೆಲಸದಲ್ಲಿ ತೊಡಗಿರುವ ಸರ್ಕಾರಿ ಇಲಾಖೆ – 'ಭಾಷಾಂತರ ನಿರ್ದೇಶನಾಲಯ'. ರಾಜಧಾನಿ ಬೆಂಗಳೂರಿನಲ್ಲಿ ಕಾರ್ಯಸ್ಥಾನವನ್ನು ಹೊಂದಿದೆ. ಕಾಲ ಕಾಲಕ್ಕೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ರಚಿಸುವ ಅಧಿನಿಯಮಗಳಲ್ಲದೆ ಸರ್ಕಾರದ ಮಹತ್ವದ ದಾಖಲಾತಿಗಳನ್ನು ಭಾಷಾಂತರಿಸಿಕೊಡುವ ಕಾರ್ಯವನ್ನು ಅನೂಚಾನವಾಗಿ ನಿರ್ವಹಿಸಿಕೊಂಡು ಬರುತ್ತಾ ಕನ್ನಡವನ್ನು ಆಡಳಿತ ಭಾಷೆಯಾಗಿ ಪರಿಣಾಮಕಾರಿಯಾಗಿ ಜಾರಿಗೆ ತರುವ ಮಹತ್ವದ ಕಾರ್ಯದಲ್ಲಿ ಪ್ರಮುಖ ಪಾತ್ರ ವಹಿಸುತ್ತಿರುವ ಪುಟ್ಟ ಇಲಾಖೆ ಇದು.

ಜನರಾಡುವ ಭಾಷೆಯಲ್ಲಿಯೇ ಆಡಳಿತ ನಡೆಸಬೇಕೆನ್ನುವುದು ಜನತಂತ್ರದ ಅಗತ್ಯಗಳಲ್ಲಿ ಒಂದು. ಜನರ ಭಾಷೆಯಲ್ಲೇ ಆಡಳಿತ ನಡೆದರೆ ಸರ್ಕಾರದ ನೀತಿಗಳು, ಯೋಜನೆಗಳು, ಕಾರ್ಯಕ್ರಮಗಳು, ಕಾರ್ಯಕಲಾಪಗಳು ಜನಸಾಮಾನ್ಯರಿಗೂ ತಿಳಿಯುತ್ತವೆ. ಆಗ ಜನರೂ ರಾಜ್ಯಾಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳಲು ಸಾಧ್ಯವಾಗುತ್ತದೆ. ಆ ತಿಳಿವಳಿಕೆಯನ್ನು ಇಟ್ಟುಕೊಂಡೇ ಕರ್ನಾಟಕ ಆಡಳಿತದಲ್ಲಿ ಹಾಗೆ ಜನರ ಭಾಷೆಯನ್ನು ಬಳಸುವಲ್ಲಿ ಎಂದಿಗೂ ಹಿಂದೆಬಿದ್ದಿಲ್ಲ. ಕ್ರಿ.ಪೂ. ನಾಲ್ಕನೆಯ ಶತಮಾನ ಅಂದರೆ ಮೌರ್ಯರ ಕಾಲದಿಂದಲೇ ಕರ್ನಾಟಕದ ರಾಜಕೀಯ ಚರಿತ್ರೆ ಲಭ್ಯವಿದೆ. ಗಂಗ, ಕದಂಬ, ಪಲ್ಲವ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಮತ್ತು ಮೊಗಲರ ಆಳ್ವಿಕೆಯ ನಂತರ ಕನ್ನಡನಾಡು ತುಂಡರಸರು, ಪಾಳೆಯಗಾರರು, ಒಡೆಯರು, ಬಹಮನಿ ಮೊದಲಾದ ಅರಸರ ನಡುವೆ ಹರಿದು ಹಂಚಿಹೋಗಿದ್ದವು.

ಇಷ್ಟೆಲ್ಲ ಆಳರಸರ ಕೈಯಲ್ಲಿ ಅನೇಕ ಸ್ಥಿತ್ಯಂತರ ಕಂಡರೂ ನಾಡಿನುದ್ದಕ್ಕೂ ಕನ್ನಡ ಭಾಷೆಯನ್ನೇ ಆಡಳಿತ ಭಾಷೆಯನ್ನಾಗಿ ಇಟ್ಟುಕೊಂಡು ಕನ್ನಡಕ್ಕೆ ಸೂಕ್ತ ಮನ್ನಣೆ ಕೊಟ್ಟುಕೊಂಡು ಬಂದುದಕ್ಕೆ ಸಾಕಷ್ಟು ಪುರಾವೆಗಳು ಸಿಗುತ್ತವೆ. ಆಯಾ ಅರಸರ ಕಾಲದಲ್ಲಿ ಬಳಕೆಯಲ್ಲಿದ್ದ ಕನ್ನಡ ಲಿಪಿ, ಆಡಳಿತ ಶಬ್ದಗಳು, ನಿರೂಪಗಳು ಮತ್ತು ರಾಜಾಜ್ಞೆಗಳೇ ಅಲ್ಲದೆ ತಾಮ್ರ ಶಾಸನಗಳಲ್ಲಿ, ತಾಳೆ, ಓಲೆಗರಿಗಳಲ್ಲಿ ರಾಜ್ಯಾಡಳಿತ ವಿಷಯಗಳು ಕನ್ನಡದಲ್ಲಿ ವರ್ಣಿತವಾಗಿರುವುದನ್ನು ನೋಡಿದರೆ ಜನರಾಡುವ ಭಾಷೆಯಲ್ಲಿಯೇ ಅವರು ಆಡಳಿತವನ್ನು ನಡೆಸಿದ್ದರೆಂಬುದರಲ್ಲಿ ಸಂಶಯವಿಲ್ಲ.

ಮುಂದೆ, ಇಂಗ್ಲಿಷರು ಭಾರತದ ಒಂದೊಂದೇ ಭಾಗಗಳನ್ನು ವಶಪಡಿಸಿಕೊಳ್ಳುತ್ತ ಬಂದಂತೆಯೇ ಆಡಳಿತದಲ್ಲಿ ಇಂಗ್ಲಿಷ್ ಬಳಸುವ ಕ್ರಮ ೧೮೩೫ರಿಂದಲೇ ಪ್ರಾರಂಭವಾಯಿತು. ಕ್ರಮೇಣ ಇಂಗ್ಲಿಷ್ ಆಡಳಿತ ಭಾಷೆಯಾಯಿತು.

ಸಿವಿಲ್ ಪ್ರಕ್ರಿಯಾ ಸಂಹಿತೆಯ ೧೩೭ನೇ ಪ್ರಕರಣ ಹಾಗೂ ದಂಡ ಪ್ರಕ್ರಿಯಾ ಸಂಹಿತೆಯ ೨೫೭ನೆಯ ಪ್ರಕರಣಗಳ ಮೇರೆಗೆ ಅಧೀನ ನ್ಯಾಯಾಲಯಗಳಲ್ಲಿ ಪ್ರಾಂತೀಯ ಭಾಷೆಯನ್ನು ಬಳಸಬಹುದೆಂದು ಆಂಗ್ಲರೇ ಅವಕಾಶ ನೀಡಿದ್ದರೂ ನ್ಯಾಯಾಧೀಶರು ಹಾಗೂ ವಕೀಲರು ಆ ಸೌಲಭ್ಯವನ್ನು ಬಳಸಿಕೊಳ್ಳಲಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದ ಹಾಗೂ ಕನ್ನಡ ಸಾಕಷ್ಟು ಕಲಿಯದ ಜನರನ್ನು ತಾಲೂಕು ಮಟ್ಟದವರೆಗೂ ನೇಮಕ ಮಾಡುವ ಪರಿಪಾಠ ಬೆಳೆದುಬಂದು ಕನ್ನಡದಲ್ಲಿ ಶ್ರದ್ಧೆ ಇರದಂತಹ ಇಂಗ್ಲಿಷ್ ಪ್ರೇಮಿಗಳನ್ನು ಉನ್ನತ ಸ್ಥಾನಗಳಲ್ಲಿ ಕೂರಿಸುವ ಪದ್ಧತಿಯಿಂದಾಗಿ ಆಂಗ್ಲರ ಆಡಳಿತದಲ್ಲಿ ಕನ್ನಡ ಹಿನ್ನಡೆ ಸಾಧಿಸಿತು. ಈ ಹಿನ್ನೆಲೆಯಲ್ಲಿ, ಕಾಲಕ್ರಮೇಣ ಆಂಗ್ಲರ ಆಳ್ವಿಕೆಯಲ್ಲಿ ದ್ವಿಭಾಷಿಗಳನ್ನು ಹಾಗೂ ಭಾಷಾಂತರಕಾರರನ್ನು ನೇಮಿಸಿಕೊಂಡು ಆಡಳಿತ ಮತ್ತು ಕಾನೂನು ವಿಷಯಗಳನ್ನು ಇಂಗ್ಲಿಷಿನಿಂದ ಕನ್ನಡಕ್ಕೆ ಭಾಷಾಂತರ ಮಾಡುವ ಕಚೇರಿಗಳನ್ನು ಹುಟ್ಟುಹಾಕುವುದು ಅನಿವಾರ್ಯವಾಯಿತು.

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಆಂಗ್ಲ ಅಧಿಕಾರಿಗಳೇ ಸ್ವತಃ ಕನ್ನಡ ಕಲಿತು ಎರಡೂ ಭಾಷೆಗಳ ಅಧಿಕೃತ ವಕ್ತಾರರಂತೆ ಕೆಲಸಮಾಡುತ್ತಿದ್ದ ಬಗೆಗೆ ನಮಗೆ ಸಾಕಷ್ಟು ಮಾಹಿತಿ ಸಿಗುತ್ತವೆ. ಆಂಗ್ಲರ ಆಡಳಿತದಲ್ಲಿ ಇವರನ್ನು ಸರ್ಕಾರಿ ದುಭಾಷಿಗಳೆಂದು ಗುರುತಿಸಲಾಗುತ್ತಿತ್ತು. ಅದರಂತೆ, ೧೮೭೦ರಲ್ಲಿ ಗ್ಯಾರಟ್ ಎಂಬ ಅಧಿಕಾರಿ ಸರ್ಕಾರಿ ಮುದ್ರಣಾಲಯದ ಸೂಪರಿಂಟೆಂಡೆಂಟು ಹಾಗೂ ಕ್ಯಾನರೀಸ್ ಟ್ರಾನ್ಸಲೇಟರ್ ಎಂಬ ಹುದ್ದೆಯಲ್ಲಿ ಕೆಲಸ ಮಾಡುತ್ತಿದ್ದ ದಾಖಲೆ ಸಿಗುತ್ತದೆ. ಅವರ ನಂತರ ೧೮೭೦ರಲ್ಲಿ ಸ್ಟರ್ರಾಕ್, ಮುಂದೆ ಗ್ಯಾರಿಸನ್ ಅವರುಗಳೂ ಹಾಗೆ ಸರ್ಕಾರದ ಅಧಿಕೃತ ಭಾಷಾಂತರಕಾರರಾಗಿ ಸೇವೆ ಸಲ್ಲಿಸುತ್ತಲೇ ಕಂದಾಯ ಇಲಾಖೆಗೆ ಸಂಬಂಧಿಸಿದಂತೆ ಆಗ ಮಹತ್ವದ ಕಾಯ್ದೆಗಳಾಗಿದ್ದ ನೋಂದಣಿ ಅಧಿನಿಯಮ ಹಾಗೂ ದಂಡಸಂಹಿತೆಗಳ ಅನುವಾದ ನಡೆದ ಬಗೆಗೆ ದಾಖಲೆಗಳಿವೆ.

೧೯೫೬ರ ನವೆಂಬರ್ ೧ರಂದು ಜರುಗಿದ ರಾಜ್ಯಗಳ ಪುನರ್ವಿಂಗಡಣೆಯಿಂದಾಗಿ, ಹಿಂದಿನ ಮುಂಬೈ, ಮದರಾಸು ಮತ್ತು ಹೈದರಾಬಾದು ಸಂಸ್ಥಾನಗಳಲ್ಲಿನ ಭಾಷಾಂತರ ಕಚೇರಿಗಳ ಕನ್ನಡ ವಿಭಾಗಗಳನ್ನು ನಮ್ಮ ರಾಜ್ಯ ಸರ್ಕಾರದ ಅಂದಿನ ಮುಖ್ಯ ಭಾಷಾಂತರಕಾರರ ಕಚೇರಿಯೊಂದಿಗೆ ಸೇರಿಸಲಾಯಿತು. ಕರ್ನಾಟಕ ರಾಜ್ಯದ ಉದಯದೊಂದಿಗೆ ಎಲ್ಲಾ ಕೇಂದ್ರ ಮತ್ತು ರಾಜ್ಯ ಶಾಸನಗಳ ಭಾಷಾಂತರ ಕಾರ್ಯವಷ್ಟೇ ಅಲ್ಲದೆ ಅವುಗಳನ್ನು ಹೆಚ್ಚು ಕರಾರುವಾಕ್ಕಾಗಿ ಮತ್ತು ಹೆಚ್ಚು ಎಚ್ಚರಿಕೆಯಿಂದ ಮಾಡಬೇಕಾದ ಗುರುತರ ಜವಾಬ್ದಾರಿಯನ್ನು ಕೂಡ ಈ ಮುಖ್ಯ ಭಾಷಾಂತರಕಾರರ ಕಚೇರಿಗೆ ವಹಿಸಿಕೊಡಲಾಯಿತು.

ಭಾಷಾಂತರ ಇಲಾಖೆಯು ಬೆಳೆದುಬಂದ ದಾರಿಯನ್ನು ಅವಲೋಕಿಸಿದರೆ ಚಾರಿತ್ರಿಕವಾದ ರೋಚಕ ತಿರುವುಗಳ ಸರಮಾಲೆಯೇ ದೊರಕುತ್ತದೆ. ಆ ಜಾಡನ್ನು ಹಿಡಿದು ಹುಡುಕಿಕೊಂಡು ಹೋದರೆ, ೧೯೧೪ಕ್ಕಿಂತ ಹಿಂದೆಯೇ ಇದು ಅಸ್ತಿತ್ವದಲ್ಲಿದ್ದ ಬಗ್ಗೆ ನಮಗೆ ದಾಖಲೆಗಳು ಸಿಗುತ್ತವೆ. ಬ್ರಿಟಿಷ್ ಪ್ರಾಂತ್ಯಗಳಲ್ಲಿ ಓರಿಯಂಟಲ್ ಟ್ರಾನ್ಸ್‌ಲೇಟರುಗಳ ಕಚೇರಿಗಳಿದ್ದವು ಎಂಬುದನ್ನು ಹಿಂದೆಯೇ ಉಲ್ಲೇಖಿಸಲಾಗಿದೆ. ಹಾಗೆಯೇ ಅವು ಪ್ರಜಾಪ್ರತಿನಿಧಿ ಸಭೆ ಹಾಗೂ ನ್ಯಾಯ ವಿಧಾಯಕ ಸಭೆಗಳಲ್ಲಿ ಭಾಷಾಂತರಕಾರರು ಪ್ರಮುಖ ಪಾತ್ರ ವಹಿಸುತ್ತಿದ್ದ ಕುರುಹುಗಳಾಗಿವೆ.

ಕಚೇರಿ ಕಡತಗಳ ಮೂಲಕ ಸಿಕ್ಕ ಮಾಹಿತಿಯ ಪ್ರಕಾರ ೧೯೨೪ಕ್ಕೂ ಮೊದಲೇ ಮೈಸೂರು ಮಹಾರಾಜರ ಆಡಳಿತ ಕಾಲದ ಕಂದಾಯ ಇಲಾಖೆಯ ಅಡಿಯಲ್ಲಿ ಒಬ್ಬ ಸೂಪರಿಂಟೆಂಡೆಂಟು ಮತ್ತು ೫ ಜನ ಗುಮಾಸ್ತರು ಇದ್ದ ಸಿಬ್ಬಂದಿಯೇ ಕನ್ನಡ ಭಾಷಾಂತರ ಶಾಖೆಯಂತೆ ಕಾರ್ಯ ನಿರ್ವಹಿಸುತ್ತಿತ್ತು. ಭಾಷಾಂತರ ಕಾರ್ಯವು ವಿಶಿಷ್ಟವೂ ತಾಂತ್ರಿಕ ಸ್ವರೂಪದ್ದೂ ಆಗಿದ್ದರಿಂದಾಗಿ, ಸದರಿ ಭಾಷಾಂತರ ಶಾಖೆಯನ್ನೇ 'ಸರ್ಕಾರದ ಕನ್ನಡ ಭಾಷಾಂತರಕಾರರ ಕಚೇರಿ' ಎಂದು ಪುನರ್‌ರಚಿಸುವ ಮೂಲಕ ಅದಕ್ಕೊಂದು ಸ್ಪಷ್ಟ ರೂಪ ಕೊಟ್ಟಿತು. ೧೯೨೪ರ ಹೊತ್ತಿಗೆ ಕಚೇರಿಯ ಮುಖ್ಯಸ್ಥರಾಗಿ ಭಾಷಾಂತರಕಾರ ಹುದ್ದೆಯಲ್ಲಿ ಸಿ. ಕೆ. ವೆಂಕಟರಾಮಯ್ಯನವರು ನೇಮಕಗೊಂಡಿದುದು ಆಳ್ವಿಕೆಯೇ

# ಭಾಷಾಂತರ ಇಲಾಖೆ

ಈರಪ್ಪ ಎಂ. ಕಂಬಳಿ

# ನಡೆದು ಬಂದ ದಾರಿ

ಎರಡು ಭಾಷೆಗಳ ಪರಸ್ಪರ ಭಾಷಾಂತರ ಕಾರ್ಯದಲ್ಲಿ ತೊಡಗುವಲ್ಲಿ ಮೂಲ ಭಾಷೆಯಿರಲಿ ಯಾ ಉದ್ದಿಷ್ಟ ಭಾಷೆಯಿರಲಿ, ಪ್ರತಿಯೊಂದು ಭಾಷೆಗೂ ಅದರದೇ ಆದ ಭಾಷಿಕ ಸ್ವರೂಪ ಮತ್ತು ಸಾಂಸ್ಕೃತಿಕ ನೆಲೆಗಳಿರುತ್ತವೆ. ಭಾಷಾಂತರಕಾರನಾದವನು ಅವೆರಡರ ಬಗೆಗೂ ಕಟ್ಟೆಚ್ಚರ ವಹಿಸಬೇಕಾಗುತ್ತದೆ. ಅದಕ್ಕಾಗಿ, ಈ ಇಲಾಖೆಗೆ ನೇಮಕಗೊಳ್ಳುವ ಭಾಷಾಂತರಕಾರರಿಗೆ ಎರಡೂ ಭಾಷೆಗಳಲ್ಲಿ ಪ್ರಭುತ್ವ ಸಂಪಾದಿಸುವ ನಿಟ್ಟಿನಲ್ಲಿ ವಿಶ್ವವಿದ್ಯಾನಿಲಯಗಳಲ್ಲಿರುವ ಇಂಗ್ಲಿಷ್ ಭಾಷಾ ತರಬೇತಿ ವಿಭಾಗಗಳಿಗೆ ಪ್ರತಿಯೋಜಿಸಿ ಸೂಕ್ತ ತರಬೇತಿ ಪಡೆದುಕೊಳ್ಳುವ ಅವಕಾಶ ಕಲ್ಪಿಸುವಂತಾಗಬೇಕು. ಅದರಿಂದ ಭಾಷಾಂತರ ಕಾರ್ಯದಲ್ಲಿ ದಕ್ಷತೆ ಸಾಧ್ಯವಾಗುತ್ತದೆ. ವ್ಯಕ್ತಿಗತ ಮಾತ್ರವಲ್ಲದೆ ಸರ್ಕಾರಕ್ಕೂ ಪ್ರಯೋಜನವಾದೀತು.

ಭಾಷಾಂತರ ಕಾರ್ಯ ಸ್ವತಃ ಸಾಹಿತಿಯೂ ಆಗಿದ್ದ ಸಿ. ಕೆ. ವೆಂಕಟರಾಮಯ್ಯನವರ ಆಗಿನ ಭಾಷಾಂತರ ಕಾರ್ಯಗಳು ಆಡಳಿತಾತ್ಮಕ ದೃಷ್ಟಿಯಿಂದಷ್ಟೇ ಅಲ್ಲ, ಭಾಷೆ – ಸಾಹಿತ್ಯಗಳಿಂದ ಇಂದಿಗೂ ಅಮೂಲ್ಯ ದಾಖಲೆಗಳಾಗಿ ಉಳಿದಿವೆ.

ಅಷ್ಟೇ ಅಲ್ಲ, ೧೯೪೧ರಲ್ಲಿ ಮೈಸೂರಿನ ದಿವಾನರಾಗಿದ್ದ ಎನ್. ಮಾಧವರಾವ್ ಅವರ ಬಜೆಟ್ ಭಾಷಣವನ್ನು ಕನ್ನಡಕ್ಕೆ ಅನುವಾದಿಸಿದ ಸಿ. ಕೆ. ವೆಂಕಟರಾಮಯ್ಯನವರೇ ಆಗಿನ ಪ್ರಜಾಪ್ರತಿನಿಧಿ ಸಭೆಯ ಮುಂದೆ ಸ್ವತಃ ಓದಿದ ಬಗೆಗೆ ದಾಖಲೆಯಿದೆ. 'ಭಾರತದ ಸಂವಿಧಾನ'ದ ಮೊಟ್ಟ ಮೊದಲ ಕನ್ನಡ ಭಾಷಾಂತರವನ್ನು ಸಿದ್ಧಪಡಿಸಿದವರೂ ಸಿ. ಕೆ. ವೆಂಕಟರಾಮಯ್ಯನವರೇ. ತೀ.ನಂ.ಶ್ರೀ. ಮತ್ತು ರಂಗನಾಥ ದಿವಾಕರ ಸಲಹೆಗಾರರಾಗಿ ಅವರು ಕೆಲಸ ಮಾಡಿದ್ದಿದೆ. ೧೯೪೯ರ ಸುಮಾರಿನಲ್ಲಿ ಭಾರತದ ಸಂವಿಧಾನ ರೂಪುಗೊಳ್ಳುತ್ತಿದ್ದ ಸಂದರ್ಭದಲ್ಲಿಯೇ 'ರಾಜ್ಯಾಂಗ ಶಬ್ದಕೋಶ' ಎಂಬ ಹೊತ್ತಿಗೆ ಸಿದ್ಧಪಡಿಸುವಲ್ಲಿ ಕನ್ನಡದ ಹಿರಿಯ ವಿದ್ವಾಂಸರಾದ ತೀ. ನಂ. ಶ್ರೀಕಂಠಯ್ಯ ಅವರು ನೇಮಕಗೊಂಡಿದ್ದರು.

೧೯೫೦ರ ಸುಮಾರಿಗೆ ಇಲಾಖೆಗೆ ಇನ್ನಷ್ಟು ಸ್ಪಷ್ಟ ರೂಪ ನೀಡಿ, ಹೆಚ್ಚು ಜನ ಸಿಬ್ಬಂದಿಯನ್ನು ಒದಗಿಸುವ ಮೂಲಕ ರಾಜ್ಯ ಶಾಸನಗಳನ್ನು ಭಾಷಾಂತರಿಸುವ ಪ್ರಮುಖ ಕಾರ್ಯವನ್ನು ಈ ಇಲಾಖೆಗೆ ವಹಿಸಿಕೊಡಲಾಯಿತು. ೧೯೫೩ರಲ್ಲಿ ಸಿ. ಕೆ. ವೆಂಕಟರಾಮಯ್ಯನವರನ್ನು ಸಾಹಿತ್ಯ ಮತ್ತು ಸಂಸ್ಕೃತಿ ಅಭಿವೃದ್ಧಿ ನಿರ್ದೇಶಕರಾಗಿ ಸರ್ಕಾರ ನೇಮಿಸಿತ್ತು ಸಿ. ಕೆ. ವೆಂಕಟರಾಮಯ್ಯನವರ ಸುದೀರ್ಘ ಅಧಿಕಾರಾವಧಿಯ ತರುವಾಯ ಸಿ. ಆರ್. ಅನಂತರಾವ್ ಅವರು ಸರ್ಕಾರದ ಭಾಷಾಂತರಕಾರರಾಗಿ ನೇಮಕಗೊಂಡರು.

೧೯೫೬ರಲ್ಲಿ ರಾಜ್ಯ ಪುನರ್ ವಿಂಗಡನೆಯಾಗಿ ಕರ್ನಾಟಕ ರಾಜ್ಯ ಅಸ್ತಿತ್ವಕ್ಕೆ ಬಂದ ಮೇಲೆ ಭಾಷಾಂತರ ಇಲಾಖೆಯನ್ನು ಪುನರ್ ಸಂಘಟಿಸಲಾಯಿತು. ಕೆಲವು ವರ್ಷಗಳ ತರುವಾಯ ಅದು ಮುಖ್ಯ ಭಾಷಾಂತರಕಾರರ ಕಚೇರಿ ಎಂದು ಪುನರ್-ನಾಮಕರಣಗೊಂಡಿತು. ಈಗ ಗ್ರಂಥಾಲಯ ಇಲಾಖೆಯ ಒಂದು ಪ್ರಕಾರ್ಯವಾಗಿರುವ, ಪುಸ್ತಕಗಳ ನೋಂದಣಿ ಅಧಿನಿಯಮದ ಮೇರೆಗೆ ಖಾಸಗಿ ಪ್ರಕಾಶಕರಿಂದ ಬಂದ ಪುಸ್ತಕಗಳ ಪರಿಶೀಲನೆ ಮಾಡುವ ಕಾರ್ಯವನ್ನೂ ಈ ಹಿಂದೆ ಈ ಇಲಾಖೆಯೇ ಕೆಲವು ವರ್ಷ ನಿರ್ವಹಿಸುತ್ತಿತ್ತು. ಅಗ ಇಲಾಖಾ ಮುಖ್ಯಸ್ಥರ ಹುದ್ದೆಯನ್ನು ಮುಖ್ಯ ಭಾಷಾಂತರಕಾರರು ಹಾಗೂ ಪದನಿಮಿತ್ತ ಪುಸ್ತಕ ಪರೀಕ್ಷಕರು ಎಂದೇ ಹೆಸರಿಸಲಾಗಿತ್ತು. ನಂತರ ಆ ಕಾರ್ಯವನ್ನು ಗ್ರಂಥಾಲಯ ಇಲಾಖೆಗೆ ವರ್ಗಾಯಿಸಲಾಯಿತು.

ಕರ್ನಾಟಕ ಸರ್ಕಾರವು ೧೯೬೩ರಲ್ಲಿ ರಾಜ್ಯಭಾಷಾ ಅಧಿನಿಯಮವನ್ನು ಜಾರಿಗೆ ತರುವ ಮೂಲಕ ಅಧಿಸೂಚನೆ ಹೊರಡಿಸಿ, ಕನ್ನಡವನ್ನು ಆಡಳಿತ ಭಾಷೆಯಾಗಿ ಅನುಷ್ಠಾನಗೊಳಿಸಲು ಸೂಕ್ತ ಕ್ರಮ ಕೈಗೊಂಡಿತು. ೧೯೬೬ರ ಸುಮಾರಿನಲ್ಲಿಯೇ ಮುಖ್ಯ ಭಾಷಾಂತರಕಾರರ ಕಚೇರಿಗೆ ಲಗತ್ತಾಗಿರುವಂತೆ ಕೇಂದ್ರದ ಮಾದರಿಯಲ್ಲಿ ತಜ್ಞರ ಸಮಿತಿಯೊಂದನ್ನು ರಚಿಸಲಾಯಿತು. ಅದರ ಮೊದಲ ಅಧ್ಯಕ್ಷರಾಗಿ ನಿವೃತ್ತ ನ್ಯಾಯಮೂರ್ತಿ ಎಸ್. ಎಸ್. ಮಳಿಮಠರವರು, ಸದಸ್ಯರಾಗಿ ಎಂ.ಪಿ.ಎಲ್. ಶಾಸ್ತ್ರಿ, ವೆಂಕಟರಮಣ ಅಯ್ಯರ್, ಅಂದಾನಯ್ಯ ಪುರಾಣಿಕ ಅವರುಗಳಿದ್ದರು. ಈ ಸಮಿತಿಯೇ ಮುಂದೆ 'ಕರ್ನಾಟಕ




ರಾಜಭಾಷಾ (ವಿಧಾಯಿ) ಆಯೋಗ'ವಾಗಿ ರೂಪುಗೊಂಡು ಮುಂದುವರಿಯಿತಲ್ಲದೆ ಇಲಾಖೆಯು ಕನ್ನಡಕ್ಕೆ ಭಾಷಾಂತರಿಸಿದ ಕೇಂದ್ರ ಹಾಗೂ ರಾಜ್ಯ ಅಧಿನಿಯಮಗಳ ಭಾಷಾಂತರವನ್ನು ಪರಿಷ್ಕರಿಸಿ ಅವುಗಳ ಅಧಿಕೃತ ಪಾಠಗಳನ್ನು ಸಿದ್ಧಪಡಿಸುವ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದೆ.

ನಿವೃತ್ತ ನ್ಯಾಯಮೂರ್ತಿಗಳಾಗಿದ್ದ ಎಸ್. ಎಸ್. ಮಳಿಮಠ ಹಾಗೂ ಕೆ. ಆರ್. ಗೋಪಿವಲ್ಲಭ ಅಯ್ಯಂಗಾರ್ ಅವರುಗಳ ತರುವಾಯ ಕಾನೂನು ಕಾಲೇಜಿನ ನಿವೃತ್ತ ಪ್ರಾಚಾರ್ಯರಾಗಿದ್ದ ಪ್ರೊ॥ ಆರ್. ರಂಗಯ್ಯ ಅನುಕ್ರಮವಾಗಿ ಆಯೋಗದ ಅಧ್ಯಕ್ಷರಾಗಿ ನಿಯುಕ್ತರಾಗಿದ್ದರು. ಅಧಿಕಾರೇತರ ಅಧ್ಯಕ್ಷರು/ಸದಸ್ಯರುಗಳಿಲ್ಲದ ರಾಜಭಾಷಾ ಆಯೋಗವು ಅಸ್ತಿತ್ವದಲ್ಲಿಲ್ಲದ ಸಂದರ್ಭಗಳಲ್ಲಿ ಸರ್ಕಾರದ ಕಾನೂನು ಕಾರ್ಯದರ್ಶಿಗಳಾಗಿದ್ದ ಸಿ. ಗೋವಿಂದರಾಜ, ಕೆ. ಈಶ್ವರ ಭಟ್ಟ ಮತ್ತು ಕೆ. ಆರ್. ಚಾಮಯ್ಯ ಅವರುಗಳು ತಮ್ಮ ಕರ್ತವ್ಯದ ಜೊತೆ ಹೆಚ್ಚುವರಿಯಾಗಿ ಪ್ರಭಾರೀ ಅಧ್ಯಕ್ಷರಂತೆ ಹೊಣೆ ಹೊತ್ತು ಅಧಿಕೃತ ಭಾಷಾಂತರದ ಪರಿಷ್ಕರಣೆ ಕಾರ್ಯ ನಿರ್ವಹಿಸಿದರು.

ನಿವೃತ್ತ ಸಿವಿಲ್ ಮತ್ತು ಜಿಲ್ಲಾ ನ್ಯಾಯಾಧೀಶರಾದ ವೈ.ಎಂ.ಸಿ. ಶರ್ಮ ಅವರನ್ನು, ಅವರ ನಂತರ ಇಲಾಖೆಯ ಮಾಜಿ ನಿರ್ದೇಶಕರುಗಳಾದ ಕಂಠೀರಾವ್ ಮತ್ತು ಎಸ್. ಎನ್. ಕೋಡ್ಕಣಿ, ಆರ್. ನಾವೂರ್ಕರ್ ಅವರನ್ನು ಅನುಕ್ರಮವಾಗಿ ಸದರಿ ಆಯೋಗದ ಅಧ್ಯಕ್ಷರು ಗಳನ್ನಾಗಿ ಸರ್ಕಾರ ನೇಮಕಮಾಡಿತು. ಸಾಹಿತಿ ಗೊ. ರು. ಚನ್ನಬಸಪ್ಪ ಹಾಲಿ ಅಧ್ಯಕ್ಷರು, ಸಾಹಿತಿಗಳೂ ಭಾಷಾ ತಜ್ಞರು ಗಳೂ ಆದ ಆರ್. ವೈ. ಧಾರವಾಡಕರ್, ಹೆಚ್. ಜೆ. ಲಕ್ಕಪ್ಪಗೌಡ, ಸಾ. ಶಿ. ಮರುಳಯ್ಯ, ಟಿ. ಆರ್. ಮಹಾದೇವಯ್ಯ. ಸಿ. ಕೆ. ಪರಶುರಾಮಯ್ಯ, ಹನಸೋಗೆ ಮಹಾದೇವಯ್ಯ, ಕೆಂಪೇಗೌಡ, ಬಿ. ಕಾ. ಮೂರ್ತೀಶ್ವರಯ್ಯ ಮುಂತಾದವರು ಸದಸ್ಯರಾಗಿ ನೇಮಕಗೊಂಡಿದ್ದಾರೆ. ಅನೇಕ ಕಾರ್ಯನಿರತ ನ್ಯಾಯವಾದಿಗಳು ಶಿಕ್ಷಣ ಇಲಾಖೆಯ ನಿವೃತ್ತ ಅಧಿಕಾರಿಗಳು ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

'ರಾಷ್ಟ್ರೀಯ ಪಂಚಾಂಗ'ದ ಕನ್ನಡ ಆವೃತ್ತಿಯನ್ನು ೧೯೭೧ರಲ್ಲಿ ಭಾಷಾಂತರ ಇಲಾಖೆಯ ನೆರವಿನಿಂದಲೇ ಸಿದ್ಧಪಡಿಸಲಾಗಿತ್ತು. ೧೯೭೩ರಲ್ಲಿ ರಾಜ್ಯಕ್ಕೆ 'ಕರ್ನಾಟಕ' ಎಂದು ಪುನರ್ ನಾಮಕರಣಗೊಂಡ ಬೆನ್ನಹಿಂದೆಯೇ, ಭಾಷೆಯ ಅಭಿವೃದ್ಧಿಗೆ ಸಂಬಂಧಿಸಿದಂತೆ ಆ ಮೊದಲು ಪಠ್ಯಪುಸ್ತಕ ನಿರ್ದೇಶನಾಲಯದಲ್ಲಿದ್ದ ಕನ್ನಡ ಅಭಿವೃದ್ಧಿಯ ಕೆಲಸ ಕಾರ್ಯಗಳನ್ನು ಭಾಷಾಂತರ ಇಲಾಖೆಗೆ ವಹಿಸಿ ಕೊಡುವ ಮೂಲಕ 'ಭಾಷಾ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶನಾಲಯ' ಎಂಬ ಹೆಸರಿನಲ್ಲಿ ಇನ್ನೂ ವ್ಯಾಪಕವಾದ ಸ್ಥಾನಮಾನ ನೀಡಲಾಯಿತು. ಎಂ. ಕೇಶವ ಭಟ್ಟರು (ಮುಳಿಯ ತಿಮ್ಮಪ್ಪಯ್ಯನವರ ಮಕ್ಕಳು) ಮೊದಲ ನಿರ್ದೇಶಕರಾಗಿ ನೇಮಕಗೊಂಡರು. ಈ ಸಂದರ್ಭದಲ್ಲಿಯೇ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವ ಗುರುತರವಾದ ಹೊಣೆಯನ್ನು ಈ ಇಲಾಖೆಗೆ ವಹಿಸಲಾಯಿತು. ಕಾರ್ಯಭಾರಕ್ಕನುಸಾರವಾಗಿ ಹೆಚ್ಚು ಹುದ್ದೆಗಳೂ ಸೃಜಿಸಲ್ಪಟ್ಟು ಅಗಾಧ ಪ್ರಮಾಣದಲ್ಲಿ ಇಲಾಖೆಯ ವಿಸ್ತರಣೆಗೆ ಪ್ರಯತ್ನಗಳು ನಡೆದವು.

೧೯೭೫ರ ಅಕ್ಟೋಬರಿನಲ್ಲಿ ಕೇಶವ ಭಟ್ಟರ ನಿವೃತ್ತಿಯ ನಂತರ, ಹಿರಿಯ ಐ.ಎ.ಎಸ್. ಅಧಿಕಾರಿ ಜಯತೀರ್ಥ ರಾಜಪುರೋಹಿತರು ಈ ಇಲಾಖೆಯ ನಿರ್ದೇಶಕರಾಗಿ ಬಂದರು. ಸ್ವತಃ ಸಾಹಿತಿಯೂ ಆಗಿದ್ದ ರಾಜಪುರೋಹಿತರ ಅಧಿಕಾರಾವಧಿಯಲ್ಲಿ ಕಲೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ಈ ಇಲಾಖೆಗೆ ವಹಿಸ ಲಾಯಿತು. ಈ ಮೊದಲು ಸಾಹಿತ್ಯ ಮತ್ತು ಕಲೆಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ಸಾರ್ವಜನಿಕ ಶಿಕ್ಷಣ ಇಲಾಖೆ ನೋಡಿಕೊಳ್ಳುತ್ತಿತ್ತು. ಅದೇ ಅವಧಿಯಲ್ಲಿ ಈ ಇಲಾಖೆಯ ಮೇಲ್ವಿಚಾರಣೆಯಲ್ಲಿ ವಿವಿಧ ಅಕಾಡೆಮಿಗಳ ರಚನೆಯಾಯಿತು.

ಕಲೆ, ಸಾಹಿತ್ಯ, ಸಂಸ್ಕೃತಿಯ ಚಟುವಟಿಕೆಗಳು ಆದ್ಯತೆ ಪಡೆಯುತ್ತ ಹೋದಂತೆ ಕಾನೂನು ಭಾಷಾಂತರಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳು ತ್ವರಿತಗತಿಯಲ್ಲಿ ನಡೆಯುತ್ತಿಲ್ಲವೆಂಬ ನೆಪ ಒಡ್ಡಿದ ಕೆಲವು ಹಿರಿಯ ಅಧಿಕಾರಿಗಳು ಪ್ರತಿಷ್ಠೆಗಿಳಿದ ಪರಿಣಾಮವಾಗಿ, ಭಾಷಾ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶನಾಲಯವನ್ನು ವಿಭಜಿಸಿ ೧೯೭೭ರ ಸೆಪ್ಟೆಂಬರ್‌ನಲ್ಲಿ 'ಭಾಷಾಂತರ ನಿರ್ದೇಶನಾಲಯ' ಹಾಗೂ 'ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ'ಗಳೆಂದು ಎರಡು ನಿರ್ದೇಶನಾಲಯಗಳನ್ನು ಅಸ್ತಿತ್ವಕ್ಕೆ ತರಲಾಯಿತು. ಅಧಿಕೃತವಾಗಿ, ರಾಜ್ಯ ಹಾಗೂ ಕೇಂದ್ರ ಅಧಿನಿಯಮಗಳ ಭಾಷಾಂತರಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳನ್ನು ಭಾಷಾಂತರ ನಿರ್ದೇಶನಾಲಯಕ್ಕೆ ವಹಿಸುವ ಮೂಲಕ ಇದನ್ನು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವಾಲಯದ ಅಡಿಯಲ್ಲಿ ಇರಿಸಲಾಯಿತು. ಈಗ ಇದು ಸರ್ಕಾರದ ಸಂಸದೀಯ ವ್ಯವಹಾರಗಳು ಮತ್ತು ಶಾಸನರಚನಾ ಇಲಾಖೆಯ ಕೆಳಗೆ ಕೆಲಸ ಮಾಡುತ್ತಿದೆ.

೧೯೭೬ರಲ್ಲಿ ದಕ್ಷಿಣ ರಾಜ್ಯಗಳ ಆಡಳಿತ ಭಾಷಾ ಗೋಷ್ಠಿಯೊಂದನ್ನು ಮೈಸೂರಿನಲ್ಲಿ ಸಂಘಟಿಸಲಾಗಿತ್ತು. ಅದರಲ್ಲಿ ಆಂಧ್ರ, ತಮಿಳುನಾಡು, ಕೇರಳ, ಪಾಂಡಿಚೇರಿಗಳಿಂದ ಬಂದಿದ್ದ ಇಲಾಖಾ ಪ್ರತಿನಿಧಿಗಳು ಪಾಲ್ಗೊಂಡಿದ್ದರು. ಆ ಸಮಾವೇಶವು ತೆಗೆದುಕೊಂಡ ಠರಾವುಗಳೆಂದರೆ – ರಾಜ್ಯಭಾಷೆಗೆ ಆಡಳಿತ ಭಾಷೆಯ ಸ್ಥಾನಮಾನ ನೀಡುವುದು ಹಾಗೂ ಕಾನೂನು ಭಾಷಾಂತರದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಕಾಲಕಾಲಕ್ಕೆ ಕಾನೂನು ಪದಕೋಶಗಳನ್ನು ಪರಿಷ್ಕರಿಸುವು ದಾಗಿತ್ತು. ಆದರೆ,

ಕನ್ನಡದ ಮಟ್ಟಿಗೆ ೧೯೬೭ರಲ್ಲಿಯೇ ಸಿದ್ಧಪಡಿಸಿದ್ದ 'ಆಡಳಿತ ಶಬ್ದಕೋಶ' ಹಾಗೂ ೧೯೭೫ರಲ್ಲಿ ಪ್ರಕಟಿಸಿದ 'ಕಾನೂನು ಪದಕೋಶ'ಗಳನ್ನು ಇಲ್ಲಿ ಗಮನಿಸಬೇಕು.

'ಭಾಷಾಂತರ ನಿರ್ದೇಶನಾಲಯ'ದ ಪ್ರಥಮ ನಿರ್ದೇಶಕರಾಗಿ ಕಂಠೀರಾವ್ ನಿಯುಕ್ತರಾದರು. ನಿವೃತ್ತಿಯ ಅಂಚಿನಲ್ಲಿ ಬರವಣಿಗೆಗೆ ತೊಡಗಿದ ಅವರು ಕನ್ನಡದಲ್ಲಿ ಕೆಲವು ಕಾನೂನು ಪುಸ್ತಕಗಳನ್ನು ಬರೆದು ಜನಪ್ರಿಯತೆಯನ್ನೂ ಗಳಿಸಿದರು. ಅಲ್ಲಿಂದ ಇಲಾಖೆಯಲ್ಲಿ ಯಾವುದೇ ಪ್ರಮುಖ ಬೆಳವಣಿಗೆಯಾಗಲಿ ಬದಲಾವಣೆಗಳಾಗಲಿ ಕಾಣಿಸಿಕೊಳ್ಳಲಿಲ್ಲ. ಕಂಠೀರಾವ್ ನಂತರದಲ್ಲಿ ಶೇಷಗಿರಿ ರಾವ್, ಡಾ॥ ಕೆ. ರಂಗಪ್ಪ, ಎಸ್. ಎನ್. ಕೋಡ್ಕಣಿ, ಎನ್. ನರಸಿಂಹರಾವ್, ಬೇಲೂರು ಜವರಯ್ಯ ಅವರುಗಳು ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ನಂತರ ಕೆ. ಎನ್. ಜಯಶ್ರೀ ನಿರ್ದೇಶಕರು. ಕರ್ನಾಟಕ ಸರ್ಕಾರವು ಈಗಿನ 'ಭಾಷಾಂತರ ನಿರ್ದೇಶನಾಲಯ'ವನ್ನು ಪುನರ್ ರೂಪಿಸಿದೆ. ಸ್ವತಂತ್ರ ಇಲಾಖೆಯ ಸ್ಥಾನ-ಮಾನ ನೀಡಿದೆ. ನಾರಾಯಣ ಸ್ವಾಮಿ ನಿರ್ದೇಶಕರಾಗಿದ್ದಾರೆ.

ವಿವಿಧ ಸ್ವರೂಪದ ವಿಷಯಗಳ ಇಂಗ್ಲಿಷ್-ಕನ್ನಡ ಹಾಗೂ ಕನ್ನಡ-ಇಂಗ್ಲಿಷ್ ಭಾಷಾಂತರ ಕಾರ್ಯವನ್ನು ನಿರ್ವಹಿಸುವುದರ ಜೊತೆಗೆ ಭಾಷಾಂತರ ನಿರ್ದೇಶನಾಲಯದಲ್ಲಿ ಅಲ್ಪಸಂಖ್ಯಾತ ಭಾಷೆಗಳ ಭಾಷಾಂತರ ಕಾರ್ಯದ ವ್ಯವಸ್ಥೆ ಕೂಡ ಇದೆ. ಹಿಂದಿ, ಮರಾಠಿ, ಉರ್ದು, ತಮಿಳು ಭಾಷೆಗಳಲ್ಲಿ ಸಾರ್ವಜನಿಕರು ಸರ್ಕಾರಕ್ಕೆ ಸಲ್ಲಿಸುವ ಮನವಿಗಳ ಭಾಷಾಂತರಕ್ಕೆ ಮತ್ತು ರಾಜ್ಯ ಸರ್ಕಾರದ ವಿವಿಧ ಇಲಾಖೆಗಳು ಕಳುಹಿಸುವ ಅಲ್ಪಸಂಖ್ಯಾತ ಭಾಷಾ ವಿಷಯಗಳ ಭಾಷಾಂತರಕ್ಕೆ ಹಾಗೂ ಕೇಂದ್ರ/ ರಾಜ್ಯ ಕಾಯ್ದೆಗಳು ಮತ್ತು ಅವುಗಳಿಗೆ ಸಂಬಂಧಿಸಿದ ನಿಯಮಗಳ ಸಾರಾಂಶವನ್ನು ಅಲ್ಪಸಂಖ್ಯಾತ ಭಾಷೆಗಳಲ್ಲಿ ಸಿದ್ಧಪಡಿಸುವ ವ್ಯವಸ್ಥೆಯೂ ಇಲ್ಲಿದೆ. ನಿವೃತ್ತಿಯಿಂದಾಗಿ ಸದರಿ ಭಾಷಾಂತರಕಾರರ ಹುದ್ದೆಗಳು ಈಗ ಖಾಲಿಯಿದ್ದು ಮತ್ತೆ ತುಂಬಿಕೊಳ್ಳಲು ಸರ್ಕಾರ ಮನಸ್ಸುಮಾಡಬೇಕಾಗಿದೆ.

೧೯೮೪ರಿಂದ ಅಧಿಕೃತವಾಗಿ ಕನ್ನಡದಲ್ಲಿಯೇ ರಾಜ್ಯ ಅಧಿನಿಯಮಗಳನ್ನು ರಚಿಸಲು ವಿಧಾನಸೌಧದಲ್ಲಿ ಒಂದು ಶಾಖೆಯನ್ನೇ ತರಲಾಯಿತು. ಮೂಲ ಅಧಿನಿಯಮಗಳನ್ನು ಕನ್ನಡದಲ್ಲಿಯೇ ಸಿದ್ಧಪಡಿಸಿ ರಾಜ್ಯಪಾಲರ/ ರಾಷ್ಟ್ರಾಧ್ಯಕ್ಷರ ಅನುಮೋದನೆ ಪಡೆಯುತ್ತಿರುವುದೂ ಇದೆ. ಇಲಾಖೆಯು ಇದುವರೆಗೆ ೩೩೦ ಕೇಂದ್ರ ಅಧಿನಿಯಮಗಳನ್ನು, ೧೭೨ ರಾಜ್ಯ ಅಧಿನಿಯಮಗಳನ್ನು ಭಾಷಾಂತರಿಸಿದೆ.

ನ್ಯಾಯಾಲಯಕ್ಕೆ ಲಗತ್ತಾಗಿರುವಂತೆ 'ಕನ್ನಡ ತೀರ್ಪುಗಳ ವರದಿ' ಸಿದ್ಧಪಡಿಸುವಲ್ಲಿ ಈ ಇಲಾಖೆಯ ಉದ್ಯೋಗಿಗಳನ್ನೇ ಪ್ರತಿಯೋಜಿಸಿ ಕಳಿಸಲಾಗಿದೆ. ಅದರಂತೆಯೇ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯಲ್ಲಿ ಪ್ರಾರೂಪಣಾ ಶಾಖೆ ಹಾಗೂ ವಿಧಾನಮಂಡಲಕ್ಕೆ ಅಗತ್ಯವಾಗಿರುವ ವಿಷಯಗಳ ಭಾಷಾಂತರಕಾರ್ಯ ನೆರವೇರಿಸಲು ವಿಧಾನಸೌಧಕ್ಕೆ ಈ ಇಲಾಖೆಯ ಸಿಬ್ಬಂದಿಯನ್ನೇ ಪ್ರತಿನಿಯೋಜಿಸಲಾಗಿದೆ. ಅದರಿಂದಾಗಿ ಈ ಇಲಾಖೆಯ ಮೇಲೆ ಅತಿ ಹೆಚ್ಚಿನ ಕಾರ್ಯಭಾರ ಬಿದ್ದಿದೆ.

ಭಾಷಾಂತರ ಕೆಲಸದ ಸ್ವರೂಪ ಎಷ್ಟು ಕ್ಲಿಷ್ಟಕರ ಎಂಬ ಸಾಮಾನ್ಯ ಜ್ಞಾನವೂ ಇಲ್ಲದ, ಟೈಪು ಮಾಡಿಕೊಡುವಷ್ಟೇ ಸುಲಭವೆಂದು ನಂಬಿರುವ ಹುಂಬರಿಗೆ ಹೇಗೆ ತಿಳಿಹೇಳುವುದೆಂಬ ಸಮಸ್ಯೆ ಆಗಾಗ ಈ ಇಲಾಖೆಯ ಅಧಿಕಾರಿಗಳನ್ನು ಕಾಡಿದ್ದಿದೆ. ನಿರೂಪಣಾ ಶೈಲಿಗೆ ಸಂಬಂಧಿಸಿದಂತೆ ಯಾವುದೇ ಭಾಷೆಗೇ ಆಗಲಿ, ಭಾಷಾಂತರಕ್ಕಾಗಲಿ ಅಂತಿಮ ರೂಪ ಎನ್ನುವುದಿರುವುದಿಲ್ಲ. ಒಬ್ಬ ವಿದ್ವಾಂಸ ಮಾಡಿದ್ದನ್ನು ಮತ್ತೊಬ್ಬ ಪ್ರಾಜ್ಞರ ಮುಂದಿಟ್ಟಾಗ ಅದರ ಸ್ವರೂಪ ಬದಲಾಗುತ್ತಲೇ ಹೋಗುತ್ತದೆ. ಒಂದೇ ಕೃತಿ, ಒಂದೇ ಭಾಷೆಯಲ್ಲಿ ಬೇರೆ ಬೇರೆ ಭಾಷಾಂತರಗಳನ್ನು ಕಂಡ ನಿದರ್ಶನಗಳು ಬೇಕಾದಷ್ಟಿವೆ. ಇದು ಭಾಷಾಂತರಕ್ಕೆ ಇರುವ ಸಹಜವಾದ ಭಾಷಿಕ ಪ್ರಕ್ರಿಯೆ. ಆಗ ಭಾಷಾಂತರವು ಮೂಲ ಕೃತಿಗೆ ಎಷ್ಟು ಹತ್ತಿರದಲ್ಲಿದೆ, ಎಷ್ಟರ ಮಟ್ಟಿಗೆ ನ್ಯಾಯ ದೊರಕಿಸಿದೆ ಎನ್ನುವುದರಲ್ಲಿಯೇ ಭಾಷಾಂತರಕಾರನ ಯಶಸ್ಸು ಅಡಗಿರುತ್ತದೆ. ವಸ್ತುಸ್ಥಿತಿ ಹೀಗಿದ್ದಾಗ, ಭಾಷಾಂತರಕಾರನ ಹೊಣೆಗಾರಿಕೆಯನ್ನು ಈ ಹಿನ್ನೆಲೆಯಲ್ಲಿ ಪರಾಂಬರಿಸಬೇಕಾಗುತ್ತದೆ. ಏನೇ ಆಗಲಿ, ಭಾಷಾಂತರ ಕಾರ್ಯದ ಹಿಂದೆ ಬರೀ ವ್ಯಾವಹಾರಿಕ ಉದ್ದೇಶ ಮಾತ್ರವಿರದೆ ಆಯಾ ಜನಾಂಗದ ಸಾಂಸ್ಕೃತಿಕ ನೆಲೆಯೂ ಇರುತ್ತಾದುದರಿಂದ ಭಾಷಾಂತರಕಾರನಿಗೆ ಎರಡೂ ಭಾಷೆಗಳ ಹಿಡಿತದ ಜೊತೆಗೇ ವಿಷಯ-ವಸ್ತುವಿನ ನಿರ್ವಹಣೆಯಲ್ಲೂ ವಿಶೇಷ ಮುತುವರ್ಜಿ ವಹಿಸಬೇಕಾದ ಅಗತ್ಯವೂ ಇರುತ್ತದೆ. ಅದನ್ನು ಅನುಲಕ್ಷಿಸಿದಂತೆಯೇ ಕನ್ನಡವನ್ನು ರಾಜ್ಯದ 'ಆಡಳಿತ ಭಾಷೆ'ಯಾಗಿ ಬಳಸುವಾಗ ಬರುವ ಪಾರಿಭಾಷಿಕ ಪದಗಳಲ್ಲಿ ಏಕರೂಪತೆ ತರುವುದು ಮತ್ತು ಕಾನೂನು ಭಾಷಾಂತರಕ್ಕೆ ಖಚಿತತೆ ಮತ್ತು ಅಧಿಕೃತತೆ ನೀಡುವುದು ಈ ಇಲಾಖೆಯ ಬಹುಮುಖ್ಯ ಜವಾಬ್ದಾರಿಯಾಗಿದೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಎರಡು ಭಾಷೆಗಳ ಪರಸ್ಪರ ಭಾಷಾಂತರ ಕಾರ್ಯದಲ್ಲಿ ತೊಡಗುವಲ್ಲಿ ಮೂಲ ಭಾಷೆಯಿರಲಿ ಯಾ ಉದ್ದಿಷ್ಟ ಭಾಷೆಯಿರಲಿ, ಪ್ರತಿಯೊಂದು ಭಾಷೆಗೂ ಅದರದೇ ಆದ ಭಾಷಿಕ ಸ್ವರೂಪ ಮತ್ತು ಸಾಂಸ್ಕೃತಿಕ ನೆಲೆಗಳಿರುತ್ತವೆ. ಭಾಷಾಂತರಕಾರನಾದವನು ಅವೆರಡರ ಬಗೆಗೂ ಕಟ್ಟೆಚ್ಚರ ವಹಿಸಬೇಕಾಗುತ್ತದೆ. ಅದಕ್ಕಾಗಿ, ಈ ಇಲಾಖೆಗೆ ನೇಮಕಗೊಳ್ಳುವ ಭಾಷಾಂತರಕಾರರಿಗೆ ಎರಡೂ ಭಾಷೆಗಳಲ್ಲಿ ಪ್ರಭುತ್ವ ಸಂಪಾದಿಸುವ ನಿಟ್ಟಿನಲ್ಲಿ ವಿಶ್ವವಿದ್ಯಾ ನಿಲಯಗಳಲ್ಲಿ ಇರುವ ಇಂಗ್ಲಿಷ್ ಭಾಷಾ ತರಬೇತಿ ವಿಭಾಗಗಳಿಗೆ ಪ್ರತಿಯೋಜಿಸಿ ಸೂಕ್ತ ತರಬೇತಿ ಪಡೆದುಕೊಳ್ಳುವ ಅವಕಾಶ ಕಲ್ಪಿಸುವಂತಾಗಬೇಕು. ಅದರಿಂದ ಭಾಷಾಂತರ ಕಾರ್ಯದಲ್ಲಿ ದಕ್ಷತೆ ಸಾಧ್ಯವಾಗುತ್ತದೆ. ವ್ಯಕ್ತಿಗತ ಮಾತ್ರವಲ್ಲದೆ ಸರ್ಕಾರಕ್ಕೂ ಪ್ರಯೋಜನವಾದೀತು.

ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವಲ್ಲಿ ಅಗತ್ಯ ಪರಿಕರಗಳನ್ನು ಸಿದ್ಧಪಡಿಸಿ ಒದಗಿಸುವ ಈ ಇಲಾಖೆಯು ಕೇವಲ ಕಾರ್ಯಾಗಾರದ ಸ್ವರೂಪದಲ್ಲೇ ಉಳಿದಿದೆ. ಕನ್ನಡದ ಕೆಲಸಗಳು ಒಂದೇ ಕಡೆ ಸಮೀಕರಿಸುವುದು ಸೂಕ್ತವೆಂದು ಅನೇಕ ತಜ್ಞರ ಅಭಿಮತವಾಗಿದೆ. ಅದರಂತೆ, ಇಲಾಖೆಯ ಹಿತದೃಷ್ಟಿಯಿಂದ ಹಾಗೂ ಕನ್ನಡವನ್ನು ಪೂರ್ಣ ಪ್ರಮಾಣದಲ್ಲಿ ಆಡಳಿತ ಭಾಷೆಯಾಗಿಸುವ ದಿಕ್ಕಿನಲ್ಲಿ ಹೊಸ ಹೊಸ ವಿಪುಲ ಯೋಜನೆಗಳನ್ನು ರೂಪಿಸಿಕೊಂಡಂತೆ ಮುಂದುವರಿಯಲು ಈ ಇಲಾಖೆಯ ವಿಸ್ತರಣೆಯ ಬಗ್ಗೆ ಸರ್ಕಾರ ಗಮನ ಹರಿಸಬೇಕಿದೆ.

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ, ಕಾವೇರಿ ಭವನ ಎಫ್ - ಬ್ಲಾಕ್, ಬೆಂಗಳೂರು - ೯

---

*೪೫ನೇ ಪುಟದಿಂದ (ಪರಿಸರ ಮತ್ತು ಶಕ್ತಿ)*

ಜಲವಿದ್ಯುತ್ ತಂತ್ರವನ್ನು ಅವಲಂಬಿಸಲಾಗಿದೆ. ಇತ್ತೀಚೆಗೆ ವಿದ್ಯುತ್ ಪರಿಸ್ಥಿತಿ ಆತಂಕಕಾರಿಯಾಗಿದೆ. ರಾಜ್ಯದಲ್ಲಿ ಜಲವಿದ್ಯುತ್ ಉತ್ಪಾದನೆಗೆ ಸಾಕಷ್ಟು ಮೂಲ ಸ್ಥಳಗಳು ಇದ್ದರೂ ಸಹ ಸಂಪೂರ್ಣವಾಗಿ ಈ ತಂತ್ರಜ್ಞಾನವನ್ನೇ ಅವಲಂಬಿಸುವದು ಸೂಕ್ತವಲ್ಲ. ಪರಿಸರವನ್ನೇ ಹಾಳುಗೆಡಹುವ ಈ ಯೋಜನೆಗಳಿಗೆ ಪರಿಸರ ಪ್ರೇಮಿಗಳಿಂದ ಸಾಕಷ್ಟು ವಿರೋಧ ಕಂಡುಬರುತ್ತಿದೆ. ಜಲವಿದ್ಯುತ್ತಿಗೆ ಉಳಿದ ಒಂದೇ ಪರ್ಯಾಯವೆಂದರೆ ಜೈವಿಕ ವಿದ್ಯುತ್ ಅಣುಸ್ಥಾವರಕ್ಕೆ ಸೂಕ್ತವಾದ ಸ್ಥಳವನ್ನು ಗುರುತಿಸುವದು. ಇದರಿಂದಾಗಿ ಸಂಭವಿಸುವ ಅಪಾಯಗಳ ದೃಷ್ಟಿಯಿಂದ ಇದನ್ನು ಸಾರ್ವಜನಿಕ ವಾಸಸ್ಥಳದಿಂದ ಬಹು ದೂರವಿಟ್ಟು ವರ್ಷದಾದ್ಯಂತ ಯಥೇಚ್ಛವಾಗಿ ನೀರು ಮತ್ತು ವಿದ್ಯುತ್ ಮಂಡಲ ಲಭ್ಯವಿರುವ ಸ್ಥಳಗಳಲ್ಲಿ ಅಣುಸ್ಥಾವರಗಳನ್ನು ಸ್ಥಾಪಿಸಬೇಕಾಗುತ್ತದೆ. ಇಂತಹ ಕೆಲವು ಸ್ಥಳಗಳು ರಾಜ್ಯದಲ್ಲಿ ಲಭ್ಯವಿದ್ದರೂ ಸಹ ಜೈವಿಕ ತ್ಯಾಜ್ಯ ವಸ್ತುಗಳನ್ನು ವಿಲೇವಾರಿ ಮಾಡುವ ಹಂತದಲ್ಲಿ ಬಹಳ ಅಪಾಯಕಾರಿಯಾದ ಜೈವಿಕ ಮಾಲಿನ್ಯ ಉಂಟಾಗುವ ತೀವ್ರ ಸಾಧ್ಯತೆಗಳು ಇರುತ್ತವೆ. ಹೀಗಾಗಿ ಪರ್ಯಾಯ ಮೂಲಗಳಾಗಿ ಸೌರಶಕ್ತಿ, ಗಾಳಿ, ಸಮುದ್ರದ ಅಲೆ ಮುಂತಾದವುಗಳನ್ನು ಪರಿಶೀಲಿಸುವ ಯೋಜನೆಯನ್ನು ಕಾರ್ಯರೂಪಗೊಳಿಸುವದು ಜರೂರು ಅವಶ್ಯಕವಾಗಿದೆ. ಈ ಮೂಲಗಳಿಂದ ದೊರೆಯುವ ವಿದ್ಯುತ್ ಶಕ್ತಿಯ ಬೇಡಿಕೆ ಮತ್ತು ಉತ್ಪಾದನೆಗಳ ನಡುವಿನ ವ್ಯತ್ಯಾಸವನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವಾಗದೆ ಇದ್ದರೂ ಇವುಗಳಿಂದ ಉತ್ಪತ್ತಿಯಾಗುವ ಗಣನೀಯ ಪ್ರಮಾಣದ ಶಕ್ತಿಗಾಗಿ ಈ ಶಕ್ತಿಮೂಲಗಳಿಗೆ ಸಂಬಂಧಿಸಿದ ಯೋಜನೆಯನ್ನು ರೂಪಿಸುವದು ಅತ್ಯಂತ ಸೂಕ್ತ.

ಅಂತಿಮವಾಗಿ, ಶಕ್ತಿ ಉತ್ಪಾದನೆಯ ಕಾರ್ಯವನ್ನು ಸ್ವತಂತ್ರವಾಗಿ ಪರಿಶೀಲಿಸಲು ಸಾಧ್ಯವಾಗದು. ಯಾವುದೇ ಶಕ್ತಿ ಉತ್ಪಾದನೆಯ ಯೋಜನೆಯನ್ನು ಪೂರ್ಣಗೊಳಿಸುವ ಮೊದಲು ಪರಿಸರದ ಮೇಲೆ ಅಂತಹ ಯೋಜನೆಯಿಂದಾಗುವ ಪರಿಣಾಮವನ್ನು ಕೂಲಂಕಷವಾಗಿ ಪರೀಕ್ಷಿಸಬೇಕು. ಆದರೆ ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ಶಕ್ತಿಮೂಲಗಳೆರಡನ್ನೂ ಸೂಕ್ತ ಪ್ರಮಾಣದಲ್ಲಿ ಬಳಸಿಕೊಂಡು ಪರಿಸರದ ಮೇಲೆ ಕನಿಷ್ಠ ಮಟ್ಟದ ಪರಿಣಾಮವನ್ನು ಉಂಟುಮಾಡುವಂತಹ ಯೋಜನೆಯನ್ನು ರೂಪಿಸುವದು ಸಾಧ್ಯವಿದೆ. ಅಭಿವೃದ್ಧಿಗೆ ಅತ್ಯಂತ ಅವಶ್ಯವಾದ ಶಕ್ತಿಯನ್ನು ಉತ್ಪಾದಿಸುವ ಯೋಜನೆಯಲ್ಲಿ ಪರಿಸರದ ಮೇಲೆ ಉಂಟಾಗುವ ದುಷ್ಪರಿಣಾಮವನ್ನು ಗಣನೆಗೆ ತೆಗೆದುಕೊಳ್ಳದಿದ್ದರೆ ಶಕ್ತಿಯ ಉತ್ಪಾದನೆಯಿಂದ ಉಂಟಾಗುವ ಅಭಿವೃದ್ಧಿಯನ್ನು ಪರಿಸರದ ನಾಶ ಸಂಪೂರ್ಣವಾಗಿ ಕಬಳಿಸಬಹುದಾಗಿದೆ.

ಜಿ. ಎನ್. ಹೆಗಡೆ ಉಳ್ಳಿಕೊಪ್ಪ
ಅಂಚೆ : ಹುಳಗೋಳ, ಶಿರಸಿ ತಾಲೂಕು (ಉ.ಕ.) - ೫೮೧ ೪೦೨



# 'ಹುಸಿ ಇಲ್ಲದ ಗೂಡಿನೊಳಗೆ' ಕವಿಗೆ ಸಂದ ಅಭಿನಂದನೆ

'ಹುಸಿ ಇಲ್ಲದ ಗೂಡಿನೊಳಗೆ' ಕೃತಿಯಲ್ಲಿ ಕವಿ ಸತ್ಯಾನಂದ ಪಾತ್ರೋಟರ ಸಮಗ್ರ ಸಾಹಿತ್ಯದ ವಿಮರ್ಶೆಯನ್ನೊಳಗೊಂಡ ಒಟ್ಟು ೧೬ ಲೇಖನಗಳಿವೆ. ಈ ವಿಮರ್ಶಾ ಲೇಖನಗಳು ಕಾವ್ಯ, ನಾಟಕ ಮತ್ತು ಗದ್ಯ ಬರಹಗಳಿಗೆ ಸಂಬಂಧಿಸಿವೆ. ಈ ಮೂರು ಸಾಹಿತ್ಯ ಪ್ರಕಾರಗಳಲ್ಲಿ ಪಾತ್ರೋಟರು ಕೃಷಿಗೈದ ಕೃತಿಗಳೆಲ್ಲವುಗಳ ಪರಿಚಯ ಈ ಕೃತಿಯಿಂದ ನಮಗಾಗುತ್ತದೆ. ಸಂಪಾದಕೀಯ ಮಾತುಗಳಲ್ಲಿ ಡಾ|| ಅರ್ಜುನ ಗೊಳಸಂಗಿಯವರು ಗುರುತಿಸಿರುವ ಇವು ೧೯೯೯ರಲ್ಲಿ (ದಲಿತ ಸಾಹಿತ್ಯ ಪರಿಷತ್ತಿನ ೨ನೆಯ ವಾರ್ಷಿಕೋತ್ಸವದಲ್ಲಿ) ಏರ್ಪಡಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಲೇಖನಗಳು ಮತ್ತು ಸಾಂದರ್ಭಿಕವಾಗಿ ಪಾತ್ರೋಟರ ಕಾವ್ಯದ ಕುರಿತು ಬರೆದ ಲೇಖನಗಳು; ಹೀಗೆ ಈ ಎರಡು ಬಗೆಯ ಬರಹಗಳನ್ನು ಇಲ್ಲಿ ಸಂಪಾದಕರು ಸಂಕಲಿಸಿ, ಸಂಪಾದಿಸಿ ಪ್ರಕಟಿಸಿದ ಕೃತಿಯಿದಾಗಿದೆ.

ಸತ್ಯಾನಂದ ಪಾತ್ರೋಟರದು ಪ್ರಸ್ತುತ ಸಂದರ್ಭದ ದಲಿತ ಬಂಡಾಯ ಕವಿಗಳಲ್ಲಿ ಎದ್ದುಕಾಣುವ ಹೆಸರು. ಇವರ ಕಾವ್ಯದಲ್ಲಿ ಅಸಮಾನತೆ, ಶೋಷಣೆಯ ವಿರುದ್ಧದ ಧ್ವನಿ, ಶ್ರಮಿಕ ಬದುಕಿನ ದಟ್ಟ ಚಿತ್ರಣ, ವ್ಯವಸ್ಥೆಯ ವಿರುದ್ಧದ ಸಂಘರ್ಷ ಕಾಣುತ್ತೇವೆ. ಅಷ್ಟೇ ಅಲ್ಲದೆ, ಇತ್ತೀಚೆಗೆ ಇವರ ಕಾವ್ಯದಲ್ಲಿ ಮಾನವೀಯ ಸಂಬಂಧ, ನಿಸರ್ಗ, ಪ್ರೀತಿ, ಸ್ನೇಹಗಳಂತಹ ಮೌಲ್ಯಗಳು ಆಡಂಬರ, ಒಣಶೃಂಗಾರ, ಬೆರಗು, ಆಶ್ಚರ್ಯಗಳಿರದೆ ವಾಸ್ತವತೆಯ ನೆಲೆಗಟ್ಟಿನಲ್ಲಿ ಮೈದಾಳಿವೆ ಎಂಬುದಕ್ಕೆ ಅವರ ಕಾವ್ಯವೇ ನಿದರ್ಶನ. ಈ ಎಲ್ಲ ವಿಷಯಗಳು ಪ್ರಸ್ತುತ ಕೃತಿಯಲ್ಲಿ ಚರ್ಚೆಗೊಳಪಟ್ಟಿವೆ.

'ಸತ್ಯಾನಂದ ಪಾತ್ರೋಟರ ಕಾವ್ಯದಲ್ಲಿ ಪ್ರೀತಿ ಮತ್ತು ನಿಸರ್ಗ' ಎಂಬ ಹೇಮಾ ಪಟ್ಟಣಶೆಟ್ಟಿಯವರ ಲೇಖನದಲ್ಲಿ ಪಾತ್ರೋಟರ ಕಾವ್ಯದಲ್ಲಿ ಚಿತ್ರಿತವಾದ ಪ್ರೀತಿ ಮತ್ತು ನಿಸರ್ಗವನ್ನು ಗುರುತಿಸ

ಸಂಪಾದಕ

**ಡಾ|| ಅರ್ಜುನ ಗೊಳಸಂಗಿ**

ಪ್ರಕಾಶನ

**ದಲಿತ ಸಾಹಿತ್ಯ ಪರಿಷತ್ತು**

**ರಾಜ್ಯ ಘಟಕ, ಗದಗ**

**ಪುಟಗಳು : X + ೧೦೨ ಬೆಲೆ : ರೂ. ೧೦೦**

ಲಾಗಿದೆ. ಹೆಣ್ಣನ್ನು ಕವಿ ಹೇಗೆ ಗ್ರಹಿಸಿದ್ದಾನೆಂಬುದನ್ನು ವಿವರಿಸಲಾಗಿದೆ. ಶೃಂಗಾರ ರಹಿತ ಹೆಣ್ಣಿನ ವರ್ಣನೆಯಲ್ಲಿ ಕಾಮವಾಸನೆಯಿಲ್ಲದೆ, ಪ್ರೇಮವು ಪ್ರಣಯವಾಗದೆ, ಶುದ್ಧ ಪ್ರೀತಿಯಾಗಿ ಮೂಡಿದೆ; ''ಹೆಣ್ಣಿನ ಅಂಗಾಂಗಗಳ ವಿವರಣೆ ವರ್ಣನೆಗಳಲ್ಲಿ ಅವಳನ್ನು 'ವಸ್ತು'ವಾಗಿಸುವ ಅಪಾಯ ಇಲ್ಲ. ಗಂಡು ಹೆಣ್ಣಿನ ನಡುವಿನ ಆಪ್ತ ಸಂಬಂಧ ಇಲ್ಲಿ ವ್ಯಕ್ತವಾಗಿದೆ'' ಎಂಬ ಮಾತು ಸತ್ಯಾನಂದರ ಪ್ರೇಮ ಕವನಗಳಿಗೆ ಭಾಷ್ಯ ಬರೆದಂತಿದೆ.

ನಿಸರ್ಗದ ವರ್ಣನೆಯಲ್ಲಿ ನೇರ ಸಂಬಂಧಿಯಾದ ಚಿತ್ರಣಗಳು ಅಸಾಮಾನ್ಯವಾಗಿರುವುದನ್ನು ಗುರುತಿಸಲಾಗಿದೆ. ನಿಸರ್ಗದ ಪ್ರತಿಯೊಂದು ಭಾಗದಲ್ಲಿ ಮನುಷ್ಯಸಂಬಂಧವನ್ನು ಕಲ್ಪಿಸಿ ಪ್ರತೀಕಗೊಳಿಸಿರುವುದನ್ನು ಎತ್ತಿ ತೋರಿಸಲಾಗಿದೆ.

ಚಿಗುರು ಹೂ ಕಾಯಿ  
ಹೊತ್ತ ಮರಕ್ಕೆಲ್ಲ  
ಬೇರು ಆದವ ನಾನು  
ನನ್ನ ಬಳಿ ಬಂದೊಮ್ಮೆ  
ಹಾಡು ಕೋಗಿಲೆ.

ಈ ಮೇಲಿನ ಚರಣಗಳಲ್ಲಿ ಬರುವ ಮರದ 'ಬೇರು' ಭಾರವನ್ನು ಹೊತ್ತಿರುವ ಮನುಷ್ಯ ಶ್ರಮದ ಸಂಕೇತವೆಂದು ಈ ಕವನವನ್ನು ಅರ್ಥೈಸಬಹುದಾಗಿತ್ತು. ಆ ಕೊರತೆ ಕೆಲವೊಂದು ಕಡೆ ಕಾಣುತ್ತದೆ. ಪ್ರೀತಿಯ ವಸ್ತು ನಿರ್ವಹಿಸಿದ್ದು, ಸಂಘರ್ಷಕ್ಕಾಗಿ ನಿಸರ್ಗದ ವಸ್ತುವನ್ನು ನಿರ್ವಹಿಸುವ ಬಗೆಯನ್ನು ಈ ಸಾಲುಗಳಲ್ಲಿ ಗುರುತಿಸಲಾಗಿದೆ. ಒಟ್ಟಿನಲ್ಲಿ, ಸತ್ಯಾನಂದರ ಕಾವ್ಯದಲ್ಲಿ ಪ್ರೀತಿ-ನಿಸರ್ಗ ವಸ್ತುವಿನ ಸೊಗಸಾದ ಕವನಗಳ ಸೂಕ್ತ ವಿಶ್ಲೇಷಣೆ ಇದೆ.

'ಸತ್ಯಾನಂದ ಪಾತ್ರೋಟರ ಕಾವ್ಯದಲ್ಲಿ ಮನುಷ್ಯನ ಹುಡುಕಾಟ' ಎಂಬ ಡಾ|| ವಿ. ಎಸ್. ಮಾಳಿ ಅವರ ಲೇಖನದಲ್ಲಿ ಸಾಮಾನ್ಯ ಮನುಷ್ಯನ ನೋವು, ನಲಿವು, ಸಂಕಷ್ಟಗಳನ್ನು ಹಾಗೂ ಚರಿತ್ರೆಯಲ್ಲಿ ಅವನ ಒತ್ತಾಸೆಗಳೇನು, ಎಂಬ ಅಂಶಗಳು ಪಾತ್ರೋಟರ ಕಾವ್ಯದಲ್ಲಿ ಹೇಗೆ ಅಭಿವ್ಯಕ್ತಗೊಂಡಿವೆ ಎಂಬುದರ ಸಮೀಕ್ಷೆಯಿದೆ. ಮನುಷ್ಯನ ಶ್ರಮದ ವಿಶಿಷ್ಟ ಅಭಿವ್ಯಕ್ತಿ ಇಲ್ಲಿದೆ. ''ಅಪ್ಪನ ರೂಪದಲ್ಲಿ ಇತಿಹಾಸ ಕಬಳಿಸಿದ ಮನುಷ್ಯನ ಸಾಮಾಜಿಕ ನ್ಯಾಯದ ಹುಡುಕಾಟವೇ ಪಾತ್ರೋಟರ ಕಾವ್ಯದ ಆಶಯ ಕೇಂದ್ರ'' ಎಂದಿರುವುದು ಸೂಕ್ತ ನಿರ್ಣಯವಾಗಿದೆ. ಅಲ್ಲದೆ ಮನುಷ್ಯನ ನಿಗೂಢ ಮನಸ್ಸಿನ ಎರಡು ಮಗ್ಗುಲಗಳನ್ನು ಗೋರಿಗಳ ಮೇಲೆ ಮಹಲು ಕಟ್ಟಿ ನಗುತ್ತಿರುವ ಅಂತಃಪ್ರಜ್ಞೆ, ತುಳಿತಕ್ಕೆ ಮೆತ್ತಗಾಗಿ ನರಳುತ್ತಿರುವ ಸಾಕ್ಷೀ ಪ್ರಜ್ಞೆ ಎಂದು ಪಾತ್ರೋಟರು ಹುಡುಕುತ್ತಾರೆ. ಇವೆರಡೂ ಮನುಷ್ಯನ ನಿಗೂಢ ಮನಸ್ಸಿನ ಮಗ್ಗುಲುಗಳಾಗಿವೆ ಎಂಬ ಅಂಶವನ್ನು ಶೋಧಿಸಲಾಗಿದೆ. ''ಅವರು ಹೊರಗಿನ ಬಂಡಾಯಕ್ಕಿಂತ ಅಂತಃಕರಣದೊಳಗಿನ ಬಂಡಾಯಕ್ಕೆ ಒತ್ತು ನೀಡುವವರು'' ಹೀಗಾಗಿ ಅವರ ಕಾವ್ಯದಲ್ಲಿ ಅಂತರ್ಮುಖಿಯಾದ ಮಾನವೀಯ ಕಳಕಳಿಯನ್ನು ಗುರುತಿಸಲಾಗಿದೆ. ಈ ಬರಹ ಹೆಚ್ಚಾಗಿ ಸಂಶೋಧನಾತ್ಮಕ ಗುಣ ಪಡೆದಿದೆ.

ಡಾ|| ಮಹಾದೇವಿ ಕಣವಿಯವರ 'ಸತ್ಯಾನಂದ ಪಾತ್ರೋಟರ ಕವಿತೆಗಳಲ್ಲಿ ಪ್ರತಿಭಟನೆ' ಎಂಬ ಲೇಖನದಲ್ಲಿ ''ಕವಿ ಸತ್ಯಾನಂದ ಪಾತ್ರೋಟರ ಕಾವ್ಯ ಥಟ್ಟನೆ ಉರಿದು ತಣ್ಣಗಾಗುವ ಕಾವ್ಯವಲ್ಲ. ಅವರ ಕಾವ್ಯಕ್ಕೆ ಕಲ್ಲಿದ್ದಲಿನ ಗುಣವಿದೆ. ಅದು ಸಾವಕಾಶ ಹೊತ್ತಿಕೊಂಡು ದೀರ್ಘಕಾಲದವರೆಗೆ ಉರಿಯುತ್ತದೆ ಎಂಬ ಮಾತು ಸತ್ಯಾನಂದರ ಪ್ರತಿಭಟನಾತ್ಮಕ ಕವನಗಳ ಅಂತರಂಗಕ್ಕೆ ಕನ್ನಡಿ ಹಿಡಿದಂತಿದೆ. ವ್ಯವಸ್ಥೆಯ ವಿರುದ್ಧ ಮೂಡಿಬಂದ ಪ್ರತಿಭಟನಾ ಧ್ವನಿಯನ್ನು ಈ ಲೇಖನದಲ್ಲಿ ಸವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ. 'ಪ್ರಕೃತಿ ಶೋಧ ಮತ್ತು ಅರ್ಥ ವಿನ್ಯಾಸ' ಎಂಬ ಡಾ|| ಗುರುಪಾದ ಮರಿಗುದ್ದಿಯವರ ಲೇಖನದಲ್ಲಿ ಪಾತ್ರೋಟರ ಕಾವ್ಯದ ಎರಡು ಬಗೆಯ ಪ್ರಕೃತಿ - ವಿನ್ಯಾಸಗಳನ್ನು ಗುರುತಿಸಲಾಗಿದೆ. ಒಂದು, ಪ್ರಕೃತಿಯ ರೂಪವರ್ಣನೆ. ಎರಡನೆಯದು, ಕಾವ್ಯದಲ್ಲಿ ಅದನ್ನು ಉಪಮೆ, ಸಂಕೇತಗಳನ್ನಾಗಿ ಮಾಡುವ ಕ್ರಮ. ಇವುಗಳ ಅರ್ಥಭಿನ್ನತೆಗಳನ್ನು ಕೂಡ ಇಲ್ಲಿ ಗುರುತಿಸಲಾಗಿದೆ.

ಕ್ಯಾತಮಾರನಹಳ್ಳಿ ಉಮೇಶರ 'ಸತ್ಯಾನಂದ ಪಾತ್ರೋಟರ ಕಾವ್ಯ : ನನ್ನ ದೃಷ್ಟಿಯಲ್ಲಿ' ಲೇಖನವು ತುಂಬ ವಿಸ್ತಾರ ಹಾಗೂ ಕವಿಕಾವ್ಯದ ಬಹುಮುಖ ಪ್ರತಿಭೆಯನ್ನು ಚರ್ಚಿಸಿದೆ. ನಾಟಕ ಸಾಹಿತ್ಯವನ್ನು ಡಾ|| ಕೆ. ಆರ್. ದುರ್ಗಾದಾಸರು ಸಂಕ್ಷಿಪ್ತವಾಗಿ ಸಮೀಕ್ಷೆ ಮಾಡಿದ್ದಾರೆ. ನಾಟಕಗಳ ವಸ್ತು-ವಿನ್ಯಾಸ, ಪಾತ್ರ, ಸಂಭಾಷಣೆ ಕ್ರಮಗಳ ಸೋಲು-ಗೆಲವುಗಳನ್ನು ಗುರುತಿಸಿದ್ದಾರೆ. ನಾಟಕಗಳನ್ನು ಇನ್ನೂ ವಿವರವಾಗಿ ಚರ್ಚಿಸಬಹುದಾಗಿತ್ತು. ಇನ್ನೂ ಒಂದೆರಡು ವಿಮರ್ಶಾ ಲೇಖನಗಳು ಅಗತ್ಯವಿತ್ತು ಎನ್ನಿಸುತ್ತದೆ.

'ಒಂದಿಷ್ಟು ಕ್ಷಣಗಳು' ಎಂಬ ಗದ್ಯಬರಹದ ಕುರಿತು ಡಾ|| ಟಿ. ಎಂ. ಭಾಸ್ಕರ್ ಅವರು ಸಂಕ್ಷಿಪ್ತವಾಗಿ ವಿಶ್ಲೇಷಿಸಿದ್ದಾರೆ. ಇಲ್ಲಿಯ ವಿಶ್ಲೇಷಣೆಯಲ್ಲಿ ಲೇಖನಗಳ ವಸ್ತುವಿಗಿಂತ ಸೈದ್ಧಾಂತಿಕ ಮತ್ತು ವ್ಯಕ್ತಿ ವಿಚಾರಗಳೇ ಮುಂದೆ ಬಂದು ನಿಂತಂತೆ ಕಾಣುತ್ತದೆ. ಗದ್ಯ ಲೇಖನಗಳ ತಲಸ್ಪರ್ಶಿ ಚರ್ಚೆ ಇನ್ನೂ ಆಗಬೇಕಾಗಿತ್ತು ಅನಿಸುತ್ತದೆ. 'ಬಾಪುವನ್ನು ಕುರಿತ ಒಂದು ಕವನ' (ಎಲ್. ಎಸ್. ಎಸ್.), ಜಾಜಿಮಲ್ಲಿಗೆಯ ಕವಿ : ಸತ್ಯಾನಂದ ಪಾತ್ರೋಟ (ಡಾ|| ಗೊಳಸಂಗಿ), ಜಾಜಿಮಲ್ಲಿಗೆಯ ಕವಿತೆಗಳು (ಡಾ|| ಸರ್ಜೂ ಕಾಟ್ಕರ್), ನನ್ನ ಕನಸಿನ ಹುಡುಗಿ : ಜೀವನ ಪ್ರೀತಿ ; ಸ್ವವಿಮರ್ಶೆಯ ಸೆಳೆತ (ರಂಜಾನ್ ದರ್ಗಾ), ಕಲ್ಲಿಗೂ ಗೊತ್ತಿರುವ ಕತೆ (ಡಾ|| ಆರ್. ವಿ. ಭಂಡಾರಿ), ನನ್ನ ಕನಸಿನ ಹುಡುಗಿ (ಡಾ|| ಐ. ಜೆ.

**ಡಾ|| ಲಿಂಗಣ್ಣ ಗೋನಾಲ**

ಮ್ಯಾಗೇರಿ) ಈ ಎಲ್ಲ ಲೇಖನಗಳು ಅತ್ಯಂತ ಚಿಕ್ಕ ಸ್ವರೂಪದವಾಗಿವೆ ; ಕವಿಯ ಮತ್ತು ಕವನಗಳ ಒಂದೊಂದು ವಿಶಿಷ್ಟ ಅಂಶವನ್ನು ಮೆಚ್ಚಿಕೊಂಡು ಬರೆದಿರುವ ಲೇಖನಗಳಾಗಿವೆ. ಇವುಗಳಲ್ಲಿ ಸತ್ಯಾನಂದರ ವೈಯಕ್ತಿಕ ಪರಿಚಯ-ಕಾವ್ಯಪರಿಚಯ ಈ ಎರಡೂ ಅಂಶಗಳಿವೆ.

'ಭಾವನೆಗಳ ಬುಗ್ಗೆ ಎದೆಯ ಮಾತು – ಧ್ವನಿ ಸುರುಳಿ' (ಸದಾಶಿವ ದೊಡಮನಿ), ಇದು ಈ ಕೃತಿಯಲ್ಲಿ ಸಂಕಲನಗೊಂಡ ವಿಶಿಷ್ಟ ಲೇಖನ. ಇದರಲ್ಲಿ ಮುಖ್ಯವಾಗಿ ಸತ್ಯಾನಂದರ ಭಾವಗೀತೆಯ ಸತ್ವ, ಅವುಗಳ ವೈಶಿಷ್ಟ್ಯ, ಕನ್ನಡ ಭಾವಗೀತೆಯಲ್ಲಿ ಈ ಕವಿಯ ಭಾವಗೀತೆಗಳ ಸ್ಥಾನವನ್ನು ಗುರುತಿಸಲಾಗಿದೆ. ಅಲ್ಲದೆ ಬೇಂದ್ರೆಯವರ ನಂತರ ಅದರಲ್ಲೂ ದಲಿತ ಸಾಹಿತ್ಯ ಘಟ್ಟದ ದಲಿತ ಕವಿಯೊಬ್ಬನ ಪ್ರಪ್ರಥಮ ಭಾವಗೀತೆಗಳೆಂಬುದಷ್ಟೇ ಅಲ್ಲ; ಧ್ವನಿ ಸುರುಳಿಯಾಗಿರುವ ಹೆಗ್ಗಳಿಕೆಯನ್ನು, ಹಿಂದಿನ ಕವಿಗಳಿಗಿಂತ ಭಿನ್ನವಾಗಿ ಪ್ರೀತಿ, ಪ್ರಣಯದಂತಹ ವಿಷಯಗಳನ್ನು ನಿರ್ವಹಿಸಿದ ಅಂಶಗಳನ್ನು ಚರ್ಚಿಸಿರುವುದು ಸಾರ್ಥಕವಾಗಿದೆ. ಹಾಗೆಯೇ ಇಲ್ಲಿ ಗಾಯಕರು ಯಾವ ಯಾವ ಹಾಡಿಗೆ ಸರಿಯಾದ ರಾಗಸಂಯೋಜನೆ ಮಾಡಿದ್ದಾರೆಂಬುದರ ಮೆಚ್ಚುಗೆ ಹಾಗೂ ಅವರ ರಾಗ ಸಂಯೋಜನೆಯ ಸೋಲು-ಗೆಲವುಗಳನ್ನು ಎತ್ತಿ ತೋರಿಸಲಾಗಿದೆ.

ಕೃತಿಯರ್ಥಿ ಕೊನೆಯಲ್ಲಿ ಗೋಷ್ಠಿಯ ಅಧ್ಯಕ್ಷೀಯ ಭಾಷಣದ ಬರಹದಲ್ಲಿ ಪ್ರೊ॥ ಎಸ್. ಎಸ್. ಹಿರೇಮಠರು, ಸತ್ಯಾನಂದರ ಕಾವ್ಯವನ್ನು ಕುರಿತು ಹೇಳುತ್ತ, ಇಲ್ಲಿ ದಲಿತ ಸಮೂಹದ ಐತಿಹಾಸಿಕ ಮಹತ್ವಕ್ಕೆ ಒತ್ತು ಕೊಟ್ಟು, ಚರಿತ್ರೆಯಲ್ಲಿ ಈ ಜನಾಂಗ ಎಂಥ ಮೇಲಸ್ತರದಲ್ಲಿತ್ತೆಂಬುದನ್ನು ಉದಾಹರಣೆ ಸಹಿತ ವಿವರಿಸಿದ್ದಾರೆ.

ಒಟ್ಟಿನಲ್ಲಿ ಸತ್ಯಾನಂದ ಪಾತ್ರೋಟರ ಕಾವ್ಯದಲ್ಲಿ ಕಂಡುಬರುವ ಪ್ರೀತಿ, ನಿಸರ್ಗ, ದಲಿತ ಬದುಕಿನ ದಟ್ಟ ಚಿತ್ರಣ, ವ್ಯವಸ್ಥೆಯ ವಿರುದ್ಧ ಧ್ವನಿ, ಅಸಮಾನತೆಯ ವಿರೋಧ, ಮಾನವೀಯ ಮೌಲ್ಯಗಳ ಹಾಗೂ ಸಾಮಾನ್ಯ ಮನುಷ್ಯನ ಶೋಧ, ಪ್ರತಿಭಟನೆ, ಜೀವನ ಪ್ರೀತಿ ಈ ಮುಂತಾದ ಅಂಶಗಳ ತಲಸ್ಪರ್ಶಿ ಚರ್ಚೆಯಾಗಿದೆ. ನಾಟಕ, ಗದ್ಯಬರಹಗಳ ವಸ್ತು-ವಿನ್ಯಾಸ, ಸೋಲು-ಗೆಲವುಗಳನ್ನು ವಿಶ್ಲೇಷಿಸುವ ಲೇಖನಗಳು ಒಳಗೊಂಡಿವೆ. ಇಲ್ಲಿನ ಲೇಖನಗಳೆಲ್ಲವೂ ಕವಿಯ ಬರಹವನ್ನು ಒಂದೊಂದು ದೃಷ್ಟಿಕೋನದಿಂದ ನೋಡಿ ಬರೆದವುಗಳಾಗಿವೆ. ಅಲ್ಲದೆ ಒಬ್ಬ ಕವಿಯ ಸಾಹಿತ್ಯ ಕುರಿತಾದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳು ಹಾಗೂ ಸಾಂದರ್ಭಿಕವಾಗಿ ಬರೆದ ವಿಮರ್ಶಾತ್ಮಕ ಲೇಖನಗಳಾಗಿರುವುದರಿಂದ ಇಲ್ಲಿ ಇತ್ಯಾತ್ಮಕವಾದ ಅಂಶಗಳು ಮಾತ್ರ ದಾಖಲಿಸಲ್ಪಟ್ಟಿವೆ. ಇಡೀ ಈ ಸಂಪಾದನೆಯ ಕೃತಿಯಲ್ಲಿ ಎಲ್ಲರೂ ಕವಿಯನ್ನು 'ಜಾಜಿಮಲ್ಲಿಗೆ'ಯ ಕವಿಯೆಂದು ಕರೆದಿದ್ದು, ಅವರ ಕಾವ್ಯ ಜಾಜಿಮಲ್ಲಿಗೆಯ ಯಶಸ್ಸನ್ನು ಸೂಚಿಸುತ್ತದೆ. ಈ ಕೃತಿಯಲ್ಲಿ ನಾಡಿನ ಅನೇಕ ವಿದ್ವಾಂಸರ ಉತ್ತಮ ಲೇಖನಗಳಿವೆ. ಕೃತಿ ಸ್ವರೂಪ ನೋಡಿದಾಗ ಇದೊಂದು ಅಭಿನಂದನ ಗ್ರಂಥವೇನೋ ಎಂಬಂತೆ ಕಾಣುತ್ತದೆ. ಕವಿಯ ಸಮಗ್ರ ಸಾಹಿತ್ಯ ಅವಲೋಕನ, ಬದುಕಿನ ವಿವರಗಳು, ಸಭೆ, ಸಮಾರಂಭಗಳಲ್ಲಿಯ ಭಾವಚಿತ್ರಗಳ ಮುದ್ರಣವನ್ನೊಳಗೊಂಡಿದೆ. ಒಟ್ಟಿನಲ್ಲಿ ದಲಿತ ಸಾಹಿತ್ಯ ಪರಿಷತ್ತು ಒಬ್ಬ ಲೇಖಕನನ್ನು ಇಷ್ಟೊಂದು ವಿಶಿಷ್ಟವಾಗಿ ಗುರುತಿಸುವ ಕೆಲಸ ಮಾಡಿದ್ದು ಶ್ಲಾಘನೀಯವಾದದ್ದು.

ಡಾ॥ ಲಿಂಗಣ್ಣ ಗೋನಾಲ
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ, ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದರಾಬಾದ್ - ೫೦೦ ೦೦೭




ನಮ್ಮ ವಿಶ್ವದ ಅವಿಭಾಜ್ಯ ಜ್ಞಾನಶಾಖೆಗಳಲ್ಲಿ ಒಂದಾದ ಅರ್ಥಶಾಸ್ತ್ರವನ್ನು ಆಡಂ ಸ್ಮಿತ್, ಆಲ್ಫ್ರೆಡ್ ಮಾರ್ಷಲ್, ರಿಕಾರ್ಡೋ, ಕೇಯ್‌ನ್ಸ್‌ರಂತಹ ಆರ್ಥಿಕ ಚಿಂತಕರ ದೃಷ್ಟಿಯಲ್ಲಿ ಪಠ್ಯಭಾಗವಾಗಿ ಓದುವುದು ಒಂದು ಕ್ರಮ. ಆದರೆ ಇವೆಲ್ಲಕ್ಕಿಂತ ಮಿಗಿಲಾದ ಬಹುದೊಡ್ಡ ಬದುಕನ್ನು ಅರ್ಥಮಾಡಿಕೊಳ್ಳುತ್ತಾ ಸಾಗುವುದು ಇನ್ನೊಂದು ಕ್ರಮ. ಈ ಬದುಕಿನ ಯಾನ ಸುದೀರ್ಘವಾದುದು. ಏಕೆಂದರೆ ಈ ಯಾದಿಯಲ್ಲಿ ಸಾಹಿತ್ಯ, ಕಲೆ, ವಿಜ್ಞಾನ ಎಲ್ಲವೂ ಸೇರಿ ಬಾಳಿಗೊಂದು ಅರ್ಥ ನೀಡುತ್ತವೆ. ಆದರೆ ಸುಸಂಬದ್ಧವೂ ಸಮರ್ಥವೂ ಆದ ರೀತಿಯಲ್ಲಿ ಬದುಕಬೇಕಾದರೆ ಬದುಕು ಎಲ್ಲಕ್ಕೂ ಬೇರೆಯೇ ಆಗಿ ವಿಶಿಷ್ಟವೂ ಆಗಿ ನೆಲೆಯೂರಬೇಕಾಗುತ್ತದೆ. ಬದುಕು ವೈಚಾರಿಕತೆಯ ಒಣರಾಶಿಯಲ್ಲ, ಕ್ಲೀಶೆ ಎನಿಸುವಷ್ಟು ಪದಸಾಮ್ರಾಜ್ಯಗಳ ಗುಡ್ಡೆಯಲ್ಲ, ನಮಗೆ ಅರಿವಿರದಂತೆ ನಮ್ಮೊಟ್ಟಿಗೆ ಬಂದು ಸಾಂಗತ್ಯ ಬೆಳೆಸಿ ಕೊನೆಗೊಂದು ದಿನ ಅರ್ಥಪೂರ್ಣ ಮುಕ್ತಾಯದ ಬೆಸುಗೆ ಹಾಕಿಕೊಳ್ಳುವಷ್ಟು ಮಹತ್ವಪೂರ್ಣ ಬದುಕು. ಬದುಕಿನ ಪರಿಧಿ ವ್ಯಕ್ತಿಗೆ ಸೀಮಿತ. ಆದರೆ ವಿಶಾಲವಾಗಿ ಅನಂತ.

ಜಾತಿ ಬಂಧನಗಳನ್ನು ತೊರೆದು ಬಾಳುವ, ಆದರೆ ನಿಜವಾದ ಅರ್ಥದಲ್ಲಿ ಅದನ್ನು ಜೀವಿಸುವ ಧಾರ್ಷ್ಟ್ಯ ಇದ್ದವನೇ ನಿಜವಾದ ಧೀರ. ಆದರೆ ಇದು ಕಷ್ಟ ಸಾಧ್ಯ. ಭಾವಲೋಕದ ಸ್ವಪ್ನಗಳಲ್ಲಿ ಮುಳುಗಿ ತೇಲುವ ಭ್ರಮಾಜಗದ ಪೊರೆ ಕಳಚಿ ಬರುವುದು ಅನಿವಾರ್ಯ. ದೇಶಾದ್ಯಂತ ಕಾಣುವ, ಕಾಡುವ ಸಮಸ್ಯೆಗಳಿಗೆಲ್ಲ ನಮ್ಮೊಳಗಿನ ಬ್ರಹ್ಮಾಂಡ, ವಿಮೋಚನೆಯ ಹಾದಿ ತೋರಿಸುತ್ತದೆ ಎಂಬುದು ಮೂರ್ಖತನದ ಪರಮಾವಧಿ. ಮನುಷ್ಯ ಪ್ರಖರ ವಿಚಾರಶಕ್ತಿಗೆ ಸಂಕೇತವಾಗಿದ್ದಾನೆ. ಜಗತ್ತಿನ ಆಧುನಿಕತೆಗೆ, ಮುಪ್ಪುರಿಗೊಂಡ ಅನುಭವ ಸಾಮ್ರಾಜ್ಯಕ್ಕೆ ವ್ಯಕ್ತಿಯ ಕೊಡುಗೆ ಯಾವ ಸ್ವರೂಪದ್ದು ಎನ್ನುವುದರ ಜೊತೆಗೆ ಸಂಘಟನಾ ಶಕ್ತಿ ಮತ್ತು ಕ್ರಿಯಾಶೀಲ ವ್ಯಕ್ತಿತ್ವವೂ ಅಷ್ಟೇ ಪ್ರಮುಖವಾಗುತ್ತದೆ. ಮಾತಿನ ಆರ್ಭಟಗಳಲ್ಲಿ ಮಾತಿನ ನಿಜವಾದ ಶಕ್ತಿಯೂ ಅಡಗಿಹೋಗುವುದು ಇವತ್ತಿನ ದೊಡ್ಡ ದುರಂತಗಳಲ್ಲಿ ಒಂದು. ಜಾಗತೀಕರಣದ ರಭಸ, ಆಗಾಗಿನ ಅಬ್ಬರ-ಉಬ್ಬರಗಳೆನ್ನುತ್ತಾ ನಮ್ಮ ದೈನಂದಿನ ಬದುಕಿನ ಸಹಜ ಸಂತೋಷಗಳನ್ನೂ ದೂರು ಹೇಳುವುದರಲ್ಲಿಯೇ ಕಳೆದುಬಿಡುವ ನಾವು ನಮ್ಮ ಶಕ್ತಿಯ ಯಮ ಅಂತ್ಯಕ್ಕೆ ನಾವೇ ಕಾರಣರಾಗುತ್ತೇವೆ.

ಪೊಳ್ಳು ಘೋಷಣೆ, ವೃಥಾ ಹಾರಾಟ ಹಾಗೂ ಕೆಲವು ಅರ್ಥಹೀನ ಹೋರಾಟಗಳು ಇಡೀ ವ್ಯವಸ್ಥೆಯನ್ನೇ ನಗೆಪಾಟಲಿಗೆ ಗುರಿ ಮಾಡುವುದಷ್ಟೇ ಅಲ್ಲ, ಷಡ್ಯಂತ್ರದ ಬಲೆ ಹೆಣೆದು ಒಟ್ಟು ವ್ಯವಸ್ಥೆಯ ಆಂತರಿಕ ಹಾಗೂ ಬಾಹ್ಯ ಸ್ವಾಸ್ಥ್ಯ, ಸ್ವರೂಪವನ್ನೇ ಬುಡಮೇಲು ಮಾಡಿಬಿಡುವ ಸಾಧ್ಯತೆಗಳು ನಿಚ್ಚಳವಾಗಿರುತ್ತವೆ. ಬದುಕು ಹತ್ತು ಹಲವು ಆಕಸ್ಮಿಕಗಳ ಮೊತ್ತ. ಆದರೆ ತಕ್ಷಣವೇ ನಾವು ಬದುಕು ದಿಢೀರ್ ಭವಿಷ್ಯಗಳ ಆಕಾಶಬುಟ್ಟಿಯಾಗುವುದಿಲ್ಲವೆಂಬ ಸತ್ಯವನ್ನೂ ಅರಿಯಬೇಕು. ಜಗತ್ತಿನಲ್ಲಿ ಬದುಕು ಮತ್ತು ಅದರ ನೆಲೆಗಳು ಸೈದ್ಧಾಂತಿಕ ಹಾಗೂ ಇತರ ಅಂಶಗಳಿಗಿಂತಲೂ ಬಹಳ ಸೂಕ್ಷ್ಮವಾದುದು. ಕೆಲವು ಸಲ ಅಚ್ಚರಿಗಳ ಬೆಳವಣಿಗೆಗಳನ್ನು ತಂದೊಡ್ಡುವ ಬದುಕು ಕಠಿಣ ಸವಾಲುಗಳಿಗೆ ನಮ್ಮನ್ನು ಅನಿವಾರ್ಯವಾಗಿ ಭಾಗಸ್ಥರನ್ನಾಗಿ ಮಾಡುತ್ತದೆ. ಆದರೆ ಅದರ ಹಿಂದಿನ ಉದ್ದೇಶ ಆ ಕಟುಸವಾಲುಗಳನ್ನು ಧೈರ್ಯ-ಸ್ಥೈರ್ಯಗಳಿಂದ ಎದುರಿಸುವುದೇ ಆಗಿದೆ. ಆದರೆ ಈ ಜೀವನ ಪ್ರವಾಹದಲ್ಲಿ ಹಲವಾರು ಸುಳಿಗಳು ಸುಳಿದು ತನ್ನ ತೆಕ್ಕೆಗೆ ಜೀವಗಳನ್ನೆಳೆದುಕೊಂಡುಬಿಡುತ್ತದೆ. ಆದರೆ ಇದನ್ನೆದುರಿಸದೆ ಹೆಂಬೇಡಿಗಳಾಗಿ ವಿಲವಿಲ ಒದ್ದಾಡುವ ಮಂದಿ ಮಾತ್ರ ದುರ್ಬಲರಾಗಿ ದುರ್ಭರ ಕ್ಷಣಗಳಿಗೆ ದಾಸರಾಗಿ ಸಾವನ್ನಪ್ಪುತ್ತಾರೆ. ಆದರೆ ಈ ದಾರಿಯಲ್ಲಿ ಇರಬೇಕಾದ ಧೈರ್ಯ ಶೂನ್ಯವಾಗಿಯೇ ಉಳಿಯುತ್ತದೆ.

ಬಾಳು ಹೇಗೆ ಬರುತ್ತದೋ ಹಾಗೆಯೇ ಬದುಕಬೇಕೆನ್ನುವುದು ಒಂದು ವಾದವಾದರೆ, ಮುಂದಿನ ಪಾಪ-ಪುಣ್ಯಗಳ ಲೆಕ್ಕಾಚಾರ ಹಾಗೂ ದೂರದೃಷ್ಟಿಯ ಹಿನ್ನೆಲೆಯಿಂದ ಬದುಕ ಬಯಸುವವರು ಬಹಳಷ್ಟು ಮಂದಿ. ಆದರೆ ಈ ಎಲ್ಲ ಸಿದ್ಧಾಂತ ಹಾಗೂ ಅದರ ರೀತಿ-ನೀತಿಗಳ ರಿವಾಜುಗಳಿಂದ ಸಂಪೂರ್ಣ ಬಂಧಮುಕ್ತವೆನ್ನಿಸುವ ಬದುಕು ಆತ್ಮಸ್ಥೈರ್ಯವನ್ನು ಕಲಿಸಿಕೊಡುವಂತಾಗಬೇಕು. ಹಾಗಾದಾಗಲೇ ಬದುಕಿನ ಬಂಡಿ ಚಿರಂತನ ಮತ್ತು ಅತ್ಯಾಕರ್ಷಕ. ಎಲ್ಲ ವ್ಯಾಪಾರ ವಹಿವಾಟುಗಳಿಗಿಂತಲೂ ಅತಿ ವಿಶಿಷ್ಟವಾಗಿ ಸಾಗುವುದರಿಂದಲೇ ಬದುಕಿನ ಅರ್ಥಶಾಸ್ತ್ರ ಬೆಲೆಯುಳ್ಳದ್ದು. ಅದು ಎಣಿಸಲಾಗದ, ಗುಣಿಸಿ ಗುಣಿಸಿದರೂ ಮುಗಿಯದ ಅವಿಚ್ಛಿನ್ನ ಸಂಪತ್ತು. ಇದೇ ಅದರ ಕೊನೆ ಮೊದಲು ಎಂಬ ಅಂತಿಮ ಗೆರೆಯಿರದೆ ಸಾಗುವ ವಿಶಾಲವಾದ ಹೆಜ್ಜೆಗುರುತುಗಳ ಅನುಭವ ಜಗತ್ತು.

ಡಿ. ಎಸ್. ಶ್ರೀನಿವಾಸ್ ಪ್ರಸಾದ್
ಕನ್ನಡ ಉಪನ್ಯಾಸಕರು, ಶ್ರೀ ಭಗವಾನ್ ಮಹಾವೀರ ಜೈನ್

# ಮೀಸಲಾತಿ ಮತ್ತು ಮಾಧ್ಯಮಗಳು

***ಇಂದೂ ಕೂಡ ಮಾಧ್ಯಮಗಳ ಮಾಲಿಕರು ಮತ್ತು ಅಲ್ಲಿನ ಪ್ರಮುಖ ಹುದ್ದೆಗಳನ್ನು ಅಲಂಕರಿಸಿರುವವರು ಬಹುತೇಕ ಮೇಲ್ಜಾತಿ ಮತ್ತು ಮೇಲ್ವರ್ಗದವರೇ ಆಗಿದ್ದಾರೆ. ಇಂತಹ ಸಂದರ್ಭದಲ್ಲಿ ಎಲ್ಲ ಸಮುದಾಯಗಳ ಮತ್ತು ವರ್ಗಗಳ ಹಿತವನ್ನು ಮಾಧ್ಯಮಗಳು ಕಾಪಾಡಬಹುದೆಂದು ನಿರೀಕ್ಷಿಸಲಾಗದು. ಎಲ್ಲ ವರ್ಗದ ಜನರ ಆಶೋತ್ತರಗಳನ್ನು ಪ್ರತಿನಿಧಿಸುವಂತಹ ಮಾಧ್ಯಮಗಳು ಬೆಳೆಯಬೇಕಾದರೆ ಅವು ವಾಣಿಜ್ಯ ಮತ್ತು ಪಟ್ಟಭದ್ರ ಸಾಮಾಜಿಕ ಶಕ್ತಿಗಳಿಂದ ಮುಕ್ತವಾಗಿರಬೇಕು. ಕೆಲವೇ ಪ್ರತಿಷ್ಠಿತ ಗುಂಪುಗಳ ಹಿತಾಸಕ್ತಿಯನ್ನು ದೇಶದ ಹಿತಾಸಕ್ತಿಯೆಂದೂ ಸಾಮಾಜಿಕ ನ್ಯಾಯವನ್ನು ಪ್ರಗತಿ ವಿರೋಧಿಯೆಂದೂ ಪರಿಗಣಿಸುವ ಮಾಧ್ಯಮಗಳು ಗಣತಂತ್ರ ವ್ಯವಸ್ಥೆಗೆ ಅಪಾಯಕಾರಿ.***

**ಡಿ. ಎಸ್. ಪೂರ್ಣಾನಂದ**

ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿಯನ್ನು ವಿರೋಧಿಸುವ ವಿದ್ಯಾರ್ಥಿ ಗುಂಪುಗಳು ಮತ್ತು ಅವರ ಪ್ರೇರಕರು ಮಾಧ್ಯಮಗಳಲ್ಲಿ ಮತ್ತೆ ಮತ್ತೆ ಸಮಾನತೆಗಾಗಿ ಹೋರಾಡುವ ಯೋಧರಂತೆ ಚಿತ್ರಿತವಾಗುತ್ತಿದ್ದಾರೆ. ಕೆಲವು ತಿಂಗಳ ಹಿಂದೆ ಆರಂಭವಾಗಿ ತಣ್ಣಗಾಗಿದ್ದ ಚಳುವಳಿ ಕೇಂದ್ರ ಸಚಿವ ಸಂಪುಟ ಇತರ ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡುವ ತೀರ್ಮಾನ ಕೈಗೊಂಡೊಡನೆ ಪುನಃ ಆರಂಭವಾಗಿದೆ. ಚಳುವಳಿ ತಣ್ಣಗಾಗಿದ್ದಾಗಲೂ ಮಾಧ್ಯಮಗಳ ಮೀಸಲಾತಿ ವಿರೋಧಿ ನಿಲುವು ಅಭಿವೃದ್ಧಿ, ಕೈಗಾರಿಕೆ, ವಾಣಿಜ್ಯ, ಮಾಹಿತಿ ತಂತ್ರಜ್ಞಾನ, ಶಿಕ್ಷಣ, ಹೊರಗುತ್ತಿಗೆ ಮುಂತಾದ ಹಲವು ವಿಷಯಗಳಿಗೆ ಸಂಬಂಧಿಸಿದ ಲೇಖನಗಳು ಮತ್ತು ಕಾರ್ಯಕ್ರಮಗಳಿಗೆ ವ್ಯಾಪಿಸಿಕೊಳ್ಳುತ್ತವೆ. ಮಾಹಿತಿತಂತ್ರಜ್ಞಾನಕ್ಕೆ ಸಂಬಂಧಿಸಿದ ವರದಿಗಳಲ್ಲಂತೂ ಮೀಸಲಾತಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಭಾರತದ ಸ್ಪರ್ಧಾಶಕ್ತಿಯನ್ನು ನಾಶಪಡಿಸುತ್ತದೆ ಎಂದು ಅಪ್ರಸ್ತುತವಾಗಿ ಒತ್ತಿ ಹೇಳುವುದು ಸಾಮಾನ್ಯವಾಗಿಬಿಟ್ಟಿದೆ. ಯಾರೇ ಐಟಿ ಉದ್ಯಮಿಯನ್ನು ಸಂದರ್ಶನ ಮಾಡಿದಾಗಲೂ ಅವರನ್ನು ಕಡ್ಡಾಯವಾಗಿ ಕೇಳುವ ಪ್ರಶ್ನೆ, 'ಮೀಸಲಾತಿಯಿಂದ ನಿಮ್ಮ ಸೇವೆಯ ಗುಣಮಟ್ಟ ಕುಗ್ಗುವುದಿಲ್ಲವೇ ?' ಓದುಗರು ಮತ್ತು ಪ್ರೇಕ್ಷಕರ ಅಭಿಪ್ರಾಯದ ಮೇಲೆ ದೀರ್ಘಕಾಲಿಕ ಪ್ರಭಾವ ಬೀರುವುದು ಮತ್ತು ಮೀಸಲಾತಿ ದೇಶದ ಬಹುದೊಡ್ಡ ಪಿಡುಗು ಎಂಬ ಗ್ರಹಿಕೆಯನ್ನು ಬೆಳೆಸುವುದು ಈ ತಂತ್ರದ ಉದ್ದೇಶ.

ಕೆಲವೇ ವಿದ್ಯಾರ್ಥಿಗುಂಪುಗಳು ಕೆಲವು ನಗರಗಳಲ್ಲಿ ನಡೆಸಿದ ಪ್ರತಿಭಟನೆಯನ್ನು ದೇಶದಾದ್ಯಂತ ನಡೆಯುತ್ತಿರುವ ಬೃಹತ್ ಆಂದೋಲನ ಎಂಬಂತೆ ಮಾಧ್ಯಮಗಳು ಚಿತ್ರಿಸಿದವು. ಮೀಸಲಾತಿಯಿಂದ ಪ್ರತಿಭೆಗೆ ಅನ್ಯಾಯವಾಗಿದೆ, ಅನರ್ಹರು ಶಿಕ್ಷಣ ಮತ್ತು ಉದ್ಯೋಗ ಪಡೆಯುತ್ತಿದ್ದಾರೆ, ದೇಶದ ಅಭಿವೃದ್ಧಿ ಕುಂಠಿತವಾಗುತ್ತಿದೆ, ಸೇವೆಗಳಲ್ಲಿ ಮತ್ತು ಆಡಳಿತದಲ್ಲಿ ಅಸಮರ್ಪಕತೆ ಹೆಚ್ಚಾಗುತ್ತಿದೆ, ಜಾತಿ ಆಧಾರದ ಮೇಲೆ ದೇಶ ಒಡೆದು ಹೋಗುತ್ತಿದೆ ಎಂದು ಪದೇ ಪದೇ ಬಿತ್ತರಿಸಲಾಯಿತು. ಮೀಸಲಾತಿ ವಿರೋಧಿಗಳ ವಕಾಲತ್ತು ವಹಿಸಿದಂತೆ ಮಾಧ್ಯಮಗಳು, ಅದರಲ್ಲೂ ಟಿವಿ ವಾಹಿನಿಗಳು, ವರ್ತಿಸಿದವು. ತಮಿಳು ನಾಡಿನ ಕೆಲವು ರಾಜಕೀಯ ಪಕ್ಷಗಳು ಇತ್ತೀಚೆಗೆ ಈ ಸಂಬಂಧ ಮಾಧ್ಯಮಗಳ ಪಕ್ಷಪಾತ ವರದಿಗಾರಿಕೆಯನ್ನು ವಿರೋಧಿಸಿ ಚೆನ್ನೈನಲ್ಲಿ ಪ್ರತಿಭಟನಾ ಪ್ರದರ್ಶನಗಳನ್ನು ನಡೆಸಿವೆ.

ಭಾರತದ ಸಾಮಾಜಿಕ ಇತಿಹಾಸ, ಜಾತಿವ್ಯವಸ್ಥೆಯಿಂದಾಗಿರುವ ಶತಮಾನಗಳ ಶೋಷಣೆ, ಅಸಮಾನತೆ ಮತ್ತು ಮಾನವ ಹಕ್ಕುಗಳ ನಿರಾಕರಣೆಯ ಬಗ್ಗೆ ತಿಳಿಯದಿರುವ ಮುಗ್ಧ ಯುವಕರಲ್ಲಿ ತಪ್ಪು ಕಲ್ಪನೆಯನ್ನು ಮಾಧ್ಯಮಗಳ ಇಂತಹ ಪ್ರಚಾರ ಮೂಡಿಸುತ್ತದೆ. ಭಾರತದ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ವಿಷಯಗಳ ಕುರಿತಂತೆ ಯುವಕರಲ್ಲಿ ಅರಿವನ್ನು ಹೆಚ್ಚಿಸಬೇಕಾದ ಮಾಧ್ಯಮಗಳು ಅರ್ಧಸತ್ಯಗಳನ್ನು ಹೇಳುತ್ತಾ ಅಭದ್ರತೆ, ಅಪನಂಬಿಕೆ ಮತ್ತು ಆತಂಕವನ್ನು ಹೆಚ್ಚಿಸುತ್ತಿವೆ. ಮೀಸಲಾತಿಯಿಂದಾಗಿ ಪ್ರತಿಭಾವಂತ ಯುವಕರ ಭವಿಷ್ಯ ಹಾಳಾಗುತ್ತದೆ ಎಂಬ ಭೀತಿಯನ್ನು ಮುಗ್ಧಮನಸ್ಸುಗಳಲ್ಲಿ ಸೃಷ್ಟಿಸಲಾಗುತ್ತಿದೆ. ಎಲ್ಲ ವರ್ಗಗಳ ಧ್ವನಿಯಾಗಬೇಕಾದ ಪತ್ರಿಕೆಗಳು ಕೆಲವೇ ವರ್ಗದ ಹಿತಾಸಕ್ತಿಗಳನ್ನು ಸಾರ್ವಜನಿಕ ಹಿತಾಸಕ್ತಿ ಎಂಬಂತೆ ಬಹಳ ದಿನಗಳಿಂದಲೂ ಬಿಂಬಿಸುತ್ತಾ ಬಂದಿವೆ.

ಯುವಕರ ಭವಿಷ್ಯದ ಬಗ್ಗೆ ಆತಂಕ ವ್ಯಕ್ತಪಡಿಸುತ್ತಿರುವ ಮಾಧ್ಯಮಗಳು ಶಿಕ್ಷಣದ ವ್ಯಾಪಾರೀಕರಣ ಮತ್ತು ಖಾಸಗೀಕರಣದಿಂದಾಗುತ್ತಿರುವ ದೂರಗಾಮಿ ಪರಿಣಾಮದ ಬಗ್ಗೆ ಯಾವುದೇ ಕಾಳಜಿ ತೋರುವುದಿಲ್ಲ. ಪ್ರತಿಭಾವಂತರ ಭವಿಷ್ಯ ಅಪಾಯಕ್ಕೀಡಾಗಿರುವುದು ಉನ್ನತ ಶಿಕ್ಷಣದ ಖಾಸಗೀಕರಣ ಮತ್ತು ವ್ಯಾಪಾರೀಕರಣದಿಂದ. ಹೆಚ್ಚು ವೇತನವನ್ನು ಪಡೆಯಬಹುದಾದ ಉದ್ಯೋಗಗಳಿಗೆ ಅರ್ಹರನ್ನಾಗಿಸುವಂತಹ ಎಲ್ಲ ಕೋರ್ಸ್‌ಗಳಿಗೆ ಪ್ರವೇಶ ಇಂದು ಬಡವರಿಗೇಕೆ, ಮಧ್ಯಮ ವರ್ಗದವರಿಗೂ ದೊರೆಯದಂತಹ ಪರಿಸ್ಥಿತಿಯನ್ನು ನಮ್ಮ ಸರ್ಕಾರಗಳು, ನ್ಯಾಯಾಲಯಗಳು ನಿರ್ಮಿಸಿವೆ. ಹಿಂದುಳಿದ ಜಾತಿಯವರಿಗೆ ಶೇ. ೨೭ ಮೀಸಲಾತಿಯನ್ನು ವಿರೋಧಿಸುತ್ತಿರುವ ಮಾಧ್ಯಮಗಳು ಹಣ ಉಳ್ಳವರಿಗೆ ಶೇ. ೫೦ರಿಂದ ೧೦೦ ಸೀಟುಗಳನ್ನು ಮಾರಿಕೊಳ್ಳಬಹುದಾದ ಪೇಮೆಂಟ್ ವ್ಯವಸ್ಥೆಯಲ್ಲಿ ಯಾವುದೇ ಅಸಮಾನತೆಯನ್ನೂ ಅನೈತಿಕತೆಯನ್ನೂ ಕಾಣುವುದಿಲ್ಲ. ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳು ಹಣವಂತರಿಗೆ ಸೀಟುಗಳನ್ನು ಮಾರುವುದನ್ನು ಅನುವು ಮಾಡಿಕೊಡಲು ವೃತ್ತಿಶಿಕ್ಷಣ ಕೋರ್ಸ್‌ಗಳಿಗೆ ಪ್ರವೇಶ ಪಡೆಯಲು ಪಿ.ಯು.ಸಿ.ಯಲ್ಲಿ ಕನಿಷ್ಠ ಶೇ. ೫೦ ಅಂಕಗಳಿರಬೇಕೆಂಬ ನಿಯಮವನ್ನು ಸಡಿಲಿಸಲಾಗಿದೆ. ಇಂತಹ ನಿಯಮ ಸಡಿಲಿಕೆಯಿಂದ ಗುಣಮಟ್ಟ ಹಾಳಾಗುತ್ತದೆಂದು ಮಾಧ್ಯಮಗಳು ತಿಳಿಯುವುದಿಲ್ಲ. ಸಾಮಾಜಿಕವಾಗಿ ಹಿಂದುಳಿದವರಿಗೆ ಮೀಸಲಾತಿಯನ್ನು ನೀಡುವುದು ಹಾನಿಕಾರಕವಾಗಿ ಕಂಡರೆ ಹಣವಂತರಿಗೆ ಮೀಸಲಾತಿ ನೀಡುವುದು ನ್ಯಾಯಯುತವಾಗಿ ಕಾಣುತ್ತದೆ. ಬಹಳಷ್ಟು ಕೋರ್ಸ್‌ಗಳಲ್ಲಿ ಪೇಮೆಂಟ್ ವರ್ಗದಲ್ಲಿ ಪ್ರವೇಶಪಡೆಯುವ ವಿದ್ಯಾರ್ಥಿಗಳು ಮೀಸಲಾತಿ ಪಡೆಯುವ ವಿದ್ಯಾರ್ಥಿಗಳಿಗಿಂತ ಬಹಳ ಹಿಂದಿರುತ್ತಾರೆಂಬುದು ಅಂಕಿ-ಅಂಶಗಳನ್ನು ಗಮನಿಸಿದರೆ ತಿಳಿಯುತ್ತದೆ. ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಜಾತಿ ಆಧಾರಿತ ಮೀಸಲಾತಿಯನ್ನು ವಿರೋಧಿಸುವ ಮಾಹಿತಿ ತಂತ್ರಜ್ಞಾನದ ಬಹುದೊಡ್ಡ ಹೆಸರಾದ ಇನ್ಫೋಸಿಸ್‌ನ ನಾರಾಯಣ ಮೂರ್ತಿ ಪೇಮೆಂಟ್ ಸೀಟುಗಳ ಬಗ್ಗೆ ಎಂದೂ ಪ್ರಶ್ನೆಗಳನ್ನೆತ್ತುವುದಿಲ್ಲ.

ಎಂಬತ್ತರ ದಶಕದಲ್ಲಿ ತನಿಖಾ ವರದಿಗಾರಿಕೆಯಿಂದ ಪತ್ರಿಕೋದ್ಯಮದ ಶಕ್ತಿಯನ್ನು ತೋರಿಸಿಕೊಟ್ಟ ಅರುಣ್ ಶೌರಿ ಮುಂದಿನ ದಶಕದ ಆರಂಭದ ವೇಳೆಗೆ ಮುಂದುವರಿದ ವರ್ಗಗಳ ಹಿತಾಸಕ್ತಿಗಳನ್ನು ದೇಶದ ಹಿತಾಸಕ್ತಿಯೊಂದಿಗೆ ಸಮೀಕರಿಸುತ್ತಾ ಹಿಂದುಳಿದ ವರ್ಗಗಳಿಗೆ ಮೀಸಲಾತಿ ನೀಡುವುದನ್ನು ವಿರೋಧಿಸಿ ಪುಟಗಟ್ಟಲೆ ಲೇಖನಗಳನ್ನು ಬರೆಯಲು ಆರಂಭಿಸಿದರು. ವಿ.ಪಿ.ಸಿಂಗ್ ಸರ್ಕಾರ ಮಂಡಲ್ ವರದಿಯ ಶಿಫಾರಸುಗಳನ್ನು ಜಾರಿಗೆ ತರುವುದಾಗಿ ಪ್ರಕಟಿಸಿದೊಡನೆಯೇ ಹಿಂದುಳಿದ ವರ್ಗಗಳನ್ನು, ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳನ್ನು ಅವಮಾನಿಸುವಂತಹ ಲೇಖನಗಳನ್ನು ಬರೆಯುತ್ತಾಹೋದರು. 'ನಿಮಗೆ ಗಂಭೀರವಾದ ಆರೋಗ್ಯ ಸಮಸ್ಯೆ ಇದ್ದಾಗ ಮೀಸಲಾತಿಯ ಲಾಭಪಡೆದು ಶೇ. ೩೫ ಅಂಕಗಳನ್ನು ಪಡೆದಿರುವ ವೈದ್ಯನ ಬಳಿ ಹೋಗುತ್ತೀರೋ ಅಥವಾ ಶೇ. ೮೦ ಅಂಕಗಳನ್ನು ಪಡೆದ ಪ್ರತಿಭಾವಂತ ವೈದ್ಯನಲ್ಲಿಗೆ ಹೋಗುತ್ತೀರೋ ?' ಎಂಬ ಸತ್ಯಕ್ಕೆ ದೂರವಾದ ಮತ್ತು ಪೂರ್ವಗ್ರಹಪೀಡಿತ ಪ್ರಶ್ನೆಯನ್ನು ಓದುಗರ ಮುಂದಿಟ್ಟು ದಲಿತರು ಮತ್ತು ಹಿಂದುಳಿದವರು ವೈದ್ಯಕೀಯ ವೃತ್ತಿಗೆ ಅನರ್ಹರಾಗಿದ್ದರೂ ಪ್ರವೇಶ ಪಡೆಯುತ್ತಿದ್ದಾರೆ ಎಂಬ ಅಭಿಪ್ರಾಯವನ್ನು ಮೂಡಿಸುವ ಪ್ರಯತ್ನಮಾಡಿದರು. ಕರ್ನಾಟಕದಲ್ಲಿ ಆಗ ವೃತ್ತಿ ಶಿಕ್ಷಣ ಪ್ರವೇಶಕ್ಕೆ ಸಂಬಂಧಿಸಿದಂತೆ ಅಂಕಗಳಿಕೆಯಲ್ಲಿ ಮೀಸಲಾತಿ ವರ್ಗದ ವಿದ್ಯಾರ್ಥಿಗಳು ಮತ್ತು ಸಾಮಾನ್ಯ ವರ್ಗದ ವಿದ್ಯಾರ್ಥಿಗಳ ನಡುವಿನ ವ್ಯತ್ಯಾಸ ಶೇ. ೧೦ರಿಂದ ೧೫ರಷ್ಟಿತ್ತಷ್ಟೆ. ಅಂದರೆ ಸಾಮಾನ್ಯ ವರ್ಗದ ವಿದ್ಯಾರ್ಥಿಗಳಿಗೆ ಪ್ರವೇಶ ಶೇ. ೮೫ಕ್ಕೆ ಅಂತ್ಯವಾದರೆ ಮೀಸಲಾತಿಯ ವಿದ್ಯಾರ್ಥಿಗಳಿಗೆ ಶೇ. ೭೦ರಷ್ಟಿತ್ತಷ್ಟೆ. ಸಾವಿರಾರು ವರ್ಷಗಳಿಂದ ವಿದ್ಯೆಯಿಂದ ವಂಚಿತರಾದ, ಸಾಮಾಜಿಕವಾಗಿ ಹಿಂದುಳಿದ ಮತ್ತು ಕನಿಷ್ಠ ಸೌಲಭ್ಯಗಳೂ ಇಲ್ಲದಂತಹ ಪ್ರದೇಶದಿಂದ ಬಂದ ವಿದ್ಯಾರ್ಥಿಗಳು ಶೇ. ೭೦ ಅಂಕ ಗಳಿಸುವುದು ಸಾಧನೆಯಲ್ಲವೆ ? ಆದರೆ ಅರುಣ್ ಶೌರಿಯವರು ಕೇವಲ ಶೇ. ೩೫ ಅಂಕಗಳನ್ನು ಪಡೆದವರು ವೈದ್ಯರಾಗುತ್ತಿದ್ದಾರೆ ಎಂದು

ಸುಳ್ಳು ಹೇಳಿ ಇಡೀ ಸಮುದಾಯವನ್ನೇ ಪ್ರತಿಭಾಹೀನ ವರ್ಗವನ್ನಾಗಿ ಚಿತ್ರಿಸಿದರು. ರಾಜೀವ್ ಗೋಸ್ವಾಮಿ ಎಂಬ ದೆಹಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿ ೧೯೯೦ರಲ್ಲಿ ಬೆಂಕಿ ಹೊತ್ತಿಸಿಕೊಂಡು ಆತ್ಮಾಹುತಿ ಪ್ರಯತ್ನ ಮಾಡಿದ. ಬಹುತೇಕ ಪತ್ರಿಕೆಗಳು, ಮಾಗಝಿನ್‌ಗಳು ತಮ್ಮ ಮುಖಪುಟಗಳಲ್ಲಿ ಉರಿಯುತ್ತಿದ್ದ ಗೋಸ್ವಾಮಿಯ ಚಿತ್ರಗಳನ್ನು ಪ್ರಕಟಿಸಿ ಆತನ 'ಧೈರ್ಯ' ಮತ್ತು 'ತ್ಯಾಗ'ವನ್ನು ವೈಭವೀಕರಿಸಿದವು. ಯುವಕರ ಜೀವಗಳ ಬೆಲೆಯನ್ನು ತಿಳಿದವರು ಮಾಡುವ ಕೆಲಸ ಇದಲ್ಲ. ದೇಶದ ವಿವಿಧೆಡೆ ನೂರಾರು ವಿದ್ಯಾರ್ಥಿಗಳು ಗೋಸ್ವಾಮಿಯಂತೆಯೇ ಆತ್ಮಾಹುತಿ ಪ್ರಯತ್ನ ಮಾಡಿದರು. ಮೀಸಲಾತಿಯಿಂದ ಪ್ರತಿಭಾವಂತ ವಿದ್ಯಾರ್ಥಿಗಳ ಭವಿಷ್ಯ ನಾಶವಾಗುತ್ತದೆಂಬ ಹತಾಶೆಯನ್ನು ಸಮಾಜ ವಿರೋಧಿ ಶಕ್ತಿಗಳು ಮತ್ತು ಪತ್ರಿಕೆಗಳು ಸೃಷ್ಟಿಸಿದ್ದವು. 'ಜಾತಿ ಆಧಾರದ ಮೇಲೆ ಸಮಾಜವನ್ನು ಒಡೆಯುತ್ತಿರುವ ವಿ. ಪಿ. ಸಿಂಗರ ರಕ್ತಸಿಕ್ತ ಕೈಗಳು ಯುವಕರ ಜೀವಗಳನ್ನು ಹೊಸಕಿಹಾಕುತ್ತಿವೆ' ಎಂದು 'ಇಂಡಿಯಾ ಟುಡೆ' ಹೊರತರುತ್ತಿದ್ದ ನ್ಯೂಸ್ ಟ್ರ್ಯಾಕ್ ವಿಡಿಯೋ ಸಂಚಿಕೆಯಲ್ಲಿ ಪತ್ರಕರ್ತೆ ಮಧು ತೆಹ್ರಾನ್ ವಾದಿಸಿದರು. ಅದೇ ಸಂಸ್ಥೆಗೆ ಸೇರಿದ 'ಹೆಡ್‌ಲೈನ್ಸ್ ಟುಡೆ' ಇಂದು ಮೀಸಲಾತಿ ವಿರೋಧಿ ಚಳುವಳಿಗೆ ಬೆಂಬಲವಾಗಿ ನಿಂತಿದೆ.

ಟೆಲಿವಿಷನ್‌ನಲ್ಲಿ ಸಂಶೋಧನಾತ್ಮಕ ಸಂದರ್ಶನಗಳು ಮತ್ತು ಪ್ರಚಲಿತ ವಿದ್ಯಮಾನಗಳನ್ನು ಕುರಿತ ಚರ್ಚೆಗಳನ್ನು ಪರಿಣಾಮಕಾರಿಯಾಗಿ ನಡೆಸಿಕೊಡುವ ಕರಣ್ ಥಾಪರ್ ಮೀಸಲಾತಿಗೆ ಸಂಬಂಧಪಟ್ಟಂತೆ ಕೇಂದ್ರ ಸಚಿವ ಕಮಲ್‌ನಾಥ್ ಅವರನ್ನೊಮ್ಮೆ ಸಂದರ್ಶಿಸಿದರು. ಸಂದರ್ಶನದುದ್ದಕ್ಕೂ ಮೀಸಲಾತಿ ವಿರೋಧಿಗಳನ್ನು ಸಮರ್ಥಿಸುವಂತಹ ಪ್ರಶ್ನೆಗಳನ್ನೇ ಪದೇ ಪದೇ ಕೇಳಲಾಯಿತು. ಅಲ್ಲದೆ ಕಮಲ್‌ನಾಥ್ ಅವರ ಬಾಯಲ್ಲಿ ತಮ್ಮ ಪದಗಳನ್ನು ತುರುಕಲು ಥಾಪರ್ ಪ್ರಯತ್ನಿಸಿದರು. ಆದರೆ ಒಂದು ಘಟ್ಟದಲ್ಲಿ 'ನಾನು ಹೇಳುವುದನ್ನು ಹೇಳಲಿಕ್ಕೆ ಬಿಡಿ. ನಿಮ್ಮ ಪದಗಳ ಮೂಲಕ ನಾನು ಹೇಳುವುದನ್ನು ವಿಶ್ಲೇಷಿಸಬೇಡಿ' ಎಂದು ಕಮಲ್‌ನಾಥ್ ಥಾಪರ್‌ಗೆ ಹೇಳಿದರು. ಸಂದರ್ಶನಾರ್ಥಿಗಳನ್ನು ಮಾತನಾಡಲು ಬಿಡದೆ ತಾವೇ ಮಾತನಾಡುತ್ತಾ, ತಮ್ಮ ಪ್ರಶ್ನೆಗಳಿಗೆ ಅಪೇಕ್ಷಿತ ಉತ್ತರಕ್ಕಾಗಿ ವಾದಿಸುತ್ತಾ ತಮ್ಮ ಜಾಣತನವನ್ನು ಪ್ರದರ್ಶಿಸುವ ಟಿ.ವಿ. ಸಂದರ್ಶಕರನ್ನು 'ಚತುರರು' ಎಂದು ಕರೆಯಲಾಗುತ್ತದೆ. 'ನಾವಾಗಲೇ ಶೇ. ೫೦ಕ್ಕಿಂತ ಹೆಚ್ಚು ಕೆಲಸಗಾರರನ್ನು ಹಿಂದುಳಿದ ವರ್ಗದಿಂದ ತೆಗೆದುಕೊಂಡಿದ್ದೇವೆ' ಎಂದು ಉದ್ಯಮಿಗಳು ಹೇಳುತ್ತಿದ್ದಾರೆ ; ಪರಿಸ್ಥಿತಿ ಹೀಗಿರುವಾಗ ಮೀಸಲಾತಿಯನ್ನು ಉದ್ಯಮಿಗಳ ಮೇಲೆ ಹೇರುವುದು ಸರಿಯೇ ಎಂಬ ಪ್ರಶ್ನೆಯನ್ನು ಪದೇ ಪದೇ ಕೇಳುತ್ತಾಹೋದರು. ಉದ್ಯಮಿಗಳು ಈಗಾಗಲೇ ಮೀಸಲಾತಿಯನ್ನು ನೀಡಿರುವುದರಿಂದ ಸರ್ಕಾರ ಶಾಸನ ಮಾಡುವುದರಲ್ಲಿ ಅರ್ಥವಿಲ್ಲ ಎಂದು ಹೇಳುವುದು ಆ ಪ್ರಶ್ನೆಯ ಉದ್ದೇಶವಾಗಿತ್ತು.

## ಸುವರ್ಣ ಕರ್ನಾಟಕ ಸಂಭ್ರಮದ ಅಭಿನಂದನೆಗಳು !



ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತಿನ ಪ್ರಧಾನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿರುವ, ನವಕರ್ನಾಟಕ ಪ್ರಕಾಶನ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಬಿ. ವಿ. ಕಕ್ಕಿಲ್ಲಾಯ ಹಾಗೂ ನಮ್ಮ ಹಿತೈಷಿಗಳಾದ ಶ್ರೀ ಎಚ್. ಎಸ್. ದೊರೆಸ್ವಾಮಿ, ಶ್ರೀ ವ್ಯಾಸರಾಯ ಬಲ್ಲಾಳ, ಶ್ರೀ ಕೋ. ಚೆನ್ನಬಸಪ್ಪ ಹಾಗೂ ಏಕೀಕರಣಕ್ಕಾಗಿ ದುಡಿದ ಇತರ ಮಹನೀಯರು ಸುವರ್ಣ ಕರ್ನಾಟಕ ವರ್ಷಾಚರಣೆಯ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಪುರಸ್ಕಾರಕ್ಕೆ ಪಾತ್ರರಾಗಿದ್ದಾರೆ. ಇವರೆಲ್ಲರಿಗೆ 'ಹೊಸತು' ಅಭಿನಂದನೆಗಳನ್ನು ಸಲ್ಲಿಸುತ್ತದೆ.

ಉದ್ಯಮಪತಿಗಳು ಉದಾರವಾಗಿ ಮೀಸಲಾತಿ ನೀಡಿರುವುದು ಸತ್ಯ ಮತ್ತು ಅದನ್ನು ಕೇಂದ್ರ ಸರ್ಕಾರ ಸೇರಿದಂತೆ ಎಲ್ಲರೂ ಒಪ್ಪಿಕೊಳ್ಳಬೇಕೆಂದು ಥಾಪರ್ ವಾದವಾಗಿತ್ತು.

ಮಾನವ ಸಂಪನ್ಮೂಲ ಸಚಿವ ಅರ್ಜುನ್ ಸಿಂಗ್ ಅವರಿಗೆ ದೇಶದಲ್ಲಿ ಹಿಂದುಳಿದವರ ಸಂಖ್ಯೆ ಎಷ್ಟು ಎಂಬ ಪ್ರಶ್ನೆ ಕೇಳಿದಾಗ ಆ ಬಗ್ಗೆ ನಿಖರ ಮಾಹಿತಿ ಇಲ್ಲ ಎಂದು ಉತ್ತರ ನೀಡಿದರು. ಇದನ್ನು ಉಲ್ಲೇಖಿಸಿದ ಮಾಧ್ಯಮಗಳು ಹಿಂದುಳಿದವರ ಜನಸಂಖ್ಯೆ ಎಷ್ಟಿದೆಯೆಂಬ ಮಾಹಿತಿಯಿಲ್ಲದೆ ಸರ್ಕಾರ ಮೀಸಲಾತಿ ನೀಡುತ್ತಿರುವುದು ಅವೈಜ್ಞಾನಿಕ ಮತ್ತು ಅಸಮರ್ಥನೀಯ ಎಂದು ವಾದಿಸಿದವು. ಸರಳ ಸತ್ಯವೇನೆಂದರೆ ಜಾತಿವಾರು ಜನಸಂಖ್ಯೆಯ ಅಂಕಿ-ಅಂಶಗಳು ಲಭ್ಯವಿಲ್ಲ. ಎಷ್ಟೋ ದಶಕಗಳಿಂದ ಅಂತಹ ಗಣತಿಯನ್ನು ಮಾಡಿಲ್ಲ. ವಿವಿಧ ಸರ್ಕಾರಗಳು ನೇಮಿಸಿದ ಸಮಿತಿಗಳು ಸ್ವಾತಂತ್ರ್ಯಪೂರ್ವದಲ್ಲಿ ನಡೆಸಿದ್ದ ಗಣತಿಯನ್ನೇ ಆಧಾರವಾಗಿಟ್ಟುಕೊಂಡು ಶಿಫಾರಸುಗಳನ್ನು ಮಾಡಿದ್ದವು. ವಿಪರ್ಯಾಸವೆಂದರೆ ಮೀಸಲಾತಿಯನ್ನು ವಿರೋಧಿಸುವವರೇ ಜಾತಿವಾರು ಜನಗಣತಿಯನ್ನು ಮಾಡಬಾರದೆಂದೂ, ಅದು ಸಮಾಜದಲ್ಲಿ ಜಾತಿವಾರು ವಿಭಜನೆಯನ್ನು ಸೃಷ್ಟಿಸುತ್ತದೆಂದೂ ವಾದಿಸುತ್ತಾರೆ. ಮೀಸಲಾತಿ ನೀಡಲು ಒಟ್ಟು ಜನಸಂಖ್ಯೆಯಲ್ಲಿ ಜಾತಿಗಳ ಪ್ರಮಾಣವೊಂದೇ ಪ್ರಧಾನ ಆಧಾರವಾಗಬೇಕಾಗಿಲ್ಲ. ಸಂಸತ್‌ನಲ್ಲಿ ಶೇ. ೩೩ ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಬೇಕೆಂಬ ತೀರ್ಮಾನ ಅವರ ಜನಸಂಖ್ಯಾ ಪ್ರಮಾಣವನ್ನು ಅವಲಂಬಿಸಿದ್ದಲ್ಲ.

ಯಾವುದೇ ವಿವಾದಕ್ಕೆ ಸಂಬಂಧಪಟ್ಟಂತೆ ಎಲ್ಲ ಮಗ್ಗುಲುಗಳನ್ನೂ ಪರೀಕ್ಷಿಸಬೇಕೆಂಬ ಪತ್ರಿಕಾಧರ್ಮವನ್ನು ಗಾಳಿಗೆ ತೂರಿ ಮೀಸಲಾತಿ ವಿರೋಧಿಗಳ ಪರವಾಗಿ ಮಾಧ್ಯಮಗಳು ನಿಂತಿವೆ. ಶಾಂತಿಯುತ ಹೋರಾಟ ಮಾಡುತ್ತಿರುವ ಯಾವುದೇ ನಾಗರಿಕರ ಮೇಲೆ ಪೊಲೀಸರು ದಾಳಿ ನಡೆಸಿದರೆ ಅದು ಪ್ರಜಾತಂತ್ರ ವಿರೋಧಿ ಕೃತ್ಯ. ಆದರೆ ಸ್ವಾತಂತ್ರ್ಯ ಮತ್ತು ಇತಿಹಾಸದ ಅಲ್ಪ ಜ್ಞಾನವೂ ಇಲ್ಲದ ಕೆಲವು ಮಾಧ್ಯಮಗಳು ಮುಷ್ಕರ ನಿರತ ವೈದ್ಯವಿದ್ಯಾರ್ಥಿಗಳ ಮೇಲೆ ನಡೆಸಿದ ಲಾಠಿ ಪ್ರಹಾರವನ್ನು ಜಲಿಯನ್‌ವಾಲಾಬಾಗ್ ಕಗ್ಗೊಲೆಗೆ ಹೋಲಿಸಿದುದು ವಿಪರ್ಯಾಸ. ಕಳೆದ ವರ್ಷ ಹೋಂಡ ಕಂಪನಿ ನೀಡುತ್ತಿದ್ದ ಕಿರುಕುಳದ ವಿರುದ್ಧ ಮುಷ್ಕರ ಆರಂಭಿಸಿದ ಕಾರ್ಮಿಕರ ಮೇಲೆ ಅಮಾನುಷ ಹಲ್ಲೆ ನಡೆಸಿದ ಪೊಲೀಸರ ದೌರ್ಜನ್ಯವನ್ನು ಕೆಲವು ಪತ್ರಿಕೆಗಳು ಸಮರ್ಥಿಸಿದುವಲ್ಲದೆ ಅಂತಹ ಮುಷ್ಕರಗಳು ವಿದೇಶಿ ಬಂಡವಾಳ ಹೂಡಿಕೆಯ ಮೇಲೆ ಋಣಾತ್ಮಕ ಪರಿಣಾಮ ಬೀರುತ್ತವೆಂದು ವಾದಿಸಿದ್ದವು. ಜಲಿಯನ್‌ವಾಲಾಬಾಗ್‌ನಂತಹ ಘಟನೆಗಳಲ್ಲಿ ಸಾವಿರಾರು ಹೋರಾಟಗಾರರು ರಕ್ತಸುರಿದು ಸಂಪಾದಿಸಿಕೊಟ್ಟ ಸ್ವಾತಂತ್ರ್ಯ ಇಂದು ಬಹುರಾಷ್ಟ್ರೀಯ/ಖಾಸಗಿ ಕಂಪನಿಗಳ ಸ್ವತ್ತಾಗುತ್ತಿರುವುದನ್ನು ಭಾರತದ ಅಭಿವೃದ್ಧಿ ಎಂದು ಕರೆಯುತ್ತಿರುವ ಪತ್ರಿಕೆಗಳಿಗೆ ಸ್ವಾತಂತ್ರ್ಯ ಹೋರಾಟದ ಮಹತ್ವ ತಿಳಿಯುತ್ತದೆಯೆ ? ಹಾಗಾಗಿಯೇ ಅವು ಸಮಾನ ಅವಕಾಶವನ್ನು ಕಲ್ಪಿಸುವ, ಬಹುಜನರ ಹಿತಾಸಕ್ತಿಯನ್ನು ಗುರಿಯಾಗಿರಿಸಿಕೊಳ್ಳುವ ಯಾವುದೇ ಅಭಿವೃದ್ಧಿ ಪಥವನ್ನು ವಿರೋಧಿಸುತ್ತವೆ; ಮೀಸಲಾತಿಯಿಂದ ದೇಶಕ್ಕೆ ಹಿನ್ನಡೆಯಾಗುತ್ತದೆಂದು ವಾದಿಸುತ್ತವೆ.

ಪ್ರಜಾತಂತ್ರ ವ್ಯವಸ್ಥೆಯಲ್ಲಿ ಯಾವುದೇ ಪ್ರಮುಖ ನೀತಿಯನ್ನು ರೂಪಿಸುವ ಮೊದಲು ದೇಶವ್ಯಾಪಿ ಸಾರ್ವಜನಿಕ ಚರ್ಚೆ ಮತ್ತು ಅಭಿಪ್ರಾಯ ಸಂಗ್ರಹ ಅವಶ್ಯಕ. ಆದರೆ ಭಾರತದಲ್ಲಿ ಹೆಚ್ಚೂ ಕಡಿಮೆ ಎಲ್ಲಾ ನಿರ್ಧಾರಗಳನ್ನೂ ಈ ಪ್ರಕ್ರಿಯೆ ಇಲ್ಲದೆ ತೆಗೆದುಕೊಳ್ಳಲಾಗುತ್ತಿದೆ. ಪ್ರತಿಷ್ಠಿತ ಸಾರ್ವಜನಿಕ ಕ್ಷೇತ್ರದ ಲಾಭದಾಯಕ ಉದ್ದಿಮೆಗಳು ಮತ್ತು ಇತರ ಸೇವಾ ಸಂಸ್ಥೆಗಳನ್ನು ಯಾವುದೇ ಚರ್ಚೆಯಿಲ್ಲದೆ ಖಾಸಗಿ ಹಿಡಿತಕ್ಕೆ ಒಪ್ಪಿಸುವ ನಿರ್ಧಾರವನ್ನು ಬೆಂಬಲಿಸುತ್ತಾ ಬಂದಿರುವ ಪತ್ರಿಕೆಗಳು ಮೀಸಲಾತಿ ನೀತಿಯ ಬಗ್ಗೆ ಸಾರ್ವಜನಿಕ ಚರ್ಚೆಯಾಗಬೇಕೆಂದು ಒತ್ತಾಯಿಸುತ್ತಿವೆ. ಪ್ರಮುಖ ಆರ್ಥಿಕ ನೀತಿಗಳ ಬಗೆಗಿನ ಚರ್ಚೆ ಕೈಗಾರಿಕಾ ಪ್ರಗತಿಯನ್ನು ಕುಂಠಿತಗೊಳಿಸುತ್ತದೆ ಎಂಬ ವಾದವನ್ನು ಮುಂದಿಡಲಾಗುತ್ತಿದೆ. ಆ ಕಾರಣಕ್ಕಾಗಿಯೇ ಇಂದು 'ಭಾರತದ ಹಿನ್ನಡೆಗೆ ಪ್ರಜಾತಂತ್ರ ಕಾರಣವೇ' ಎಂಬ ವಿಷಯ ಟಿವಿ ಸಂವಾದಗಳ ವಿಷಯವಾಗಿದೆ. ಶ್ರೀಸಾಮಾನ್ಯರೊಡನೆ ಸಮಾನ ಹಕ್ಕು, ಅವಕಾಶ, ಸಾಮಾಜಿಕ ನ್ಯಾಯದ ಬಗ್ಗೆ ಚರ್ಚೆ ಮಾಡುತ್ತಾ ಕುಳಿತರೆ ತ್ವರಿತ 'ಅಭಿವೃದ್ಧಿ' ಸಾಧಿಸುವುದು ಅಸಾಧ್ಯವೆನ್ನುವ ಅಭಿಪ್ರಾಯವನ್ನು ಹುಟ್ಟುಹಾಕುತ್ತಿವೆ.

ಮೂರು ವರ್ಷಗಳ ಹಿಂದೆ ತಮಿಳುನಾಡಿನ ಸರ್ಕಾರಿ ನೌಕರರು ನಡೆಸಿದ ಚಳುವಳಿಯನ್ನು ಕಾನೂನುಬಾಹಿರ ಮತ್ತು ಆಸೆಬುರುಕ ನೌಕರರ ಜನವಿರೋಧಿ ಕೃತ್ಯವೆಂದು ಬಣ್ಣಿಸಿದ ಮಾಧ್ಯಮಗಳು ಭಾರತೀಯ ವೈದ್ಯಕೀಯ ವಿಜ್ಞಾನ ಸಂಸ್ಥೆಯ ವೈದ್ಯರು ಕೆಲಸಕ್ಕೆ ಹಾಜರಾಗದೆ ಮೀಸಲಾತಿ ವಿರೋಧಿ ಚಳುವಳಿಯಲ್ಲಿ ಪಾಲ್ಗೊಂಡಿದ್ದ ದಿನಗಳ ಸಂಬಳವನ್ನು ಕಡಿತಗೊಳಿಸಬಾರದೆಂದು ವಾದಿಸಿವೆ. 'ಕೆಲಸ ಮಾಡದೆ ಸಂಬಳವಿಲ್ಲ' ಎಂಬ ನಿಯಮವನ್ನು

ಮುಂದಿನ ಪುಟಕ್ಕೆ




# ಆತ್ಮವಿಶ್ವಾಸ

ಆತ್ಮವಿಶ್ವಾಸ ಅಹಂಕಾರವಲ್ಲ. ಆತ್ಮವಿಶ್ವಾಸ ಬೇರೆ; ಅಹಂಕಾರ ಬೇರೆ. ಎರಡೂ ವಿಭಿನ್ನ. ಆತ್ಮವಿಶ್ವಾಸಕ್ಕೂ ಅಹಂಕಾರಕ್ಕೂ ತೆಳುವಾದ ವ್ಯತ್ಯಾಸವಿದೆ; ಸೂಕ್ಷ್ಮವಾದ ಅಂತರವಿದೆ. ಹಲವೊಮ್ಮೆ ಆತ್ಮವಿಶ್ವಾಸ ಅತೀ ಆದಾಗ, ವಿಪರೀತವಾದಾಗ ಅಹಂಕಾರವಾಗುವ ಅಪಾಯವೂ ಇರುತ್ತದೆ.

ಆತ್ಮವಿಶ್ವಾಸ 'ನೇತ್ಯಾತ್ಮಕ ದೃಷ್ಟಿ' ಹೊಂದಿದಾಗ ಅಹಂಕಾರವಾಗುತ್ತದೆ; 'ಇತ್ಯಾತ್ಮಕ ದೃಷ್ಟಿ' ಹೊಂದಿದಾಗ ಸ್ವಾಭಿಮಾನವಾಗುತ್ತದೆ. ಜೊತೆಗೆ ಈ ಗುಣವಿಶೇಷತೆಯೇ ಗೆಲುವಿಗೆ ಸೋಪಾನವಾಗುತ್ತದೆ; ವ್ಯಕ್ತಿತ್ವ ವಿಕಸನಕ್ಕೆ ಪರಿಕರವಾಗುತ್ತದೆ.

ದುರ್ಯೋಧನನಲ್ಲಿ ಪಾಂಡವರನ್ನು ಜಯಿಸಿಯೇ ತೀರುತ್ತೇನೆಂಬ ಆತ್ಮವಿಶ್ವಾಸವಿತ್ತು. ಆತ್ಮವಿಶ್ವಾಸ ಯಾವುದೇ ನಾಯಕನ ಮೂಲಭೂತ ಗುಣ. ಅಂತೇ ದುರ್ಯೋಧನನ ಆತ್ಮವಿಶ್ವಾಸವನ್ನು ಯಾರೂ ಪ್ರಶ್ನಿಸಲಾರರು. ಆದರೆ ಯಾವಾಗ ಆ ಆತ್ಮವಿಶ್ವಾಸ ನೇತ್ಯಾತ್ಮಕ ಉದ್ದೇಶಗಳಿಗಾಗಿ ಬಳಕೆಯಾಗುತ್ತದೆಯೋ ಆಗಲೇ ಅಪಾಯ ಶುರುವಾಗೋದು. ಇಲ್ಲಿ ಆದದ್ದು ಅದುವೇ. ಅಂದರೆ ದುರ್ಯೋಧನನ ಆತ್ಮವಿಶ್ವಾಸ 'ನೇತ್ಯಾತ್ಮಕ ಉದ್ದೇಶ'ದಿಂದ ಪ್ರೇರಿತವಾದುದು. ಅಂತೆಯೇ 'ಪಾಂಡವರಿಗೆ ಒಂದು ಸೂಜಿ ಮೊನೆಯಷ್ಟು ಭೂಮಿ ಕೊಡಬಾರದು' ಎಂಬ ದುರುದ್ದೇಶದ ನಿರ್ಧಾರಕ್ಕೆ 'ಇಡೀ ಕುರುಸೇನೆಯೇ ನನ್ನ ಜತೆಯಲ್ಲಿದೆ' ಎಂಬ ಅಹಂಕಾರ ಕಾರಣವಾಗಿತ್ತು. ಈ ನಿರ್ಧಾರದಿಂದ 'ಮೌಲ್ಯಾಧಾರಿತ ಸಂಸ್ಕೃತಿ'ಯ ಬಗ್ಗೆ ಒಲವು ಉಳ್ಳವರೆಲ್ಲ ಪಾಂಡವರ ನೈತಿಕಶಕ್ತಿಯನ್ನು ಹೆಚ್ಚಿಸಲು ಕಾರಣವಾಗಿದ್ದರು. ಇದು ಪರೋಕ್ಷವಾಗಿ ಪಾಂಡವರ ನೈತಿಕ ಸ್ಥೈರ್ಯವನ್ನು, ಉತ್ಸಾಹವನ್ನು, ಸಾಮರ್ಥ್ಯವನ್ನು ಹೆಚ್ಚಿಸಲು ಕಾರಣವಾಯಿತು. ಇದುವೇ ಮುಂದೆ ಪಾಂಡವರ ವಿಜಯದ ಮೆಟ್ಟಿಲಾಯಿತೆಂಬುದು ಬೇರೆ ಮಾತು.

ಅಹಂಕಾರ ಮರೆವನ್ನು ತಂದರೆ, ಆತ್ಮವಿಶ್ವಾಸ ಅರಿವಿನ ಆಳವನ್ನು ತೀವ್ರಗೊಳಿಸುತ್ತದೆ; ವ್ಯಾಪ್ತಿಯನ್ನು ವಿಸ್ತರಿಸುತ್ತದೆ. ಮೊಲ ಹಾಗೂ ಆಮೆಯ ಓಟದ ಸ್ಪರ್ಧೆಯನ್ನು ಈ ಹಿನ್ನೆಲೆಯಲ್ಲಿ ಅವಲೋಕಿಸಬಹುದಾಗಿದೆ. ಮೊಲಕ್ಕೆ ಜೈವಿಕವಾಗಿ ಆಮೆಗಿಂತಲೂ ಓಡುವ ಶಕ್ತಿ ಜಾಸ್ತಿಯಿದೆ. ಇದು ಪ್ರಕೃತಿದತ್ತವಾದುದು. ಹಾಗೆ ನೋಡಿದರೆ ಇವೆರಡರ ನಡುವಿನ ಸ್ಪರ್ಧೆಯ ಔಚಿತ್ಯವೇ ಪ್ರಶ್ನಾರ್ಹವಾದುದು. ಆದರೂ ಇವೆರಡರ ಮಧ್ಯೆ ಸ್ಪರ್ಧೆ ಏರ್ಪಟ್ಟಾಗ ಆಮೆ ಗೆಲ್ಲುತ್ತದೆ; ಮೊಲ ಸೋಲುತ್ತದೆ. ಸ್ವಾರಸ್ಯ ಇರುವುದೇ ಇಲ್ಲಿ.

ಜೈವಿಕವಾಗಿ ಓಡುವ ಶಕ್ತಿ – ಸಾಮರ್ಥ್ಯ ಅತ್ಯಧಿಕ ಇದ್ದೂ ಮೊಲ ಸೋತದ್ದೇಕೆ ? ಕಾರ್ಯಕಾರಣ ವಿಶ್ಲೇಷಣೆ ಸ್ವಾರಸ್ಯಕರವಾಗಿದೆ. ಮೊಲಕ್ಕೆ, ತನಗೆ ಓಡುವ ಶಕ್ತಿ ಪ್ರಕೃತಿದತ್ತವಾಗಿಯೇ ಜಾಸ್ತಿ ಎಂಬ ಅಹಮ್ಮೇ ಸೋಲಿಗೆ ನೆಲೆಯಾಯಿತು. ನಾನೇನು ನಿಮಿಷಾರ್ಧದಲ್ಲಿಯೇ ಅಷ್ಟೂ ದೂರವನ್ನು ಕ್ರಮಿಸಬಲ್ಲೆ; ಆಮೆ ನನಗೆ ಸರಿಸಾಟಿಯೇ ? ಎಂಬಿತ್ಯಾದಿಯಾದ ಅಹಂಕಾರದ ಆಲೋಚನೆಗಳು, ಉದ್ಧಟತನದ ಉವಾಚಗಳು ಸೋಲಿಗೆ ಸೆಲೆಯಾದವು.

ಹಾಗಾದರೆ ಜೈವಿಕವಾಗಿ ಮೊಲಕ್ಕಿಂತ ದುರ್ಬಲವಾಗಿರುವ ಆಮೆಯ 'ಸಕ್ಸೆಸ್‌ಸೂತ್ರ' ಏನಿದ್ದಿರಬಹುದು ? ಅಂದಹಾಗೆ ಅದರಲ್ಲಿ ವಿಶೇಷವೇನಿಲ್ಲ. ಅದೋ ಪ್ರಕೃತಿತತ್ವಕ್ಕೆ, ನಿಸರ್ಗನ್ಯಾಯಕ್ಕೆ ಸಮೀಪವಾದುದು. ಮೊಲದ ಅತಿಯಾದ ಆತ್ಮವಿಶ್ವಾಸ, ಉಡಾಫೆ, ಸಿನಿಕತನ ಇತ್ಯಾದಿಗಳಿಗೆ ಬದಲಾಗಿ ಆಮೆ ತನ್ನ ಇತಿಮಿತಿಯನ್ನು ತಿಳಿದುಕೊಂಡು ಪ್ರತೀ ಹೆಜ್ಜೆ ಇಡುವಾಗಲೂ ಗೆಲ್ಲುವ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳತೊಡಗಿತು. ಮೊಲವಾದರೋ ತನ್ನ ಚಂಗನೆ ಜಿಗಿಯುವ ಸಾಮರ್ಥ್ಯದಿಂದ ಆಮೆಗಿಂತ ಮುಂಚೆ ಓಡಿ ದಣಿವಾರಿಸಿಕೊಳ್ಳುತ್ತಿತ್ತು. ಹಾಗೆ ದಣಿವಾರಿಸಿಕೊಳ್ಳುವಾಗಲೆಲ್ಲ 'ಆಮೆಯೇನು ನನಗೆ ಸರಿಸಾಟಿಯೇ' ಎಂಬ ಅಹಂಕಾರದ ಮಾತುಗಳನ್ನು ಮನದಲ್ಲಿಯೇ ಗುನುಗುತ್ತಿತ್ತು. ಈ ಮೊದಲೇ ಹೇಳಿದಂತೆ ಅಹಂಕಾರ ಮರೆವನ್ನು ತರಿಸುತ್ತದೆ. ಇಲ್ಲಿ ಮೊಲಕ್ಕೆ ಆದುದು ಅದುವೇ.

ಅಂದಹಾಗೆ ಇನ್ನೇನು ಓಟ ಕೊನೆಯ ಸುತ್ತಿನಲ್ಲಿ ಇದ್ದಾಗ ಮೊಲ ಓಟ ಮರೆತು ಮಲಗಿಬಿಟ್ಟಿತು. ಅಂದರೆ ಮೊಲಕ್ಕೆ, ಅಹಂಕಾರ ಮಲಗಲು ಪ್ರೇರಣೆ ನೀಡಿತು. ಇತ್ತ ಆಮೆ ಆ ಸಂದರ್ಭವನ್ನು ಬಳಸಿಕೊಂಡು ಮೊಲಕ್ಕಿಂತ ಮುಂಚೆಯೇ ತಂಗುದಾಣ (ಸ್ಪರ್ಧಾತಾಣ) ತಲುಪಿ ಗೆಲುವನ್ನು ತನ್ನದಾಗಿಸಿಕೊಂಡಿತು. ಇಲ್ಲಿ ಆಮೆಗೆ, ಆತ್ಮವಿಶ್ವಾಸವು ಅರಿವು ಆಗಿ ಪರಿಣಮಿಸಿದರೆ ಮೊಲಕ್ಕೆ, ಮರೆವು ಆಗಿ, ಅಹಂಕಾರ ಆಗಿ ಪರಿಣಮಿಸಿತು. ಅಂತೆಯೇ ಆತ್ಮವಿಶ್ವಾಸ 'ಇತ್ಯಾತ್ಮಕ' ಆದಾಗ ಎಲ್ಲಾ ದಾರಿಗಳು ತೆರೆದುಕೊಳ್ಳುತ್ತವೆ. ಮೊಲಕ್ಕೆ ಆದಂತೆ 'ನೇತ್ಯಾತ್ಮಕ' ಆದಾಗ ಎಲ್ಲಾ ದಾರಿಗಳು ಮುಚ್ಚಿಕೊಳ್ಳುತ್ತವೆ. ಈಗ ನೀವೇ ಹೇಳಿ, ಯಾವ ದಾರಿ ಹಿತ ? ಯಾರು ಹಿತವರು ಈ ಇಬ್ಬರಲ್ಲಿ ?

ಇಲ್ಲಿ ಆಮೆ ಆತ್ಮವಿಶ್ವಾಸವನ್ನು ಪ್ರತಿನಿಧಿಸಿದರೆ, ಮೊಲ ಅಹಂಕಾರವನ್ನು ಪ್ರತಿನಿಧಿಸುತ್ತದೆ. ಹಾಗಾದರೆ ಈಗ ಯಾರು ಬೇಕು ನಿಮಗೆ ? ಆಮೆಯೋ, ಮೊಲವೋ ? ಆತ್ಮವಿಶ್ವಾಸವೋ, ಅಹಂಕಾರವೋ ? ನೆನಪಿರಲಿ : ಆತ್ಮವಿಶ್ವಾಸ ಗೆಲುವನ್ನು ತರುತ್ತದೆ; ಅಹಂಕಾರ ವಿನಾಶದಂಚಿಗೆ ತಳ್ಳುತ್ತದೆ.

**ಡಾ|| ಬಿ. ಶರಣಪ್ಪ ಸತ್ಯಂಪೇಟೆ**
ಸತ್ಯಂಪೇಟೆ - ಸುರಪುರ, ಕಲಬುರ್ಗಿ

---

*ಹಿಂದಿನ ಪುಟದಿಂದ (ಮೀಸಲಾತಿ ಮತ್ತು ಮಾಧ್ಯಮಗಳು)*

ವೈದ್ಯರ ಮೇಲೆ ಹೇರಬಾರದು ; ನೌಕರರು ಮತ್ತು ಕಾರ್ಮಿಕರು ತಮ್ಮ ಬೇಡಿಕೆಗಳಿಗಾಗಿ, ಹಕ್ಕುಗಳ ರಕ್ಷಣೆಗಾಗಿ ಚಳುವಳಿ ನಡೆಸುವುದು ಸೇವಾನಿಯಮಗಳ ಉಲ್ಲಂಘನೆ, ಆದರೆ ಮೀಸಲಾತಿ ವಿರೋಧಿ ಚಳುವಳಿಯಲ್ಲಿ ಭಾಗವಹಿಸುವುದು ಸಮಾನತೆ ಪರವಾದ ಹೋರಾಟ !

ಹಿಂದಿನ ರಾಷ್ಟ್ರಪತಿ ಕೆ. ಆರ್. ನಾರಾಯಣನ್ ನವೆಂಬರ್ ೧೯೯೮ರಲ್ಲಿ ಅರ್ಹ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಂತಹ ದುರ್ಬಲವರ್ಗಕ್ಕೆ ಸೇರಿದ ವ್ಯಕ್ತಿಗಳಿದ್ದರೆ ಅವರನ್ನು ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳನ್ನಾಗಿ ನೇಮಿಸಬೇಕೆಂಬ ಸಲಹೆಯನ್ನು ಅಂದಿನ ಮುಖ್ಯ ನ್ಯಾಯಮೂರ್ತಿ ಜಸ್ಟೀಸ್ ಆನಂದ್ ಅವರಿಗೆ ಕಳುಹಿಸಿದ್ದರು. ಗೌಪ್ಯವಾಗಿರಬೇಕಾಗಿದ್ದ ರಾಷ್ಟ್ರಪತಿಗಳ ಈ ಸಲಹೆ ಹೇಗೋ ವಾರಪತ್ರಿಕೆ 'ಇಂಡಿಯಾ ಟುಡೆ' ಕೈಸೇರಿತು. ಮೀಸಲಾತಿಯನ್ನು ವಿರೋಧಿಸುವ ಉನ್ನತ ಅಧಿಕಾರಿ ವರ್ಗವೇ ಗೌಪ್ಯವಾಗಿಡಬೇಕಾಗಿದ್ದ ರಾಷ್ಟ್ರಪತಿಯವರ ಟಿಪ್ಪಣಿಯನ್ನು 'ಲೀಕ್' ಮಾಡಿರಬಹುದೆಂಬ ಶಂಕೆ ವ್ಯಕ್ತವಾಯಿತು. ಜನಸಾಮಾನ್ಯರಿಗೆ ಬೇಕಾದ ಮಾಹಿತಿಯನ್ನು ನಿರಾಕರಿಸುವದನ್ನು ಒಂದು ಸಂಸ್ಕೃತಿಯನ್ನಾಗಿ ಮಾಡಿಕೊಂಡಿರುವ ಅಧಿಕಾರಶಾಹಿ ಇಂತಹ ವಿಷಯಗಳನ್ನು ಉದ್ದೇಶಪೂರ್ವಕವಾಗಿ ಬಹಿರಂಗಪಡಿಸುತ್ತದೆ.

ಸಾಮಾಜಿಕ ನ್ಯಾಯವನ್ನು ಮೊದಲಿನಿಂದಲೂ ವಿರೋಧಿಸಿಕೊಂಡೇ ಬಂದಿರುವ 'ಇಂಡಿಯಾ ಟುಡೆ' ರಾಷ್ಟ್ರಪತಿಗಳು ಬರೆದ ಟಿಪ್ಪಣಿಯನ್ನು ತನ್ನ ಜನವರಿ ೨೫, ೧೯೯೯ರ ಸಂಚಿಕೆಯಲ್ಲಿ ಮುಖಪುಟ ವರದಿಯನ್ನಾಗಿ ಪ್ರಕಟಿಸಿ ಮೀಸಲಾತಿಯು ನ್ಯಾಯಾಂಗದಲ್ಲಿ ಜಾತೀಯತೆಯನ್ನು ಹುಟ್ಟುಹಾಕುವುದಲ್ಲದೆ ಅದರ ಸ್ವಾತಂತ್ರ್ಯವನ್ನು ಕಸಿದುಕೊಳ್ಳುತ್ತದೆ ಎಂದು ವಾದಿಸಿತು. ರಾಷ್ಟ್ರಪತಿಯವರ ಇಂತಹ ಕ್ರಮದಿಂದಾಗಿಯೇ ನ್ಯಾಯಮೂರ್ತಿಗಳ ನೇಮಕಾತಿಯಲ್ಲಿ ವಿಳಂಬವಾಗುತ್ತಿದೆಯೆಂದೂ ವರದಿಮಾಡಿತು. ಈ ವಾರಪತ್ರಿಕೆಯ ವಾದಸರಣಿಯನ್ನು ಮುಂದುವರಿಸಿದ ಇತರ ಪತ್ರಿಕೆಗಳು ರಾಷ್ಟ್ರಪತಿಗಳು ತಮ್ಮ ಅಧಿಕಾರವನ್ನು ಮೀರಿ ನಡೆದುಕೊಂಡಿದ್ದಾರೆಂದೂ ಅದೇ ನೀತಿ ಮುಂದುವರಿದರೆ ಸೇನೆಯ ದಂಡನಾಯಕರ ಸ್ಥಾನವನ್ನೂ ಮೀಸಲಿರಿಸುವ ಸಮಯ ದೂರವಿಲ್ಲವೆಂದು ಹೇಳತೊಡಗಿದವು. ಅಸಮರ್ಥರು ಉನ್ನತ ಹುದ್ದೆಗಳನ್ನಲಂಕರಿಸಿ ಪ್ರತಿಭಾವಂತರು ಅವಕಾಶ ವಂಚಿತರಾಗುತ್ತಾರೆಂದು ಅಬ್ಬರದ ಪ್ರಚಾರ ಆರಂಭಿಸಿದವು. ''ಅರ್ಹ ವ್ಯಕ್ತಿಯಿದ್ದರೆ ನೇಮಿಸಿ ಎಂದು ಸಲಹೆ ನೀಡಿರುವುದು ನಿರ್ದಿಷ್ಟ ವ್ಯಕ್ತಿಯೋರ್ವರನ್ನು ಆಯ್ಕೆ ಮಾಡುವಂತೆ ಪ್ರಭಾವ ಬೀರುವ ಉದ್ದೇಶದಿಂದಲೇ'' ಎಂದೂ ಬರೆದವು. ನ್ಯಾಯಾಂಗವೇ ಅಪಾಯದಲ್ಲಿ ಸಿಲುಕಿಕೊಂಡಿದೆ ಎಂಬಂತಹ ವರದಿಗಳು ಪ್ರಕಟವಾದವು. ಒಂದು ರೀತಿಯ ಮೀಸಲಾತಿ ವಿರೋಧಿ ಹಿಸ್ಟೀರಿಯಾವನ್ನು ಆ ಪತ್ರಿಕೆ ಸೃಷ್ಟಿಸಿತು.

ಇಂದೂ ಕೂಡ ಮಾಧ್ಯಮಗಳ ಮಾಲಿಕರು ಮತ್ತು ಅಲ್ಲಿನ ಪ್ರಮುಖ ಹುದ್ದೆಗಳನ್ನು ಅಲಂಕರಿಸಿರುವವರು ಬಹುತೇಕ ಮೇಲ್ಜಾತಿ ಮತ್ತು ಮೇಲ್ವರ್ಗದವರೇ ಆಗಿದ್ದಾರೆ. ಇಂತಹ ಸಂದರ್ಭದಲ್ಲಿ ಎಲ್ಲ ಸಮುದಾಯಗಳ ಮತ್ತು ವರ್ಗಗಳ ಹಿತವನ್ನು ಮಾಧ್ಯಮಗಳು ಕಾಪಾಡಬಹುದೆಂದು ನಿರೀಕ್ಷಿಸಲಾಗದು. ಎಲ್ಲ ವರ್ಗದ ಜನರ ಆಶೋತ್ತರಗಳನ್ನು ಪ್ರತಿನಿಧಿಸುವಂತಹ ಮಾಧ್ಯಮಗಳು ಬೆಳೆಯಬೇಕಾದರೆ ಅವು ವಾಣಿಜ್ಯ ಮತ್ತು ಪಟ್ಟಭದ್ರ ಸಾಮಾಜಿಕ ಶಕ್ತಿಗಳಿಂದ ಮುಕ್ತವಾಗಿರಬೇಕು. ಕೆಲವೇ ಪ್ರತಿಷ್ಠಿತ ಗುಂಪುಗಳ ಹಿತಾಸಕ್ತಿಯನ್ನು ದೇಶದ ಹಿತಾಸಕ್ತಿಯೆಂದೂ ಸಾಮಾಜಿಕ ನ್ಯಾಯವನ್ನು ಪ್ರಗತಿ ವಿರೋಧಿಯೆಂದೂ ಪರಿಗಣಿಸುವ ಮಾಧ್ಯಮಗಳು ಗಣತಂತ್ರ ವ್ಯವಸ್ಥೆಗೆ ಅಪಾಯಕಾರಿ.

**ಡಿ. ಎಸ್. ಪೂರ್ಣಾನಂದ**
ರೀಡರ್, ಸಮೂಹ ಸಂವಹನ ಮತ್ತು ಪತ್ರಿಕೋದ್ಯಮ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ,
ಮಂಗಳೂರು - ೫೭೪ ೧೯೯

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / November 2006 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.